# ಮೌಖಿಕ ಪರಂಪರೆ ಮತ್ತು ಚರಿತ್ರೆ

(ಕಥನಗೀತೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂಧ)

ಸಂಶೋಧಕ

ಇಸ್ಮಾಯಿಲ್ ಜಬೀರ್ ಬಾವಾಜಿ



ಮಾರ್ಗದರ್ಶಕರು

ಡಾ. ಮೊಗಳ್ಳಿ ಗಣೇಶ್

ಪ್ರವಾಚಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ






ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮ - ೦೯

# ಮೌಖಿಕ ಪರಂಪರೆ ಮತ್ತು ಚರಿತ್ರೆ

(ಕಥನಗೀತೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂಧ)

ಸಂಶೋಧಕ

**ಇಸ್ಮಾಯಿಲ್ ಜಬೀರ್ ಬಾವಾಜಿ**

ಮಾರ್ಗದರ್ಶಕರು

**ಡಾ. ಮೊಗಳ್ಳಿ ಗಣೇಶ್**

ಪ್ರವಾಚಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಜಾನಪದ ಅಧ್ಯಯನ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೦೮ - ೦೯

## ಮಾರ್ಗದರ್ಶಕರ ದೃಢೀಕರಣ ಪತ್ರ

ಇಸ್ಮಾಯಿಲ್ ಜಬೀರ್ ಬಾವಾಜಿ ಇವರು ಮೌಖಿಕ ಪರಂಪರೆ ಮತ್ತು ಚರಿತ್ರೆ (ಕಥನಗೀತೆಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧ ಇಡಿಯಾಗಿ, ಬಿಡಿಯಾಗಿ ಎಲ್ಲಿಯೂ ಈ ಮೊದಲು ಪ್ರಕಟಗೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ.ಮೊಗಳ್ಳಿ ಗಣೇಶ್
ಮಾರ್ಗದರ್ಶಕರು

# ಘೋಷಣಾ ಪತ್ರ

ಮೌಖಿಕ ಪರಂಪರೆ ಮತ್ತು ಚರಿತ್ರೆ (ಕಥನಗೀತೆಗಳನ್ನು ಅನುಲಕ್ಷಿಸಿ)ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲು ಡಾ.ಮೊಗಳ್ಳಿ ಗಣೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ, ಇತರ ಯಾವುದೇ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ :

ಇಸ್ಮಾಯಿಲ್ ಜಬೀರ್ ಬಾವಾಜಿ

ಸ್ಥಳ : ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ



ಅಧ್ಯಾಯ - ಒಂದು ೦೧-೧೬
ಅಧ್ಯಯನದ ಪ್ರವೇಶ, ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ

ಅಧ್ಯಾಯ - ಎರಡು ೧೭-೪೧
ಮೌಖಿಕ ಚರಿತ್ರೆಯ ತಾತ್ವಿಕ ನೆಲೆ

ಅಧ್ಯಾಯ - ಮೂರು ೪೨-೮೮
ಪರಂಪರೆ ಮತ್ತು ಚಾರಿತ್ರಿಕ ಪ್ರಜ್ಞೆ
೩.೧. ಮೌಖಿಕ ಪರಂಪರೆ ಮತ್ತು ಲಿಖಿತ ಪರಂಪರೆ
೩.೨. ಸ್ಥಳೀಯ ಕಥನ ಪರಂಪರೆ ಮತ್ತು ವಿಶ್ವಾತ್ಮಕ ಕಥನ ಪರಂಪರೆ

ಅಧ್ಯಾಯ - ನಾಲ್ಕು ೮೯-೧೯೧
ಚರಿತ್ರೆ ರಚನೆ ಮತ್ತು ಕಥನ ಗೀತೆಗಳು
೪.೧. ಸಾಮಾಜಿಕ ಸಂಬಂಧಗಳು
೪.೨. ಆರ್ಥಿಕ ಸಂಬಂಧಗಳು
೪.೩. ಸಾಂಸ್ಕೃತಿಕ ಸಂಬಂಧಗಳು

ಅಧ್ಯಾಯ - ಐದು ೧೯೨-೨೦೪
ಕಥನ ಗೀತೆಗಳು ಮತ್ತು ಸಮಕಾಲೀನ ಸಮಾಜ
೪.೧. ವರ್ತಮಾನದ ನಿರೂಪಣೆಗಳು ಮತ್ತು ತಳೆದ ನಿಲುವುಗಳು

ಅಧ್ಯಾಯ - ಆರು ೨೦೫-೨೦೮
ಸಮಾರೋಪ

ಅನುಬಂಧ ೨೦೯

ಆಕರ ಗ್ರಂಥಗಳು ೨೧೦-೨೧೫

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ

ಜಾನಪದ ಅಧ್ಯಯನದ ಸ್ವರೂಪ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬರುತ್ತಿದೆ. ಈ ಬದಲಾದ ಆಲೋಚನಾ ಕ್ರಮಗಳು ಬಹುಶಿಸ್ತೀಯ ನೆಲೆಯನ್ನು ಪಡೆಯುತ್ತಿವೆ. ಇನ್ನೂ ಕೂಡ ವಿದ್ವಾಂಸರ ಬರೆಹಗಳು ಸಂಪುಟ ರೂಪದಲ್ಲಿ ಪುನರ್ ಮುದ್ರಣಗೊಳ್ಳುತ್ತಿವೆ. ಇದು ಒಟ್ಟಾರೆಯಾಗಿ ಜಾನಪದ ಅಧ್ಯಯನದ ಗತಿ-ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಈ ಮೂಲಕ ವಿದ್ವಾಂಸರುಗಳ ಧೋರಣೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಅಕಾಡೆಮಿಗಳಿಂದ ಇತ್ತೀಚೆಗೆ ಇಡಿಯಾದ ಬರೆಹಗಳ ಸಂಪುಟಗಳು ಬರುತ್ತಿರುವುದು ಒಂದು ರೀತಿಯಲ್ಲಿ ಆಶಾದಾಯಕ ಬೆಳವಣಿಗೆ, ಈ ರೀತಿ ಒಂದೆಡೆ ಸಿಗುವುದರಿಂದ ಅವುಗಳ ವಿಶ್ಲೇಷಣೆ, ವಿಮರ್ಶೆಗೆ ಬಹಳ ಅನುಕೂಲವಾಗುತ್ತದೆ.

ಬಹು ಆಮಾಮಗಳ ಸಾಂಸ್ಕೃತಿಕ ದೃಷ್ಟಿಕೋನಗಳ ಜೊತೆ ಜೊತೆಯಲ್ಲಿಯೇ ದೇಶೀ ಸಂಶೋಧನಾ ವಿಧಾನವು ಇಂದು ಅತೀ ತುರ್ತಾಗಿ ಆಗಬೇಕಿದೆ. ಅಂದರೆ, ಪ್ರತಿಯೊಂದು ಅಧ್ಯಯನವೂ ಸಹ ಅದರದ್ದೇ ಆದ ಒಂದು ವಿಶಿಷ್ಟವಾದ ವಿಧಾನವನ್ನು ರೂಪಿಸಬೇಕಾಗುತ್ತದೆ. ಒಬ್ಬ ಸಂಶೋಧಕನಿಗೆ ಎದುರಾಗುವ ಸಮಸ್ಯೆಗಳನ್ನು ಕುರಿತು ಆತ ಇವುಗಳಿಗೆ ಉತ್ತರ ಕಂಡುಕೊಳ್ಳುವ ನಿಟ್ಟಿನಲ್ಲಿ ತನ್ನ ಅಧ್ಯಯನ ಒಯ್ಯುತ್ತಿದ್ದರೆ ಆತನ ಧ್ಯಾನಸ್ಥ ಸ್ಥಿತಿಯನ್ನು ಗುತಿಸಬಹುದು. ಕಾಲ ಬದಲಾದಂತೆ ಅಧ್ಯಯನಗಳ ದೃಷ್ಟಿ ಧೋರಣೆಗಳು ಬದಲಾಗುತ್ತಿರುತ್ತವೆ. ವರ್ತಮಾನದ ಅರಿವು ನಮ್ಮಲ್ಲಿ ಮೂಡ ಬೇಕಾದರೆ ಭೂತ ಗತದ ಬಗೆಗೆ ನಮಗೆ ಕಲ್ಪನೆ ಇರಲೇಬೇಕು. ಗತವನ್ನು ಪರಿಗಣಿಸದೆ ನಾವು ವರ್ತಮಾನವನ್ನು ಕಟ್ಟಲು ಸಾಧ್ಯವಾಗುವುದೇ ಇಲ್ಲ.

ಕನ್ನಡ ಜನಪದ ಸಾಹಿತ್ಯದಲ್ಲಿ ಲಾವಣಿ ಒಂದು ವಿಶಿಷ್ಟ ಪರಂಪರೆಯಲ್ಲಿ ಬೆಳೆದು ಬಂದ ಗೀತ ಸಂಪ್ರದಾಯವನ್ನು ಸೂಚಿಸುವ ಪ್ರಕಾರವಾಗಿದೆ. ಜಾನಪದದ ಉಳಿದೆಲ್ಲ ಪ್ರಕಾರಗಳಂತೆ ಇದೂ ಕೂಡ ಹಾಡಿನ ಸಂಪ್ರದಾಯವಾಗಿದೆ. ಜನಪದರ ಬದುಕಿನಲ್ಲಿ ಲಾವಣಿ ಪ್ರಕಾರವು ವಿಶಿಷ್ಟ ಛಾಪನ್ನು ಮೂಡಿಸಿದೆ.

ಇದರ ಗತಿ, ಛಂದಸ್ಸು, ಮತ್ತು ಕಥಾ ನಿರೂಪಣೆಯಲ್ಲಿರುವ ವಿಶಿಷ್ಟತೆಗಳಿಂದಲೇ ಹೆಚ್ಚು ಜನಪ್ರಿಯ, ಮತ್ತು ಮನ್ನಣೆಗಳಿಸಿಕೊಂಡ ಪ್ರಕಾರವಾಗಿದೆ. ಹಲವಾರು ವಿಷಯಗಳ ಕುರಿತ ಅಂದರೆ, ಪುರಾಣ, ಪವಾಡ, ಚರಿತ್ರೆ, ಪರಾಕ್ರಮ, ಶೌರ್ಯ, ತ್ಯಾಗ, ಬಲಿದಾನ ಮೊದಲಾದ ಘಟನಾವಳಿಗಳನ್ನುಳ್ಳ ಹಾಡಿನ ರೂಪದ ಕಥಾನಕಗಳನ್ನು ಜನಪದ ಕಥನಗೀತೆಗಳೆಂದು ಕರೆಯಲಾಗಿದೆ. ಇವು ಸಮಾಜಲ್ಲಿರುವ ವಾಸ್ತವಾಂಶಗಳನ್ನು ಪ್ರಧಾನ ವಸ್ತುವನ್ನು ಉಳ್ಳವಾಗಿರುತ್ತವೆ. ಯಾವುದೇ ಒಂದು ಘಟನೆಯ ಕುರಿತಾದ ವಾಸ್ತವಿಕ ಅಂಶಗಳನ್ನು ಮನೋಜ್ಞವಾಗಿ ಕಥನ ಗೀತೆಗಳು ಹಿಡಿದಿಡುತ್ತವೆ. ಕನ್ನಡ ಜಾನಪದ ಸಂದರ್ಭದಲ್ಲಿ ಜನಪದ ಗದ್ಯ ಕಥೆಗಳಿಗಿರುವಷ್ಟೇ ಪ್ರಾಶಸ್ತ್ಯ ಈ ಕಥನಗೀತೆಗಳಿಗಿದೆ. ಈ ಜನಪದ ಗದ್ಯಕಥೆಗಳನ್ನು ನಿರೂಪಿಸುವಲ್ಲಿ ಯಾವುದೇ ರೀತಿಯ ಸಮಯ, ಸಂದರ್ಭ, ಸನ್ನಿವೇಶ, ಪರಿಸರ, ಸ್ಥಳ ಇವುಗಳ ಅವಶ್ಯಕತೆಯಿಲ್ಲ. ಇವುಗಳನ್ನು ಯಾರಾದರೂ ಹೇಳಬಹುದು, ಯಾರಾದರೂ ಕೇಳಬಹುದು; ಆದರೆ ಕಥನ ಗೀತೆಗಳನ್ನು ನಿರೂಪಿಸುವಾಗ ಒಂದು ನಿರ್ದಿಷ್ಟ ಸಮಯ, ಸಂದರ್ಭ ಸನ್ನಿವೇಶ, ಗಾಯಕ ವರ್ಗ, ಹಿಮ್ಮೇಳ, ಮುಮ್ಮೇಳ ವಾದ್ಯ ಸಲಕರಣೆಗಳು, ಶ್ರೋತೃ ವರ್ಗದ ಅವಶ್ಯಕತೆಯಿದೆ. ಹೀಗೆ ಕಥನಗೀತೆಗಳು ನಿರೂಪಣೆಯ ಸಂದರ್ಭದಲ್ಲಿ ಕಲಾತ್ಮಕವಾದ ಆವರಣವೊಂದನ್ನು ನಿರ್ಮಿಸಿಕೊಳ್ಳುತ್ತವೆ. ಈ ಕಾರಣಕ್ಕಾಗಿ ಕಥನಗೀತೆಗಳು ವಸ್ತು, ಶೈಲಿ, ನಿರೂಪಣಾ ಧಾಟಿ, ಲಯ, ಗತ್ತು, ಗೇಯತೆ ಮುಂತಾದ ಅಂಶಗಳಿಂದ ಕೂಡಿದ ಒಂದು ಬಗೆಯ ಸಂಕೀರ್ಣ ಕಲಾಸೃಷ್ಟಿಯೆನಿಸುತ್ತವೆ.

ಜನಪದ ಸಾಹಿತ್ಯದ ಈ ಪ್ರಕಾರಗಳನ್ನು ಕುರಿತಾಗಿ ವಿದ್ವಾಂಸರಲ್ಲಿ ಅನೇಕ ರೀತಿಯ ಭಿನ್ನತೆಗಳಿವೆ. ಇದಕ್ಕೆ ಮೂಲ ಕಾರಣವೆಂದರೆ ಇಂಗ್ಲೀಷಿನ 'ಬ್ಯಾಲೆಡ್' ಎಂಬುದಕ್ಕೆ ಸಂವಾದಿಯಾಗಿ ಬಳಸಿರುವುದು. "ಕಥನ ರೂಪದ ಬ್ಯಾಲೆಡ್‌ನ್ನು ಲಾವಣಿ ಎಂದು ಕರೆಯುವುದಾದರೆ, ಕನ್ನಡದ ಕಥನಗೀತೆಗಳೆಲ್ಲವನ್ನು ಲಾವಣಿ ಎಂದು ಕರೆಯಬೇಕಾಗುತ್ತದೆ ಈ ಅರ್ಥದಲ್ಲಿ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಕಥನ ರೂಪದ ಗೀತ ಸಾಹಿತ್ಯವೆಲ್ಲವೂ ಲಾವಣಿಗಳಾಗಿ ಬಿಡುತ್ತವೆ. ಆದರೆ ಲಾವಣಿಗಳು ಸಾಮಾನ್ಯವಾಗಿ ಹಾಡುವ ಉದ್ದೇಶದ ಹಿನ್ನಲೆಯಲ್ಲಿ ಹುಟ್ಟಿಕೊಂಡ ಗೀತ ರೂಪಕಗಳು. ಈ ಹಾಡಿನ ರೂಪದ ಎಲ್ಲಾ ಕಥೆಗಳನ್ನು ಲಾವಣಿ ಎಂದು ಕರೆಯಲಾಗದು. ಈ ಲಾವಣಿಗಳಲ್ಲಿ ಕೆಲವು ಕಥಾನಕ ಲಾವಣಿಗಳಿವೆಯೇ ಹೊರತು ಆ ಕಥನ ಕಾವ್ಯಗಳೆಲ್ಲವೂ ಲಾವಣಿಗಳಲ್ಲವೆಂಬುದು ಸ್ಪಷ್ಟ. ಬಹುಶಃ ಇಂಗ್ಲೀಷಿನ ಬ್ಯಾಲೆಡ್ ಕಥಾರೂಪದ ಹಾಡಾಗಿರುವುದರಿಂದಲೇ ಅದನ್ನು ಲಾವಣಿ ಎಂದು ತಪ್ಪಾಗಿ ಗ್ರಹಿಸಲಾಗಿದೆ" (ಡಾ.ಪಿ.ಕೆ.ಖಂಡೋಬ, ಜನಪದ ಕಥನ ಗೀತೆಗಳು, ಪು:ix) ಈ ಬ್ಯಾಲೆಡ್‌ನ ಪರಿಸರ, ಅದರ ಹುಟ್ಟು ಮುಂತಾದ ಅಂಶಗಳನ್ನು ಗಮನಿಸಿದರೆ ಲಾವಣಿಗೆ ಸಂವಾದಿಯಾಗಿ ಬಳಸುವುದರಲ್ಲಿ ಅರ್ಥವಿಲ್ಲವೆನಿಸುತ್ತದೆ. ಅವುಗಳಲ್ಲಿ ಸಾಕಷ್ಟು ಭಿನ್ನತೆಗಳಿರುವುದೇ ಇದಕ್ಕೆ ಕಾರಣ. ಲಾವಣಿಗಳಲ್ಲಿಯೇ ಉತ್ತರ ಕರ್ನಾಟಕದ ಲಾವಣಿ ಸಂಪ್ರದಾಯಕ್ಕೂ, ದಕ್ಷಿಣ ಕರ್ನಾಟಕದ ಲಾವಣಿ ಸಂಪ್ರದಾಯಕ್ಕೂ ಸಾಕಷ್ಟು ವ್ಯತ್ಯಾಸಗಳಿರುವುದನ್ನು

ಕಾಣಬಹುದು. ಉತ್ತರ ಕರ್ನಾಟಕದ ಲಾವಣಿಗಳಲ್ಲಿ ಮರಾಠಿ ಮತ್ತು ಉರ್ದುವಿನ ಪ್ರಭಾವ ಯಥೇಚ್ಛವಾಗಿ ಆಗಿರುವುದನ್ನು ಕಾಣಬಹುದಾಗಿದೆ. ಈ Ballad ಎನ್ನುವ ಪದ ಲ್ಯಾಟಿನ್ನಿನಿಂದ ಬಂದದ್ದು. ಇಟಾಲಿಯನ್‌ನಲ್ಲಿ Ballata ಎಂಬ ಪದವಿದೆ. ಇದರರ್ಥ ಭಾವಗೀತಾತ್ಮಕವಾದ ನೃತ್ಯಸಂಗೀತ. ಈ Ballad ಗೆ ಸಂಬಂಧಿಸಿದಂತೆ ತಜ್ಞರಲ್ಲಿಯೇ ಒಮ್ಮತದ ಅಭಿಪ್ರಾಯವಿಲ್ಲದಿರುವುದನ್ನು ಕಾಣುತ್ತೇವೆ.

ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿಯಲ್ಲಿ "ಚಿಕ್ಕ ಚಿಕ್ಕ ಪದ್ಯಗಳಲ್ಲಿ ಜನಪ್ರಿಯ ಕಥೆಯನ್ನೊಳಗೊಂಡ ಸರಳವೂ, ಶಕ್ತಿಯುತವೂ ಆದ ಕಾವ್ಯವೇ ಬ್ಯಾಲೆಡ್" ಎಂದು ಹೇಳಲಾಗಿದೆ. ಎ.ಎಚ್.ಕ್ರಾಪ್ಪೆ ಉಗಮ ಮತ್ತು ಪ್ರಸಾರಗಳ ದೃಷ್ಟಿಯಿಂದ ಜಾನಪದೀಯವಾಗಿಯೂ, ಮೌಖಿಕ ಪದ್ಧತಿಗನುಗುಣವಾಗಿಯೂ ಇರುವ ಭಾವಾತ್ಮಕ ಮನೋಧರ್ಮದ ಮಾಧ್ಯಮದ ಮೂಲಕ ಅಭಿವ್ಯಕ್ತಗೊಳ್ಳುವ, ಶೌರ್ಯಾತ್ಮಕವೂ, ಸಾಹಸಾತ್ಮಕವೂ ಆದ ಘಟನೆಗಳನ್ನು ವಿವರಿಸುವ ಸರಳ ಕಥನ ಕಾವ್ಯವೇ ಜನಪ್ರಿಯ ಬ್ಯಾಲೆಡ್" (The Science of Falklore, P: 173) ಎಂದು ಹೇಳಿದರೆ "ಕವಿಯ ಅಥವಾ ಹಾಡುಗಾರನ ವ್ಯಕ್ತಿತ್ವ ವಿಮುಕ್ತವಾದ, ಸಂಗೀತಕ್ಕೊಳಪಟ್ಟ, ಸರಳ ವಸ್ತು ಸಂವಿಧಾನವುಳ್ಳ, ಸುಲಭ ಛಂದಸ್ಸಿನ ಹಲವು ಪದ್ಯಗಳುಳ್ಳ ಚಿಕ್ಕ ಕಥನ ಕಾವ್ಯವೇ ಬ್ಯಾಲೆಡ್" ಎಂದು ಜಿ.ಎಲ್.ಕಿತ್ರೆಜ್ ಅಭಿಪ್ರಾಯ ಪಡುತ್ತಾನೆ. (The Balled Revival, P.7) ಒಂದೇ ಒಂದು ಪ್ರಮುಖ ಘಟನೆಯ ಸುತ್ತ ಕೇಂದ್ರೀಕರಣಗೊಂಡ ಕತೆ ಇರಬೇಕು. ಸುಂದರವಾದ ಪದಗಳೆಷ್ಟು ಮುಖ್ಯವೋ, ರಾಗಮಾಧುರ್ಯವೂ ಅಷ್ಟೇ ಮುಖ್ಯ ಎಂದು ಜಿ.ಎಚ್.ಜೆರಾಲ್ಡ್ (The Ballad of Tradition, P:83) ಹೇಳುತ್ತಾರೆ. ಜಿ ಮಾಲ್ಕಮ್ ಲಾಸ್ The Stories told in Songs: The Ballads of Amarica ಎಂಬ ತಮ್ಮ ಲೇಖನದಲ್ಲಿ "ಅದೊಂದು ಜಾನಪದ ಕಥನ ಗೀತೆಯ ಕಥಾಂಶ ಇಲ್ಲಿ ಮುಖ್ಯ, ಮೊದಲಿಂದ ಕೊನೆಯ ತನಕ ಕತೆ ಹೇಳದ ಗೀತೆಯನ್ನು ಬ್ಯಾಲೆಡ್ ಎಂದು ಕರೆಯಲಾರೆ. ಕತೆ ಹೇಳುವ, ಆದರೆ ಹಾಡಲು ಬಾರದ ಕಾವ್ಯವನ್ನು ಸಹ ಬ್ಯಾಲೆಡ್ ಎಂದು ಹೆಸರಿಸಲಾರೆ. ಬೇರೆ ರೀತಿಯಲ್ಲಿಯೂ ಆ ಪದವನ್ನು ಸೀಮಿತಗೊಳಿಸುತ್ತೇನೆ. ಕಾವ್ಯದಲ್ಲಿ ಸಾಂಪ್ರದಾಯಿಕ ಜೀವನದ ನಿರೂಪಣೆಯಿರಬೇಕು. ಅಂದರೆ, ಅದು ಪ್ರಧಾನವಾಗಿ ಜನತೆಯ ಸ್ಮೃತಿಕೋಶದಲ್ಲಿ ಜೀವಂತವಾಗಿರಬೇಕು; ಗಾಯಕನಿಂದ ಗಾಯಕನಿಗೆ ಮೌಖಿಕವಾಗಿ ಹರಡಬೇಕು" (American Folk-lore : Ed.by Tristram Coffin, III. 93) ಎಂದು ವಿವರಿಸುತ್ತಾರೆ. ಒಟ್ಟಾರೆಯಾಗಿ ಹೇಳುವುದಾದರೆ "ಕಥನಾಂಶ, ಗೇಯಾಂಶ, ಜಾನಪದೀಯವಾದ ವಸ್ತು, ಶೈಲಿ, ರೂಪರಚನೆ, ಏಕ ಘಟನಾತ್ಮಕತೆ, ವಸ್ತುನಿಷ್ಠೆ, ಘಟನೆ ಮತ್ತು ಸಂಭಾಷಣೆಗಳ ಮೂಲಕದ ಕ್ರಿಯಾತ್ಮಕತೆ" (Standard Dictionary of Mythology and Legend) ಎಂಬುದು ಗೊತ್ತಾಗುತ್ತದೆ. ಕಥನ ಗೀತೆ ಮತ್ತು ಲಾವಣಿ ಎರಡರಲ್ಲೂ ಕೆಲವು ಸಮಾನಾಂಶಗಳಿರುವುದರಿಂದ ಅವುಗಳ ಕುರಿತಾದ ಭಿನ್ನಾಭಿಪ್ರಾಯ ಎದ್ದಿರುವುದು ಸಹಜವೆನಿಸುತ್ತದೆ. ಕಥನ ಗೀತೆಗಳು ಕಾವ್ಯದ; ಖಂಡಕಾವ್ಯ, ಮಹಾಕಾವ್ಯದ ವಸ್ತುವನ್ನು ಪಡೆದಿರುವುದರಿಂದ ಅವು

ಲಾವಣಿಗಳಿಂದ ಭಿನ್ನವಾಗಿ ನಿಲ್ಲುತ್ತವೆ. "ಜನಪದ ಬದುಕಿನ ನೈಜತೆಯನ್ನು ಅವು ತುಂಬಾ ವಿಸ್ಮಯಕಾರಿಯಾಗಿ ಚಿತ್ರಿಸುತ್ತವೆ. ಆದ್ದರಿಂದ ಜನಪದ ಕಥನ ಕಾವ್ಯವನ್ನು ಒಟ್ಟಾರೆಯಾಗಿ ಕಥನ ಗೀತೆ, ಕಥನ ಲಾವಣಿ, ಖಂಡಕಾವ್ಯ, ಹಾಗೂ ಮಹಾಕಾವ್ಯವೆಂದು ವಿಭಾಗಿಸಿಕೊಳ್ಳುವುದು ಅತ್ಯಂತ ಸಮಂಜಸವಾಗಿದೆ." (ಡಾ.ಪಿ.ಕೆ.ಖಂಡೋಬ, ಜನಪದ ಕಥನ ಗೀತೆಗಳು, ಪು:ix)

ಜನಪದ ಕಥನ ಗೀತೆಗಳು, ಲಾವಣಿಗಳಿಗೆ ಸಂಬಂಧಿಸಿದಂತೆ ಕನ್ನಡ ಸಂದರ್ಭದಲ್ಲಂತೂ ಸಾಕಷ್ಟು ಜನ ಕೆಲಸಮಾಡಿದ್ದಾರೆ. ಅವರಲ್ಲಿ ಪ್ರಮುಖವಾದವರು ಡಾ.ಗದ್ದಿಗೆಮಠ, ಸಿಂಪಿ ಲಿಂಗಣ್ಣ, ಕಾಪಸೆ ರೇವಪ್ಪ, ಮಧುರ ಚನ್ನ, ಅರ್ಚಕರಂಗಸ್ವಾಮಿ, ಜೀಶಂಪ, ಕರಾಕೃ, ಎಸ್.ಕೆ.ಕರೀಂಖಾನ್, ಮತಿಘಟ್ಟ ಸಹೋದರರು, ಅಲ್ಲದೇ ಕೆ.ವಿ.ಸುಬ್ಬಣ್ಣ, ಎಲ್.ಆರ್.ಹೆಗಡೆ, ಎನ್.ಆರ್.ನಾಯಕ್, ಡಾ.ಗುಂಡ್ಮಿ ಐತಾಳ, ಡಾ.ಬಿ.ಬಿ.ಹೆಂಡಿ, ಎಚ್.ಎಲ್.ನಾಗೇಗೌಡ, ಡಿ.ಲಿಂಗಯ್ಯ, ಕ್ಯಾತನಹಳ್ಳಿ ರಾಮಣ್ಣ, ಎಂ.ಎಸ್.ಸುಂಕಾಪುರ, ಕೃಷ್ಣಮೂರ್ತಿ ಹನೂರ, ಎಂ.ಎಸ್.ಲಠ್ಠೆ, ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ, ನಿಂಗಣ್ಣ ಸಣ್ಣಕ್ಕಿ, ಡಾ.ಚಂದ್ರಶೇಖರ ಕಂಬಾರ, ಟಿ.ಎಸ್.ರಾಜಪ್ಪ, ಮುಂತಾದವರು ಪ್ರಮುಖರಾಗಿದ್ದಾರೆ.

ವಯೋಮಾನದ ದೃಷ್ಟಿಯಿಂದ ಮೊದಲು ಕಥೆ, ಆ ಮೇಲೆ ಕಥನ ಕಾವ್ಯ ಹುಟ್ಟಿರಬೇಕೆಂದು ತೋರುತ್ತದೆ. ಭಾವಗೀತೆಯಂತು ಕಥೆಗಿಂತ ಮೊದಲೇ ಇತ್ತು. ನಾಟಕವೂ ಪ್ರಾಯಶಃ ಕತೆಗಿಂತ ಮೊದಲೋ ಅಥವಾ ಅದರ ಜತೆಗೋ ಅವತರಿಸಿರಬೇಕೆಂದು ಊಹಿಸಬಹುದಾಗಿದೆ. ಈ ಮೂರು ಪ್ರಕಾರಗಳ ಕೆಲ ಕೆಲವು ಅಂಶಗಳನ್ನು ಮೈಗೂಡಿಸಿಕೊಂಡು ಕಥನ ಕಾವ್ಯ ಆವಿರ್ಭವಿಸಿರಬೇಕು. ಅಮೂರ್ತ ಸ್ವರೂಪದ ಭಾವಗೀತೆ ದುರವಗಾಹ್ಯವಾದದ್ದು; ಸಾಮಾನ್ಯಮತಿಗೆ ಕಷ್ಟ; ಕಥನ ಕಾವ್ಯದ ವಸ್ತು ಮುಷ್ಟಿಗ್ರಾಹ್ಯವಾದ್ದರಿಂದ ಯಾರು ಬೇಕಾದರೂ ಅರ್ಥ ಮಾಡಿಕೊಳ್ಳಬಹುದು. ಒಂದು ಕ್ಷಣದ ಭಾವ ಅಥವಾ ಅನುಭವ ಭಾವಗೀತೆಯ ಸಾಮಗ್ರಿಯಾಗುತ್ತದೆ; ಅದು ಕಾಲದೇಶಾತೀತ, ಅಂದರೆ ಅದಕ್ಕೆ ಕಾಲದ ಪ್ರಜ್ಞೆಯಿರುವುದಿಲ್ಲ; ಕ್ರಿಯಾತ್ಮಕವಾದ ಘಟನೆಗಳು ಕಥನ ಕಾವ್ಯದ ಗ್ರಾಸ; ಅದು ಕಾಲದೇಶ ನಿಬದ್ಧವಾದದ್ದು, ಅಂದರೆ ಅದರ ಕ್ರಿಯೆ ಯಾವುದೋ ದೇಶದಲ್ಲಿ ಎರಡು ಕಾಲಗಳ ಗಡಿಯೊಳಗೆ ನಡೆಯುವಂಥದು. (ದೆ.ಜವರೇಗೌಡ, ಜಾನಪದ ಅಧ್ಯಯನ, ಪು:೧೩೩-೧೩೪) ಕಥನ ಗೀತೆಗಳು ಯಾವುದೇ ಮೇರೆಗಳಿಲ್ಲದೆ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಹಿಂದಿ ಭಾಷೆಯಲ್ಲಿ ಕಥನಾಕಾವ್ಯ ಅಥವಾ ಬ್ಯಾಲೆಡ್ಡುಗಳಿಗೆ ಸಂವಾದಿಯಾಗಿ ಲೋಕಗಾಥಾ ಎಂಬ ಪದವನ್ನು ಬಳಸುತ್ತಾರೆ. ಅವರ ಪ್ರಕಾರ ಲೋಕಗಾಥಾಗಳ ಲಕ್ಷಣಗಳಿವು: ಅಜ್ಞಾತ ಕರ್ತೃತ್ವ, ಮೂಲಪಾಠದ ಅಭಾವ,ಸಂಗೀತ ನೃತ್ಯಗಳ ಸಾಹಾಚರ್ಯ, ಸ್ಥಳೀಯ ಪ್ರಭಾವ ಮುದ್ರೆ, ಉಪದೇಶ ಪ್ರವೃತ್ತಿಯ ಗೈರುಹಾಜರಿ, ಸಾಲಂಕೃತ ಶೈಲಿಯ ಅಭಾವ, ಕವಿ ವ್ಯಕ್ತಿತ್ವದ ಅಪ್ರಾಧಾನ್ಯ, ದೀರ್ಘತೆ, ಪಲ್ಲವಿಯ ಪುನರಾವರ್ತನೆ. (ರಾಹುಲ ಸಾಂಕೃತಾಯನ, ಹಿಂದೀ ಸಾಹಿತ್ಯಕ ಬೃಹತ್ ಇತಿಹಾಸ, ಪು:೫೬)ಇವುಗಳ ವಿವರಣೆಯ ನಂತರವೇ ಏನೆಲ್ಲಾ ವರ್ಗೀಕರಣ ಮಾಡಿದರೂ" ಗಾತ್ರವನ್ನು

ದೃಷ್ಟಿಯಲ್ಲಿಟ್ಟುಕೊಂಡು ಕಥನ ಕಾವ್ಯವನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದೆಂದು ತೋರುತ್ತದೆ. ಲಾವಣಿ ಕದನ ಗೀತೆ ಅಥವಾ ನೀಳ್ಗವನ, ಖಂಡಕಾವ್ಯ ಮತ್ತು ಮಹಾಕಾವ್ಯಗಳ ಚೌಕಟ್ಟಿನಲ್ಲಿ ಎಲ್ಲ ಕಥನ ಕಾವ್ಯಗಳನ್ನು ಅಳವಡಿಸುವುದು ಸಾಧ್ಯವಾಗುತ್ತದೆ. ಹೀಗೆ ಒಂದೇ ಚೌಕಟ್ಟಿನಲ್ಲಿ ಇವುಗಳನ್ನು ಅಳವಡಿಸಿದರೆ ಮತ್ತೆ ತೊಡಕನ್ನು ಸೃಷ್ಟಿಸಿದಂತಾಗುತ್ತದೆ. ಕಾರಣ ಇವುಗಳ ಲಕ್ಷಣಗಳು. ಮೂಲದಲ್ಲಿ ಇವೆಲ್ಲವುಗಳು ಯಾವುದೋ ಒಂದು ಕಥೆಯನ್ನು ಹೇಳುತ್ತವೆಯಾದರೂ ಇವುಗಳ ಸ್ವರೂಪ ಮಾತ್ರ ಭಿನ್ನವಾಗಿರುವುದನ್ನು ಕಾಣಬಹುದು. "ಸಾಂಪ್ರದಾಯಿಕ ಮತ್ತು ಅಲಂಕಾರಿಕ ಭಾಷೆಯಲ್ಲಿ ಅಸಾಧಾರಣ ವ್ಯಕ್ತಿಗಳ ಸಾಹಸ ಕೃತ್ಯಗಳನ್ನು ಕಥನ ರೂಪದಲ್ಲಿ ವರ್ಣಿಸಿದಾಗ ಜಾನಪದ ಮಹಾಕಾವ್ಯವಾಗುತ್ತದೆ."(Folk epic: J.onias (in Folklore & Folk life: Ed by Richard M. Darson) ಈ ಮಹಾಕಾವ್ಯದ ಸೃಷ್ಟಿಯು ಮೌಖಿಕ ಸಮಷ್ಟಿ ನೆಲೆಯಲ್ಲಿ, ಮೌಖಿಕ ಮಾಧ್ಯಮದ ಮೂಲಕ ಜರುಗುವ ಕ್ರಿಯೆಯಾಗಿದೆ. ಈ "ಮೌಖಿಕ ಮಹಾಕಾವ್ಯಗಳಲ್ಲಿ ಇತಿಹಾಸ, ಐತಿಹ್ಯ, ಮತ್ತು ಪುರಾಣ - ಈ ಮೂರೂ ಅಂಶಗಳು ಮುಪ್ಪುರಿಗೊಂಡಿರುತ್ತವೆ. ಹೀಗೆ ನಡೆಯಿತು ಎಂದು ತಿಳಿಸುವ ಇತಿಹಾಸ ತನ್ನಷ್ಟಕ್ಕೆ ತಾನು ಶುದ್ಧವಾಗಿರುತ್ತದೆ. ಆದರೆ ಒಬ್ಬ ವ್ಯಕ್ತಿ ಒಂದು ಜನಾಂಗದ ಶ್ರೇಯೋಭಿವೃದ್ಧಿಗಾಗಿ ಸೆಣಸಾಡಿದ್ದರೆ, ಒಂದು ಸಂಸ್ಕೃತಿಯ ರಕ್ಷಣೆಗಾಗಿ ಹೋರಾಡಿದ್ದರೆ ಅವನ ಬಗೆಗೆ ಜನತೆ ಗೌರವಾದರಗಳನ್ನು ಬೆಳೆಸಿಕೊಳ್ಳುವುದಲ್ಲದೆ ಕೃತಜ್ಞತೆಯನ್ನು ತೋರಿಸುವಾಗ ಅವನ ವ್ಯಕ್ತಿತ್ವವನ್ನು ಅ ಸಾಮಾನ್ಯತೆಯ ಮಟ್ಟಕ್ಕೇರಿಸಲು ಪ್ರಯತ್ನಿಸುತ್ತದೆ. ಜನಪದದ ಹೃದಯವನ್ನು ಸೂರೆಗೊಂಡ ಅವನ ಜೀವನ ವೃತ್ತಗಳ ಸುತ್ತ ದಂತಕಥೆಗಳು ಒಂದರ ಮೇಲೊಂದು ಕೂರುತ್ತಾ ಹೋಗುತ್ತವೆ. ಈ ಹಂತದಲ್ಲಿ ಇತಿಹಾಸ ತನ್ನ ಸ್ವರೂಪ ಮರೆಮಾಡಿಕೊಂಡು ಐತಿಹ್ಯದ ಮುಖವನ್ನು ತೋರಿಸಿಕೊಳ್ಳುತ್ತದೆ. ಐತಿಹ್ಯ ಅಥವಾ ಐತಿಹಾಸಿಕ ಸಂಗತಿಯಾಗಿರುವುದಲ್ಲದೆ ಬಹಳಷ್ಟು ಸಲ ಇತಿಹಾಸವನ್ನು ಮರೆಸಿ ಕೇವಲ ಕಾಲ್ಪನಿಕ ರೂಪವನ್ನು ಧರಿಸುವುದೂ ಉಂಟು. ಆದರೆ ಈ ಐತಿಹ್ಯಗಳ ನಾಯಕನ ಬಗೆಗಿಟ್ಟಿರುವ ಭಯ ಭಕ್ತಿಗಳು ವಿಕಾಸ ಹೊಂದುತ್ತಾ ಬಂದಂತೆಲ್ಲಾ ಆ ವ್ಯಕ್ತಿಯನ್ನು ದೈವತ್ವಕ್ಕೇರಿಸುವುದು ಸ್ವಾಭಾವಿಕ. ಈ ಹಂತದಲ್ಲಿ ಐತಿಹ್ಯ ಪವಿತ್ರಾವರಣವನ್ನು ಸೃಷ್ಟಿಸಿಕೊಂಡು ಪುರಾಣವಾಗಿ ಪರಿವರ್ತನೆ ಹೊಂದುತ್ತದೆ. ಇಲ್ಲಿನ ಪುರಾಣ ದೇವತೆ ಒಂದು ಕಾಲದಲ್ಲಿ ಐತಿಹಾಸಿಕ ವ್ಯಕ್ತಿಯಾಗಿದ್ದ ಎಂಬುದನ್ನು ಮರೆಯುವಂತಿಲ್ಲ. ಆದರೆ ಹೆಚ್ಚಿನ ಪುರಾಣಗಳಲ್ಲಿ ಐತಿಹಾಸಿಕ ಸಂಗತಿಗಳನ್ನು ಗುರುತಿಸುವುದು ಕಷ್ಟಸಾಧ್ಯ, ಕೆಲವೊಮ್ಮೆ ಪುರಾಣದಲ್ಲಿ ಹೇಳಿರುವ ವ್ಯಕ್ತಿ ಐತಿಹಾಸಿಕ ವ್ಯಕ್ತಿಯೇ ಅಲ್ಲವೇನೋ ಎನ್ನುವಷ್ಟರ ಮಟ್ಟಿಗೆ ಅವುಗಳ ಬೆಳವಣಿಗೆಯಾಗಿರುತ್ತದೆ. (ಡಾ.ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ಪು:೨) ಹೀಗೆ ಮಹಾಕಾವ್ಯಗಳು ಕಥನ ಗೀತೆಗಳಿಂದ ಭಿನ್ನವಾಗಿ ಗೇಯತೆ ಅಂಶ ಹೊಂದಿದ್ದರೂ ವಿಶಾಲ ವ್ಯಾಪ್ತಿಯನ್ನು ಹೊಂದಿರುತ್ತವೆ. ಇದನ್ನು 'ಮಹಾಕಥನ' ಎಂದು ಕರೆಯಬಹುದಾಗಿದೆ. "ಈ ಕಥಾನಕಗಳನ್ನು ಕಥಾಸರಣಿಗನುಗುಣವಾಗಿ ಒಂದು ಕ್ರಮದಲ್ಲಿ ವ್ಯವಸ್ಥಿತವಾಗಿ ಸಂಯೋಜಿಸಿ ಅದಕ್ಕೆ ಮಹಾಕಾವ್ಯದ ಆಕಾರವನ್ನು ತಂದುಕೊಡುವವರು ವಿದ್ವಾಂಸರೇ ಹೊರತು ಅವನ್ನು ಹಾಡುವ ಗಾಯಕರಲ್ಲ. ಈ ಕಥಾನಕಗಳನ್ನು ಹಾಡುವವರು ಒಬ್ಬಬ್ಬರಲ್ಲ; ಹಲವಾರು ಗಾಯಕರು

ಎಂದರೆ ಹಲವಾರು ಗಾಯಕರು ವಿಭಿನ್ನ ವೀರರಿಗೆ ಸಂಬಂಧಿಸಿದ ಕಥಾನಕಗಳಿಗೆ ಒಂದು ಸಂಬಂಧದ ಎಳೆಯನ್ನು ಜೋಡಿಸಿ ಅದನ್ನು ಒಂದು ಮಹಾಕಾವ್ಯವನ್ನಾಗಿ ರೂಪಿಸಿದರು ಎನ್ನಬಹುದು. ಇದು ಜನಪದ ಮಹಾಕಾವ್ಯ ರೂಪುಗೊಂಡ ಬಗೆ. ತಮ್ಮ ಜನರಲ್ಲಿ ಸ್ವಾಭಿಮಾನ, ದೇಶಾಭಿಮಾನಗಳನ್ನು ಉದ್ದೀಪಿಸುವ ದೃಷ್ಟಿಯಿಂದ, ತಮ್ಮ ಕೀಳರಿಮೆಯನ್ನು ಕಳೆದುಕೊಳ್ಳುವ ಕಾರಣದಿಂದ ಹಾಡುಗಾರರು ಉದ್ದೇಶ ಪೂರ್ವಕವಾಗಿಯೇ ಜನಪದ ಮಹಾಕಾವ್ಯಗಳನ್ನು ಹುಟ್ಟು ಹಾಕಿದರು ಎಂಬ ಅಭಿಪ್ರಾಯವೂ ಇದೆ. (ಡಂಡೆಸ್, ೧೯೮೫, ಹಿರಿಯಣ್ಣ ಉದ್ಧೃತ, ಪು:೨) ಈ ಅಭಿಪ್ರಾಯವನ್ನು ನೋಡಿದರೆ ಕಥನಗೀತೆಗಳು ಮಹಾಕಾವ್ಯಗಳಿಂದ ರೂಪುಗೊಂಡಂತಹ ಭಾಗಗಳು ಎಂಬ ವಿಚಾರಕ್ಕೆ ಪುಷ್ಟಿಕೊಡುವಂತಿದೆ. ಕಥನ ಗೀತೆಗಳಲ್ಲಿ ಹುದುಗಿರುವ ಮೌಲ್ಯಗಳೇ ಈ ರೀತಿಯ ಅಭಿಪ್ರಾಯಕ್ಕೆ ದಾರಿ ಮಾಡಿಕೊಟ್ಟಿವೆ. ಅದರಲ್ಲಿ ಪುರಾಣ, ಇತಿಹಾಸ, ನೀತಿ, ಯುದ್ಧ, ಸಾಹಸಗಳು, ಸಾಧುಗಳ ಜೀವನದ ಕುರಿತಾದ ಮಾಹಿತಿ ಹೀಗೆ ಎಲ್ಲಾ ರೀತಿಯ ಮೌಲ್ಯಗಳು ಅದರಲ್ಲಿ ಹುದುಗಿರುವುದರಿಂದ ಕಥನ ಗೀತೆಗಳು ಮಹಾಕಾವ್ಯಗಳಿಂದ ರೂಪುಗೊಂಡ ಭಾಗಗಳು ಎಂಬುದಕ್ಕೆ ಸಾಕ್ಷಿಯನ್ನೊದಗಿಸಿದಂತಾಗುತ್ತದೆ.

ಕನ್ನಡದ ಲಾವಣಿಗಳನ್ನು ಒಟ್ಟಾರೆ ನೋಡಿದಾಗ ಕೆಲವು ವಿಶಿಷ್ಟ ಲಕ್ಷಣಗಳು ಉಬ್ಬಿಕಾಣುತ್ತವೆ. ಬ್ಯಾಲೆಡ್ಸ್‌ಗಳಂತೆ ಇಲ್ಲಿ ಕುಣಿತ ಕಡ್ಡಾಯವಲ್ಲ. ಗೇಯತೆ ಅನಿವಾರ್ಯ, ಛಂದೋ ವೈವಿಧ್ಯ ಇಲ್ಲಿಯ ಹೆಚ್ಚುಗಾರಿಕೆ. ಒಂದೇ ಲಾವಣಿಯನ್ನು ಬೇರೆ ಬೇರೆ ರೀತಿಯಾಗಿ ಹಾಡಬಹುದು. ಕಥೆ ಹಠಾತ್ತನೆ ಪ್ರಾರಂಭವಾಗುತ್ತದೆ. ವರ್ಣನೆಗಳ ಭಾರವಿಲ್ಲ. ಸಾಮಾನ್ಯವಾಗಿ ಘಟನೆಗಳು ಹೆಚ್ಚಿಲ್ಲದೆ, ಕ್ರಿಯೆ ವೇಗವಾಗಿ ಗುರಿಯ ಕಡೆ ಸಾಗುತ್ತದೆ. ನಾಟಕೀಯತೆಯಿಂದ ಲಾವಣಿಗೆ ಕಳೆ ಕಟ್ಟುತ್ತದೆ. ಸಾರ ಸಂಗ್ರಹಣೆ ಮತ್ತು ಸಂಕ್ಷಿಪ್ತತೆ ಸಾಮಾನ್ಯ ನಿಯಮಗಳು. ಶೃಂಗಾರ ವೀರ ಅದ್ಭುತ ಪ್ರಧಾನ ರಸಗಳು. ವಸ್ತುವಿನ ಆಯ್ಕೆಯಲ್ಲಿ ನಿರ್ಬಂಧವಿಲ್ಲ. ಭಾಷೆ ಸಾಮಾನ್ಯವಾಗಿ ದೇಶಿ. ಅವನ್ನು ನಿಂತಲ್ಲಿ ಕುಳಿತಲ್ಲಿ ಹಾಡಬಹುದು. ಲಘು ಲಾವಣಿಗಳಲ್ಲಿ ಕಥಾಂಶವೂ ಕಡಿಮೆ. ಇಂದಿರಾಗಾಂಧಿಯವರ ಆಳ್ವಿಕೆಯ ಪ್ರಶಂಸೆಯಲ್ಲಿ ಕಥೆಯಿರುವುದಿಲ್ಲ. ಅವರ ಸಿದ್ಧಿಗಳ ಪಟ್ಟಿಯಿರುತ್ತದೆ. ಅವುಗಳಲ್ಲಿ ಸಾಹಿತ್ಯಾಂಶ ಸೊನ್ನೆ ಎಂಬುದು ಸತ್ಯ. ವಸ್ತುವನ್ನು ದೃಷ್ಟಿಯಲ್ಲಿಟ್ಟುಕೊಂಡು ದೇವುಡು ಅವರು ಲಾವಣಿಗಳನ್ನು ಐದು ಪಂಗಡಗಳಾಗಿ ವಿಂಗಡಿಸಿದ್ದಾರೆ. ಐತಿಹಾಸಿಕ ಲಾವಣಿಗಳು, ಸ್ತುತಿಯ ಲಾವಣಿಗಳು, ಸವಾಲ್ ಲಾವಣಿಗಳು, ರಂಗುಲಾವಣಿಗಳು, ವೇದಾಂತ ಲಾವಣಿಗಳು. ಇದೆಲ್ಲ ಗಮನಿಸಿದರೆ “ನಮ್ಮಲ್ಲಿ ಲಾವಣಿ ಪ್ರಕಾರ ಮಹಾರಾಷ್ಟ್ರದಿಂದ ಬಂದುದು ಎಂಬುದನ್ನು ವಿದ್ವಾಂಸರು ಅಲ್ಲಗಳೆದಿಲ್ಲ. ಮಹಾರಾಷ್ಟ್ರದ ಶಾಹಿರಿ ಕಾವ್ಯದ (೧೯೫೦-೧೮೧೮)ಪ್ರಮುಖವಾದ ಎರಡು ಪ್ರಕಾರಗಳು; ವೀರ ಕಾವ್ಯಗಳಾದ ಪೋವಾಡ ಮತ್ತು ಶೃಂಗಾರ ಕಾವ್ಯಗಳಾದ ಲಾವಣಿಗಳು ಈ ಪ್ರಕಾರ ಹಳೆಯ ಉದಾಹರಣೆಗಳು ಜೀವನ ಸಂಗೀತದಲ್ಲಿ ದೊರೆಯುತ್ತವೆ. ಪೋವಾಡಕ್ಕೆ ಭೀಷ್ಮಪರ್ವ, ವತ್ಸಲಾಹರಣ ಉದಾಹರಣೆಗಳಾದರೆ, ಲಾವಣಿಗೆ ಸಂಪಿಗೆ ತೆನಿಯಂಥ ಹುಡುಗ, ಅಸಲಜಾತ ಹೆಣ್ಣು, ಚಂದ್ರುಣೆ, ಗಿಡ್ಡಪೋರಿ, ಕರಿಹುಡುಗಿ, ಮುಂತಾದವು ಉದಾಹರಣೆಗಳಾಗಿವೆ. ಮಹಾರಾಷ್ಟ್ರದಲ್ಲಿ ಶಾಹಿರಿ ಕಾವ್ಯ (೧೯೫೦-೧೮೧೮) ರಾಷ್ಟ್ರೀಯ ಮನೋಧರ್ಮದ ಹಿನ್ನೆಲೆಯಲ್ಲಿಯೇ ಬೆಳೆದು ಬಂದಂತಹುದು.

ಅದರಂತೆ ಕನ್ನಡದಲ್ಲೂ ಕೂಡ 'ಲಾವಣಿ ಸಾಹಿತ್ಯ' ಭಾರತೀಯ ನವೋದಯ ಸಂದರ್ಭದಲ್ಲಿ ಹುಟ್ಟಿ ಬಂದುದು. ಮುಖ್ಯವಾಗಿ ನಮ್ಮ ದಾಸ್ಯ ಮತ್ತು ಬಂಧನದ ವಿರುದ್ಧ ಬಂಡೆದ್ದ ಸಂಗತಿಗಳನ್ನು ಕನ್ನಡ ಜನಪದ ಸಾಹಿತ್ಯದಲ್ಲಿ ಕೇವಲ ಲಾವಣಿ ಪ್ರಕಾರದಲ್ಲೇ ಪ್ರಮುಖವಾಗಿ ದಾಖಲಾಗುತ್ತಾ ಬಂದಿದೆ. ಫ್ಲೀಟರು ಸಂಗ್ರಹಿಸಿದ ಲಾವಣಿಗಳನ್ನು ಗಮನಿಸಿದಾಗ, 'ಹುಲಕುಂದ ಶಿವಲಿಂಗಸ್ವಾಮಿ ರಚಿತ ಕನ್ನಡ ಗೀಗೀ ಪದಗಳು' (೧೯೮೫), 'ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ' (೧೯೭೫) ಈ ಕೃತಿಗಳನ್ನು ನೋಡಿದಾಗ ಈ ವಿಷಯ ನಮಗೆ ಮನದಟ್ಟಾಗುತ್ತದೆ" (ಡಾ.ವೀರಣ್ಣ ದಂಡೆ, ದೇಸೀದೃಷ್ಟಿ, ಪು:೧೬) ಜೀವನ ಸಂಗೀತದಂತಹ ಕೃತಿಗಳನ್ನು ಮೊದಲ ಬಾರಿಗೆ ಹಲಸಂಗಿ ಗೆಳೆಯರು ಕೊಟ್ಟಿರುವುದು ಲಾವಣಿಸಾಹಿತ್ಯಕ್ಕೊಂದು ವಿಶೇಷ ಮತ್ತು ವಿಶಿಷ್ಟ ಕೊಡುಗೆ. ಹೆಂಗಸರು ಹಾಡುವ ಹಾಡುಗಳೆಂದು ಮೊದಲ ಬಾರಿಗೆ ಪ್ರಕಟಿಸಿ, ನಂತರ ಗಂಡಸರ ಹಾಡುಗಳೆಂದು ವಿಭಾಗ ಮಾಡಿ ಅವುಗಳನ್ನು "ಜೀವನ ಸಂಗೀತ" ಎಂಬ ಕೃತಿಯ ಮೂಲಕ ೧೯೩೩ರಲ್ಲಿ ಪ್ರಕಟಿಸಿದರು. ಅಲ್ಲಿಂದ ಇಲ್ಲಿಯ ತನಕ ಲಾವಣಿ ಸಾಹಿತ್ಯ ಅಧ್ಯಯನದಲ್ಲಿ ಹಲವಾರು ರೀತಿಯ ಬದಲಾವಣೆಗಳೊಂದಿಗೆ ಅಧ್ಯಯನ ಮಾಡಿಕೊಂಡು ಬರಲಾಗಿದೆ.

**ಇದುವರೆಗೆ ನೆಡೆದ ಅಧ್ಯಯನಗಳ ಸಮೀಕ್ಷೆ**

ಜಾನಪದ ಅಧ್ಯಯನವು ಇಂದು ಹಿಂದಿಗಿಂತಲೂ ಹೆಚ್ಚು ಸೈದ್ಧಾಂತಿಕವಾಗಿ, ಶಾಸ್ತ್ರೀಯವಾಗಿ ಚುರುಕಾಗಿ ನಡೆಯುತ್ತಿದೆ. ಜಾನಪದದ ಇತರ ಪ್ರಕಾರಗಳ, ಸಾಮಗ್ರಿಗಳ ಅಧ್ಯಯನವೂ ಅಷ್ಟೇ ಚುರುಕಾಗಿ ನೆಡೆಯುತ್ತಿದೆ. ಅದರಲ್ಲಿ ಜಾಪದವನ್ನು ಅಥವಾ ಜಾನಪದದ ಹಲವಾರು ಅಂಶಗಳನ್ನು ಚರಿತ್ರೆ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ. ಅದನ್ನು 'ಚಾರಿತ್ರಿಕ ಜಾನಪದ' ಎಂದು ಕರೆಯಲಾಗಿದೆ. ಅದು ನಮ್ಮ ಸಂಸ್ಕೃತಿಯ, ಎಲ್ಲಾ ನಡುವಳಿಕೆಗಳನ್ನು ತಿಳಿಯಲು ನೆರವಿಗೆ ಬರುತ್ತದೆ ಎನ್ನುವ ಮಾತನ್ನು ಮಾರಲು ಸಾಧ್ಯವೇ ಇಲ್ಲ. ಹಿಂದಿನ ದಿನಗಳಲ್ಲಿದ್ದ ಜಾನಪದ ಅಧ್ಯಯನದ ದೃಷ್ಟಿಕೋನ ಹಲವಾರು ಶಾಖೆಗಳಲ್ಲಿ ವಿಸ್ತರಿಸಿಕೊಂಡಿದೆ. ವಿದ್ವಾಂಸರು ಗುರುತಿಸಿರುವಂತೆ, ಈಗ ಜಾನಪದವೀಯ ವ್ಯಾಸಂಗ ಚಾರಿತ್ರಿಕ ವಿಧಾನದ ಮಟ್ಟಕ್ಕೇರಿ ನಾನಾ ವಿಧಾನಗಳು ಹುಟ್ಟಿಕೊಂಡಿವೆ. "ಪೌರಾಣಿಕ ಕಥಾ ವಿಧಾನ, ದೇಶಾಂತರ ಕಥಾ ವಿಧಾನ, ಜನಾಂಗೀಯ ಕಥಾ ವಿಧಾನ, ಮನೋವಿಶ್ಲೇಷಣಾತ್ಮಕ ವಿಧಾನ, ಚಾರಿತ್ರಿಕ ವಿಧಾನ,[೧] ಹೀಗೆ ಹಲವಾರು ವಿಧಾನಗಳಲ್ಲಿ ಅಧ್ಯಯನಗಳನ್ನು ಗುರುತಿಸಿದ್ದಾರೆ." ಇಲ್ಲಿ ಪ್ರಸ್ತಾಪಿಸಬಹುದಾದ ಗಮನಾರ್ಹ ಅಂಶವೆಂದರೆ ಕ್ರಿ.ಪೂ ೫ನೆಯ ಶತಮಾನಕ್ಕೂ ಮೊದಲು ಪಾಶ್ಚಿಮಾತ್ಯ ದೇಶಗಳಲ್ಲಿ ಸಹ ಇತಿಹಾಸವೆಂದರೆ ದಂತಕಥೆ, ಸ್ಥಳೀಯ ವೀರರ ಕಥೆ, ಲಾವಣಿ, ಇತ್ಯಾದಿಗಳನ್ನು ಆಧರಿಸಿ ಸಂಗತಿಯೆನಿಸಿದ್ದಿತೆಂತಲೂ ಸಮರದ ಸಂದರ್ಭದಲ್ಲಿ ಯೋಧರಲ್ಲಿ ತಕ್ಕ ಸ್ಫೂರ್ತಿ ಆವೇಶಗಳನ್ನುಂಟು ಮಾಡಲು ಈ ಬಗೆಯ ಚರಿತ್ರೆಯನ್ನು ಸಾಧನವಾಗಿ ಬಳಸಿಕೊಳ್ಳಲಾಗುತ್ತಿದ್ದಿತೆಂತಲೂ ವಿದ್ವಾಂಸರು ಚರಿತ್ರೆ ಲೇಖನ ಶಾಸ್ತ್ರದ ಬೆಳವಣಿಗೆಯ ಹಿನ್ನಲೆಯನ್ನು ನಿರೂಪಿಸುವಾಗ ಪ್ರಸ್ತಾಪಿಸಿರುವುದುಂಟು.[೨] ನಾವು ಜಾನಪದದಲ್ಲಿ ಹುದುಗಿಕೊಂಡಿರುವ ಚಾರಿತ್ರಿಕ ಅಂಶವನ್ನು

ಹುಡುಕಿ ತೆಗೆಯಬೇಕಾದರೆ ಚರಿತ್ರೆ ಮತ್ತು ಜಾನಪದದ ನಡುವಿನ ಸಾಮ್ಯತೆ, ವ್ಯತ್ಯಾಸಗಳು, ಮತ್ತು ಅವೆರಡರ ನಡುವಿನ ಸಂಬಂದಗಳ ಕುರಿತಾದ ಅರಿವು ಮುಖ್ಯವಾಗಿ ಬೇಕಿದೆ. ಈಗಾಗಲೇ ಜಾನಪದದಲ್ಲಿ ಹುದುಗಿಕೊಂಡಿರುವಂತಹ ಚಾರಿತ್ರಿಕ ಅಂಶಗಳನ್ನು ಬೇರ್ಪಡಿಸುವಲ್ಲಿ ಅನುಸರಿಸಬೇಕಾಗಿರುವ ಕ್ರಮ, ಬೇಕಾಗಿರುವ ಸಾಮಾಗ್ರಿ, ಕಾಲದ ಕುರಿತಾದ ಪ್ರಜ್ಞೆ, ವೈಧಾನಿಕತೆ, ಹೀಗೆ ಹಲವಾರು ಅಂಶಗಳನ್ನು ಸೇರಿಸಿ ಹೇಳುವುದು ಕಷ್ಟ, ಈ ಎಲ್ಲಾ ಅಂಶಗಳು ಜಾನಪದದಲ್ಲಿ ಸಂಕೀರ್ಣ ರೂಪದಲ್ಲಿ ಹುದುಗಿಕೊಂಡಿರುತ್ತವೆ. ಮಾನವನ ಪ್ರಾಚೀನ ಜೀವನ ವಿಧಾನ ಅಥವಾ ಸಂಸ್ಕೃತಿಯನ್ನರಿಯಲು ಅವನು ವಾಸ ಮಾಡುತ್ತಿದ್ದ ನೆಲೆ, ಬಳಕೆಯ ಸಾಧನಗಳು, ಹೀಗೆ ಬೇರೆ ಬೇರೆ ಅಂಶಗಳನ್ನು ಗ್ರಹಿಸಿ, ಸೂತ್ರಿಕರಿಸಿ; ದೊರೆತ ಸಾಮಾಗ್ರಿಗಳನ್ನು ಸಾಕ್ಷೀಕರಿಸಿ, 'ಶಾಸ್ತ್ರೀಯ' ಮಾನದಂಡದ ಆಧಾರದ ಮೇಲೆ ಹೇಳಬಹುದು. ಆದರೆ ಜಾನಪದದ ಈ ರೀತಿಯ ಅಂಶಗಳನ್ನು ಗಮನಿಸಿ ಹೇಳುವುದು ತುಸು ಪ್ರಾಯಾಸದ ಕೆಲಸವೇ ಸರಿ. "ಚರಿತ್ರೆಯ ದೃಷ್ಟಿಯಿಂದ ಜಾನಪದ ಸಾಹಿತ್ಯವನ್ನು ಶೋಧಿಸತೊಡಗಿದರೆ ಇದನ್ನು ಅಧಿಕ ಸಮರ್ಥನೀಯವಾಗಿ ಎತ್ತಿ ತೋರಿಸಲು ಸಾಧ್ಯವಾಗುತ್ತದೆ. ಪುರಾಣ ಮತ್ತು ಚರಿತ್ರೆಗಳನ್ನು ವಾಸ್ತವಾಂಶಗಳ ಆಧಾರದ ಸಹಿತ ವಿಶ್ಲೇಷಿಸುವಾಗ ಈ ಎರಡು ವಿಷಯಗಳ ಆಳವಾದ ಜ್ಞಾನವೂ ಅತ್ಯವಶ್ಯಕ. ಅವೆರಡೂ ಪರಸ್ಪರ ಪೂರಕವಾಗಿರುತ್ತವೆಂಬುದನ್ನು ಇಲ್ಲಿ ಗಮನಿಸಬೇಕು. ಇತಿಹಾಸವು ಪುರಾಣಗಳಲ್ಲಿ ಸಂಕೀರ್ಣ ರೂಪದಲ್ಲಿ ಅಡಗಿದೆ ಎಂಬ ಸಿದ್ಧಾಂತವನ್ನು ತಳ್ಳಿಹಾಕುವಂತೆಯೇ ಇಲ್ಲ. ಇತಿಹಾಸವು ತನ್ನ ವ್ಯಾಪ್ತಿಗೆ ಸೆಳೆದುಕೊಂಡಿರುವ ಮಹಾಭಾರತ ಮತ್ತು ರಾಮಾಯಣ ಮಹಾಕಾವ್ಯಗಳಾಗಲೀ ಭಾರತೀಯ ಸಂಸ್ಕೃತಿಯ ಮಹಾ ಆಕಾರಗಳೆನ್ನಿಸಿದ ಮಹಾಪುರಾಣ, ಉಪಪುರಾಣಗಳಾಗಲೀ, ಆ ಉಪಖಂಡದ ಸಾಂಸ್ಕೃತಿಕ ದಾಖಲೆಗಳಾಗಿವೆ" (ಪ್ರೊ.ಲಕ್ಷ್ಮಣ ತೆಲಗಾವಿ, ಹರತಿ ಸಿರಿ, ಪು.೯೭೦) ಎಂಬುದನ್ನು ನಾವು ಗಮನಿಸಬಹುದಾಗಿದೆ. ಹೀಗೆ ಎಲ್ಲಾ ಸಂಕೀರ್ಣತೆಗಳ ನಡುವೆಯೂ ಜಾನಪದವು 'ಚಾರಿತ್ರಿಕ' ಅಂಶಗಳನ್ನು ಒಳಗೊಂಡ 'ಚಾರಿತ್ರಿಕ ಜಾನಪದ' ಎನಿಸಿದೆ. ಹೀಗೆ ಈ ಚಾರಿತ್ರಿಕ ದೃಷ್ಟಿಕೋನ ಹೊಂದಿರುವ ಜಾನಪದೀಯ ಅಧ್ಯಯನಗಳನ್ನು ಪರಿಶೀಲಿಸೋಣ. ಏಕೆಂದರೆ ಚಾರಿತ್ರಿಕ ಗೀತೆಗಳ ಅಥವಾ ಜಾನಪದ ವೀರ ಸಾಹಿತ್ಯದ ಅಧ್ಯಯನಗಳು ಯಾವ ಮಟ್ಟದಲ್ಲಿ ನಡೆದಿವೆ ಮತ್ತು ವಿದ್ವಾಂಸರ ಭಿನ್ನ ಭಿನ್ನ ದೃಷ್ಟಿಕೋನಗಳನ್ನು ಕೂಡ ಇದರಿಂದ ಗ್ರಹಿಸಲು ಸಾಧ್ಯವಾಗುತ್ತದೆ.ಆದರೆ ಜಾನಪದ ಸಾಹಿತ್ಯವನ್ನು ಮುಖ್ಯ ಸಾಕ್ಷಿಯನ್ನಾಗಿಸಿಕೊಡು ಅಧ್ಯಯನ ಮಾಡಲು ತೊಡಗಿಸಿದರೆ ಜಾನಪದ ವಿದ್ವಾಂಸ ಅಥವಾ ಇತಿಹಾಸಕಾರ ಇಬ್ಬರೂ ಅನುಭವಿಸುವ ಜಟಿಲತೆಯನ್ನು ಗಮನದಲ್ಲಿಟ್ಟುಕೊಂಡೇ ನಾವು ಮುಂದುವರೆಯ ಬೇಕಾಗಿದೆ. ಆ ಸೂತ್ರಗಳೆಲ್ಲವೂ ಕೂಡ ತೀರ ಜಟಿಲವಾಗಿರುತ್ತವೆ ಎನ್ನುವುದೂ ಅಷ್ಟೇ ಮುಖ್ಯವಾದ ವಿಚಾರವಾಗಿದೆ.

ಇಲ್ಲಿಯವರೆಗೆ ಸಂಗ್ರಹಗೊಂಡಿರುವ ಜನಪದ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ ಜನಪದ ಕಾವ್ಯ, ಕತೆ, ಗಾದೆ, ಒಗಟು ಎಂಬ ನಾಲ್ಕು ಶಾಖೆಗಳಾಗಿಯೂ ಇದರಲ್ಲಿಯ ಜನಪದ ಕಾವ್ಯವನ್ನು ಗೀತೆ,

ಕಥನಗೀತೆ, ಎಂದು ಮೂರು ಶಾಖೆಗಳಾಗಿಯೂ ವಿಭಾಗಿಸಲಾಗಿದೆ. ಜನಪದ ಕಥನ ಕಾವ್ಯವನ್ನು ಕಥನಗೀತೆ, ಜನಪದ ಕಥನ ಲಾವಣಿ, ಜನಪದ ಖಂಡ ಕಾವ್ಯ ಹಾಗೂ ಜನಪದ ಮಹಾಕಾವ್ಯಗಳೆಂದು ನಾಲ್ಕು ಶಾಖೆಗಳಾಗಿ ವರ್ಗಿಕರಿಸಲಾಗಿದೆ. ಈ ಜನಪದ ಕಥನ ಗೀತೆಯನ್ನು ಮತ್ತೆ ಪೌರಾಣಿಕ, ಐತಿಹಾಸಿಕ, ಧಾರ್ಮಿಕ, ಕೌಟುಂಬಿಕ ಅಂದು ವಿಭಾಗಿಸಿದ್ದಾರಾದರೂ ಇವುಗಳ ಸಂಗ್ರಹ ಹೇರಳವಾಗಿ ದೊರಕುತ್ತದೆ. ಚಾರಿತ್ರಿಕ ಗೀತೆಗಳನ್ನು ಕಾವ್ಯಗಳನ್ನು "ಅಸಮಗ್ರ ಐತಿಹಾಸಿಕ ಕಾವ್ಯಗಳು. ಸಮಗ್ರ ಐತಿಹಾಸಿಕ ಕಾವ್ಯಗಳು, ಅಸ್ಪಷ್ಟ ಐತಿಹಾಸಿಕ ಕಾವ್ಯಗಳು" (ಜೀ.ಶಂ.ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪು:೩೦೪)ಎಂದು ವಿಭಾಗಿಸಲಾಗಿದೆ. ಜೀಶಂಪ ಗುರುತಿಸಿರುವ ಸಮಗ್ರ ಐತಿಹಾಸಿಕ ಕಾವ್ಯಗಳನ್ನು ಪಿರಿಯಾಪಟ್ಟಣದ ಕಾಳಗ, ಸರ್ಜಪ್ಪನಾಯಕನ ಕತೆ, ಮಾಗಡಿ ಕೆಂಪೆಗೌಡ, ಲಿಂಗರಾಜಮ್ಮ, ಒಂದೇ ಪಾಠವನ್ನೊಳಗೊಂಡ ತರೀಕೆರೆ ರಂಗಪ್ಪ ನಾಯಕ, ಹಾಗೂ ಸೀರ್ಯದ ರಂಗಪ್ಪ ನಾಯಕ ಇವುಗಳು ಮುಖ್ಯವಾದವುಗಳಾಗಿವೆ. ಅಸಮಗ್ರ ಕಾವ್ಯಗಳಲ್ಲಿ ಮದಕರಿ ಕತೆಯೂ ಸೇರಿದೆ.

ಈ ಚಾರಿತ್ರಿಕ ಕಥನ ಕಾವ್ಯಗಳನ್ನು ಸಂಗ್ರಹ ಮಾಡಿದವರು ಅವುಗಳ ಪಾಠಾಂತರಗಳನ್ನೂ, ಭಿನ್ನ ಪಾಠಗಳನ್ನು ಗುರುತಿಸಿ, ಅದರ ಬಗೆಗೆ ವಿವರಗಳನ್ನು ಸಹ ನೀಡಿದ್ದಾರೆ. ಆದರೆ ಸಂಪೂರ್ಣ ಎನ್ನುವಷ್ಟರ ಮಟ್ಟಿಗಿನ ಅಧ್ಯನ ಇನ್ನೂ ನಡೆಯಬೇಕಿದೆ. ಸಂಗೊಳ್ಳಿ ರಾಯಣ್ಣ, ನರಗುಂದದ ಬಾಬಾಸಾಹೇಬ, ಕಿತ್ತೂರು ಚನ್ನಮ್ಮ, ಚಿತ್ರದುರ್ಗದ ಮದಕರಿ ನಾಯಕ, ಕುಮಾರರಾಮ, ತರೀಕೆರೆಯ ಸರ್ಜಪ್ಪ ನಾಯಕ, ಮಾಗಡಿ ಕೆಂಪೆಗೌಡ, ಹೀಗೆ ಕೆಲವರು ಕುರಿತು ಕಾವ್ಯಸಂಗ್ರಹವಾಗಿದೆ, ಜೊತೆಗೆ ಸ್ವಲ್ಪ ಮಟ್ಟಿಗೆ ಚಾರಿತ್ರಿಕ ವಿವೇಚನೆ ನಡೆದಿದೆ. ಪ್ರತ್ಯೇಕವಾಗಿ ಭಿನ್ನ ಪಾಠಾಂತರಗಳನ್ನಿಟ್ಟುಕೊಂಡು ವಿಭಿನ್ನ ನೆಲೆಯಲ್ಲಿ ಅಧ್ಯಯನಗಳು ನೆಡೆದಿಲ್ಲವೆಂದೇ ಹೇಳಬೇಕು. ಆದರೆ ಅಲ್ಲಲ್ಲಿ ಇತೀಚೆಗೆ ಕೆಲವು ಮಂದಿ ಮಾತ್ರ ಆ ದಿಶೆಯತ್ತ ಪ್ರಯತ್ನಿಸುತ್ತಿದ್ದಾರೆ.

ಬಿ.ಬಿ. ಮಹೀಶವಾಡಿಯವರ "ಜಾನಪದ ವೀರ ಗೀತೆಗಳು" ಕೃತಿ ತುಂಬಾ ಮಹತ್ವದ್ದಾಗಿದೆ. ಹಾಗೇನೇ ಡಾ.ಶ್ರೀಕಂಠ ಕೂಡಿಗೆಯವರ ಸಂಶೋಧನಾ ನಿಬಂಧ "ಕನ್ನಡ ಲಾವಣಿಗಳು" ಅತ್ಯಂತ ಪ್ರಮುಖ ಕೃತಿ ೧೯೭೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಕಿತ್ತೂರು ಚೆನ್ನಮ್ಮನ ಕುರಿತು ಸಂಗ್ರಹವಾಗಿರುವ ಹಾಡುಗಳು, ಲಾವಣಿಗಳು, ಇತ್ಯದಿಗಳನ್ನಿಟ್ಟುಕೊಂಡು 'ಕಿತ್ತೂರುಚೆನ್ನಮ್ಮ ಗೋಷ್ಠಿ'ಯನ್ನು ಏರ್ಪಡಿಸಿ ಚಾರಿತ್ರಿಕ ವ್ಯಕ್ತಿಗಳ ಕುರಿತಾದ ಪ್ರತ್ಯೇಕ ಅಧ್ಯಯನಕ್ಕೊಂದು ಹೊಸ ಆಯಾಮವೊಂದನ್ನು ನೀಡಿದಂತಾಯಿತು. ಡಾ.ಬಿ.ಎಸ್.ಗದ್ದಿಗಿಮಠ ಅವರ ಜನತಾಗೀತೆಗಳ ಸಂಗ್ರಹದಲ್ಲಿರುವ 'ಕಂಪಲಿ' 'ವಿಜಯ ನಗರ' ಎಂಬ ಗೀತೆಗಳು ಕುಮಾರರಾಮನ ಚಾರಿತ್ರಿಕತೆಯನ್ನು ತಿಳಿಸುತ್ತವೆ. ಇವುಗಳಲ್ಲದೇ ಇನ್ನೂ ಹಲವಾರು ಸಂಗ್ರಹಗಳನ್ನು ನೋಡುವುದಾದರೆ ಮತಿಘಟ್ಟ ಕೃಷ್ಣಮೂರ್ತಿ (ಸಂ) 'ನಾಡಪದಗಳು' ಸಂಪುಟ-೧ ಎಸ್.ಕೆ. ಕರೀಂಖಾನ್ (ಸಂ) ಜನಪದ ಗೀತೆ, ಮಳಲಿ ವಸಂತಕುಮಾರ್ (ಸಂ) ಕೋಲುಪದಗಳು, ನಿಂಗಣ್ಣ ಸಣ್ಣಕ್ಕಿ (ಸಂ) ಹೇಳುವೆ ಮಜಕೂರ, ಡಾ.ಜೀಶಂಪ ..ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು.

ಕುಮಾರ ರಾಮನ ಕುರಿತಾಗಿಯೇ ಇರುವ ಪಾಠಗಳನ್ನು ಸಂಗ್ರಹಿಸಿದವರೆಂದರೆ ಡಾ.ಗದ್ದಿಗಿಮಠ, ಡಾ.ಎಂ.ಎಸ್. ಸುಂಕಾಪಾಠ, ಮರುಳ ಸಿದ್ದಪ್ಪ, ಎ. ಹಿರಿಯಣ್ಣ, ಡಿ. ಲಿಂಗಯ್ಯ, ಕ.ರಾ.ಕೃ. ಜೀಶಂಪ, ಚಂದ್ರು ಕಾಳೇನಹಳ್ಳಿ ಇವರ ಸಂಗ್ರಹಗಳೆಲ್ಲವೂ ಕುಮಾರ ರಾಮನ ಕುರಿತು ಮೌಖಿಕ ಚರಿತ್ರೆಯ ಅಧ್ಯಯನಕ್ಕೆ ಕುರಿತ ಆಕರ ಸಾಮಾಗ್ರಿಗಳನ್ನು ಒದಗಿಸುತ್ತವೆ. ಇಲ್ಲಿ ಗಮನಿಸಬೇಕಾದ ಕೆಲವು ಅಂಶಗಳೆಂದರೆ, ಜನಪದ ಸಾಹಿತ್ಯದಲ್ಲಿ ಪ್ರಸಿದ್ದನಾದ ಕುಮ್ಮಟದುರ್ಗದ (ಅಥವಾ ಕಂಪಲಿಯ) ಕುಮಾರ ರಾಮನ ಕತೆಯನ್ನು ಹೋಲುವ ಆದರೆ ಕೆಲವೊಮ್ಮೆ ಘಟನೆ ,ವ್ಯಕ್ತಿ ಮತ್ತು ಸ್ಥಳಗಳನ್ನು ಕುರಿತ ವಿವರಣೆಯಲ್ಲಿ ವ್ಯತ್ಯಾಸ ತೋರುವ ಕತೆಗಳೂ (ಭಿನ್ನಪಾಠಗಳು) ದೊರೆತ್ತವೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಸಂಗ್ರಹಿತವಾದ ಇಂತಹ ಗೀತೆಗಳಲ್ಲಿಯ ವಿಷಯಗಳ ಕುರಿತು ವಿದ್ವಾಂಸರು ವಿಮರ್ಶೆ ಮಾಡಿರುವರು." (ಲಕ್ಷ್ಮಣ ತೆಲಗಾವಿ, ಹರಕೆ ಸಿರಿ, ಪು.೯೮೩)

ಈಗಾಗಲೇ ಸಂಗ್ರಹಗೊಂಡ, ಪ್ರಕಟಗೊಂಡಿರುವ ಜನಪದ ಕಥನ ಗೀತೆಗಳು (ಚಾರಿತ್ರಿಕ) ನಾಯಕರ ಬಗ್ಗೆ ಯಾವ ರೀತಿಯ ಮಾಹಿತಿಯನ್ನು ಒದಗಿಸುತ್ತವೆ, ಮತ್ತು ಆ ಮಾಹಿತಿಯ ವಸ್ತು ನಿಷ್ಠತೆ ಮುಂತಾದ ಅಂಶಗಳು ಮೌಖಿಕ ಸಾಹಿತ್ಯವನ್ನು ಚರಿತ್ರೆಯೊಂದಿಗೆ ಹೋಲಿಸಿ ಅಧ್ಯಯನ ಮಾಡುವಲ್ಲಿ ಯಾವ ರೀತಿಯ ಪಾತ್ರ ವಹಿಸುತ್ತವೆ ಎಂಬುದನ್ನು ವಿವರವಾಗಿ ನೋಡಬೇಕಾಗುತ್ತದೆ. ಆಚರಣೆಯ ಪರಿಣಾಮವಾಗಿ, ನಂಬಿಕೆ, ಸಂಪ್ರದಾಯಗಳ ಪರಿಣಾಮವಾಗಿ ಹುಟ್ಟಿಕೊಳ್ಳುವ ಐತಿಹ್ಯ, ಪವಾಡ ಮುಂತಾದವುಗಳಲ್ಲಿಯ ಸಾದೃಶ್ಯ ಮತ್ತು ವೈದೃಶ್ಯಗಳನ್ನು ಬಹಳ ಎಚ್ಚರಿಕೆಯಿಂದ ಬೇರ್ಪಡಿಸಿದರೆ ಉಳಿಯುವ ಅಂಶ ಚಾರಿತ್ರಿಕ ಅಂಶವೆನಿಸುತ್ತದೆ. ಕರ್ನಾಟಕದ ಚರಿತ್ರೆಯ ರಚನೆಯ ಸಂದರ್ಭಕ್ಕೆ ಈರೀತಿಯ (ಮೂಲ) ಆಕಾರಗಳೂ ಅನಿವಾರ್ಯವಾಗಿವೆ ಎಂಬುದು ಸತ್ಯ. ಆದನ್ನು ನೋಡಿದರೆ ಜನಪದ ಸಾಹಿತ್ಯವನ್ನು ಚರಿತ್ರೆ ರಚನೆಯ ಆಕಾರವಾಗಿ ಬಳಸಿಕೊಳ್ಳುವಲ್ಲಿ ಸಂಶೋಧಕ ಅಥವಾ ಇತಿಹಾಸಕಾರ ವಹಿಸುವ ಅಥವಾ ವಹಿಸಬೇಕಾದ ಎಚ್ಚರ ಎಂತಹುದು ಎಂಬುದು ಮುಖ್ಯವಾಗಿರುತ್ತದೆ. ಈ ಹಿನ್ನಲೆಯಲ್ಲಿ ಈ ವರೆಗೆನ ಅಧ್ಯಯನಗಳು ಅಂದರೆ, ಕಥನ ಗೀತೆಗಳನ್ನೇ ಕುರಿತಾಗಿ ಅಧ್ಯಯನ ನೆಡೆಸಿ, ಸಾಮಾಜಿಕ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಲು ಸಹಾಯವಾಗಿದ್ದಾರೆ ಎಂಬುದನ್ನು ನೋಡೋಣ.

ಆರಂಭದ ಕಾಲದ ಅಧ್ಯಯನಗಳು ಕೇವಲ ಸಂಗ್ರಹ ಮಟ್ಟದಲ್ಲಿಯೇ ಉಳಿದವು. ಅವುಗಳು ಅದೇ ಅಂತಿಮ ಎನ್ನುವಷ್ಟರ ಮಟ್ಟಿಗೆ ಸಂಗ್ರಹದಲ್ಲಿ ಮುಳುಗಿದರೂ ಕೆಲವು ಸಂಗ್ರಹಗಳು ಹೊಸ ದೃಷ್ಟಿಕೋನವನ್ನು ಸೃಷ್ಟಿಸಿದವು. ಚಾರಿತ್ರಿಕ ಅಂಶಗಳನ್ನು ಆಧರಿಸಿದ ಸಂಗ್ರಹಗಳೆಂದರೆ, ಕೃಷ್ಣಮೂರ್ತಿ ಹನೂರು ಸಂಗ್ರಹಿಸಿದ "ಜನಪದ ವೀರ ಗೀತೆಗಳು" ಇವುಗಳಲ್ಲಿಯ ಸಂಗ್ರಹಗಳೆಲ್ಲವೂ ಚಿತ್ರದುರ್ಗ ಜಿಲ್ಲೆಯ ಆಸುಪಾಸಿನ ಕಾಡುಗೊಲ್ಲರು, ಮ್ಯಾಸಬೇಡರು ಹಾಡಿದವುಗಳಾಗಿವೆ. "ಚಿತ್ರಕಲ್ಲು ಮದಕರಿ" ಕರಾಕೃ ಅವರ ಸಂಗ್ರಹ. ಇದೂ ಕೂಡ ಚಿತ್ರದುರ್ಗ ಜಿಲ್ಲೆಯ ಅನೇಕ ಪಾಳೆಯಗಾರರ ಕುರಿತಾದ ಗೀತೆಗಳಾಗಿವೆ. ಕ್ಯಾತನಹಳ್ಳಿ ರಾಮಣ್ಣರ "ಫ್ಲೀಟರು ಸಂಗ್ರಹಿಸಿದ ಲಾವಣಿಗಳು" ಒಂದು ಉತ್ತಮ ಸಂಗ್ರಹವಾಗಿದೆ. ಇದರಲ್ಲಿ ಸಂಗೊಳ್ಳಿ ರಾಯಣ್ಣನ ದಂಗೆ, ಹೀಗೆ ಹಲವಾರು ಚಾರಿತ್ರಿಕ ಅಂಶಗಳನ್ನು ಈ ಕೃತಿ ಒಳಗೊಂಡಿದೆ. ಇದಕ್ಕೆ ವಿಸ್ತಾರವಾದ ಪ್ರಸ್ತಾವನೆಯನ್ನು ಬರೆಯಲಾಗಿದೆ.

ನಂತರಕ್ಕೆ ಪಿಎಚ್.ಡಿ.,ಗಾಗಿ ಈ ಗೀತೆಗಳನ್ನು ಅಧ್ಯಯನ ಮಾಡಿದವರೆಂದರೆ ಡಾ.ದೇವೇಂದ್ರಕುಮಾರ್ ಹಕಾರಿಯವರ "ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾರಿತ ನಿರೂಪಣೆ. ಇದರಲ್ಲಿ ಒಟ್ಟು ೮ ಅಧ್ಯಾಯಗಳಿವೆ. ಆರಂಭದಲ್ಲಿಯೇ ಅವರು ಇವುಗಳನ್ನು ಮೂರು ಹಂತಗಳಲ್ಲಿ ಅಧ್ಯಯನದ ಅನುಕೂಲಕ್ಕಾಗಿ ವಿಂಗಡಿಸಿಕೊಂಡಿರುವ ಬಗ್ಗೆ ಹೇಳುತ್ತಾರೆ.

ಆ ಅಂಶಗಳೆಂದರೆ

೧. ವಸ್ತು, ಶೈಲಿ, ಕಲಾತ್ಮಕತೆ, ಭಾವಸೌಂದರ್ಯ.

೨. ಸಾಮಾಜಿಕ ಹಿನ್ನೆಲೆ, ನಂಬುಗೆ, ವಿಧಿ ನಿಷೇಧ, ಆಶಯ, ಬದುಕಿನ ಜಟಿಲತೆ, ಸಂಘರ್ಷ, ಸಾಮಾಜಿಕ ಬದ್ಧತೆ

೩. ಮೌಲ್ಯಗಳು ಸ್ಥಿರ ಪರಿವರ್ತನ ಗುಣಗಳ ವಿಶ್ಲೇಷಣೆ.

ಇನ್ನೊಂದು ವಿಶೇಷವಾದ ಅಂಶವೆಂದರೆ ಐತಿಹಾಸಿಕ ಕಥನಗೀತೆಗಳನ್ನು ಕೂಡ ಸಾಮಾಜಿಕ ನೆಲೆಯಲ್ಲಿ ನೋಡಿರುವ ಕ್ರಮ. ಅಂದರೆ, ಅಲ್ಲಿಯೂ ಕೂಡ ದುಃಖದ ಅಂಶವನ್ನು ಗುರುತಿಸಿರುವುದು. ನಾಡಿಗಾಗಿ ಪ್ರಾಣಾರ್ಪಣೆ ಮಾಡಿದ ನಾಯಕ/ಕಿ ಯಾರ ಬಗೆಗಿನ ಕಥನ ಗೀತೆಗಳೂ ಕೂಡ ದುಃಖಾಂತ ನಿರೂಪಣೆಯನ್ನೇ ಹೊಂದಿವೆ ಎಂಬುದನ್ನು ಇದರ ಮೂಲಕ ನಿರೂಪಿಸಿದ್ದಾರೆ. ಅನೇಕ ಕಥನ ಗೀತೆಗಳಲ್ಲಿ ಬರುವ ವ್ಯಕ್ತಿಗಳು ಬೇರೆ ಬೇರೆ ಕಾರಣ. ಸನ್ನಿವೇಶ ಸಂದರ್ಭ, ನಂಬುಗೆ, ವಿಧಿ ನಿಷೇಧಗಳಿಂದಾಗಿಯೇ ದುರಂತಗಳಿಗೆ ಬಲಿಯಾಗುತ್ತಾರೆ. ತಮ್ಮೆಲ್ಲಾ ಆಶಯ, ಆಸೆ-ಆಕಾಂಕ್ಷೆಗಳನ್ನು ಮಣ್ಣು ಪಾಲು ಮಾಡುತ್ತಾರೆ, ತಾವೇ ಮಣ್ಣಿನಲ್ಲಿ ಮಣ್ಣಾಗುತ್ತಾರೆ. ಸಹಜವಾಗಿ ಸಾವು ಬರುವುದಕ್ಕಿಂತ ಮುಂಚೆಯೇ ದುರಂತ ಸಾವಿಗೀಡಾಗುತ್ತಾರೆ. ಈ ರೀತಿಯ ಸಂದರ್ಭಗಳು, ವ್ಯಕ್ತಿಗಳನ್ನು ಕುರಿತಾಗಿ ಜನಪದ ಗಾಯಕರು ಹಲವಾರು ರೀತಿಯಲ್ಲಿ ಗೀತೆಕಟ್ಟಿ ಹಾಡುತ್ತಾರೆ. ಕುರಿತಾಗಿ ಜನಪದ ಗಾಯಕರು ಹಲವಾರು ರೀತಿಯಲ್ಲಿ ಗೀತೆಕಟ್ಟಿ ಹಾಡುತ್ತಾರೆ. ತಮಗೆ ತೋಚಿದ್ದನ್ನು ಮೌಖಿಕವಾಗಿ ನಿರೂಪಿಸುತ್ತಾರೆ. ಈ ಎಲ್ಲಾ ಅಂಶಗಳನ್ನಿಟ್ಟುಕೊಂಡು ಹಕಾರಿಯವರು ಸಾಂಸ್ಕೃತಿಕವಾಗಿ ಈ ಕಥನ ಗೀತೆಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ.

ಕೇವಲ ಸಾಮಾಜಿಕ ಅಂಶಗಳ ಆಧಾರದ ಮೇಲೆಯೇ ಇಡೀ ಮೌಲ್ಯಗಳನ್ನು ದುಃಖಾಂತ ನಿರೂಪಣೆಯ ಮೂಲಕವೇ ಕಟ್ಟಿಕೊಟ್ಟಿರುವುದೊಂದು ಈ ಪ್ರಬಂಧದ ಮಿತಿಯಾಗಿದೆ. ಹೀಗೆ ಮಾಡುವುದರಿಂದ ಅದರ ಚಾರಿತ್ರಿಕತೆಯನ್ನು ಕಡೆಗಣಿಸಿದಂತೆ ಆಗುತ್ತದೆ, ಮತ್ತು ಅದರ ಇನ್ನೊಂದು ಮುಖವನ್ನೂ ಕಡೆಗಣಿಸಿದಂತೆಯೇ

ಡಾ.ನಂ.ತಪಸ್ವೀಕುಮಾರ್ ಅವರ "ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ." ಇದು ಕನ್ನಡ ಜಾನಪದ ಗೀತೆಗಳ ಅಧ್ಯಯನಕ್ಕೊಂದು ಆರಂಭಿಕ ಆಯಾಮ ಕೊಟ್ಟ ಕೃತಿಯಾಗಿದೆ. ಇವರು ೧೯೭೩ರಲ್ಲಿಯೇ ಸಂಶೋಧನೆ ಮಾಡಿದ್ದರೂ ಸಹ ಏಳು ಬಗೆಗಿನ ದೃಷ್ಟಿಕೋನಗಳಲ್ಲಿ ಸಾಕಷ್ಟು ಬದಲಾವಣೆಗಳು ನಡೆದಿದ್ದವು. ಸ್ವತಃ ತಪಸ್ವೀ ಕುಮಾರರೇ ಅದನ್ನು ಹೇಳಿಕೊಂಡಿದ್ದಾರೆ.

ಕನ್ನಡ ಜನಪದ ಗೀತೆಗಳ ಆಧಾರದ ಮೇಲೆ ಕನ್ನಡ ಜನಪದ ಸಂಸ್ಕೃತಿಯ ಸ್ವರೂಪವನ್ನು ಅರಿತುಕೊಳ್ಳಲು ಪ್ರಯತ್ನಿಸಿದ್ದಾರೆ. ಯಾವುದೇ ಒಂದು ಜನಾಂಗದ ಸಂಸ್ಕೃತಿಯನ್ನು ಅರಿತುಕೊಳ್ಳಲು

ಅದರ ಸಾಮಾಜಿಕತೆ, ಭಾಷಿಕ ಅಂಶಗಳು, ಧಾರ್ಮಿಕ ಅಂಶಗಳು, ಪಾರಂಪರಿಕ ಚಟುವಟಿಕೆಗಳು ಮುಖ್ಯವಾಗುತ್ತವೆಯೋ ಅದೇ ರೀತಿಯಲ್ಲಿ ಜನಪದ ಸಂಸ್ಕೃತಿಯನ್ನು ಅದರ ಮೌಖಿಕ ಪರಂಪರೆಯಿಂದ ಗುರುತಿಸಬಹುದು. ಇದನ್ನು ಗುರುತಿಸುವಲ್ಲಿ ಗೀತೆಗಳು ತುಂಬಾ ಮಹತ್ವವನ್ನು ಹೊಂದಿವೆ. ಜೊತೆಗೆ ಗಾದೆ, ಒಗಟು, ಕಥೆ, ಇತರ ಪ್ರಕಾರಗಳೂ ಕೂಡ ಸಂಸ್ಕೃತಿಯನ್ನು ಅರಿಯುವಲ್ಲಿ ಸಹಕಾರಿಯಾಗುತ್ತವೆಯಾದರೂ ಗೀತೆಗಳು ಮಾತ್ರ ಮಹತ್ವದ ಪಾತ್ರವಹಿಸುತ್ತವೆ, ಗೀತೆಗಳು ಜನಪದರ ಸಂಸ್ಕೃತಿಯ ಅಂಗ ಹೀಗಾಗಿ ನಾವು ಗೀತೆಗಳ ಮುಖಾಂತರ ಮಾತ್ರ ಸಂಸ್ಕೃತಿಯನ್ನು ಅಳೆಯಬಹುದು ಎಂಬುದನ್ನು ತಪಸ್ವಿಕುಮಾರ್ ತಮ್ಮ ಅಧ್ಯಯನದ ಮೂಲಕ ತೋರಿಸಿಕೊಟ್ಟಿದ್ದಾರೆ.

ಪ್ರಸ್ತಾವನೆಯನ್ನು ಒಳಗೊಂಡಂತೆ ಇದರಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ. ಜಾನಪದದ ಆರಂಭಿಕ ಸ್ಥಿತಿಯಿಂದ ಹಿಡಿದು ಜಾನಪದ ಸಾಹಿತ್ಯದ ಸ್ವರೂಪ, ಜನಪದರ ಜೀವನ ಕ್ರಮ, ಆಚಾರ-ವಿಚಾರ, ನಂಬುಗೆ, ವಿಧಿ ನಿಷೇಧಗಳು, ಹಬ್ಬ-ಹರಿದಿನಗಳು, ಹೀಗೆ ಒಟ್ಟಾರೆಯಾಗಿ ಸಾಮಾಜಿಕ ಸಾಂಸ್ಕೃತಿಕ ಆಯಾಮನ್ನೊಳಗೊಂಡಂತೆ ಇಡೀ ಜನಪದರ ಬದುಕಿನ ಇಡೀ ಚಿತ್ರಣವನ್ನೇ ಗೀತೆಗಳ ಮುಖಾಂತರ ಕಟ್ಟಿಕೊಟ್ಟಿದ್ದಾರೆ. ಆದರೆ ಜನಪದ ಸಂಸ್ಕೃತಿಯನ್ನು ಅರಿಯಲು ಗೀತೆಗಳೇ ಅಂತಿಮ ಆಕರಗಳಾಗುವುದಿಲ್ಲ. ಮೌಖಿಕವಾಗಿರುವ ಎಲ್ಲಾ ಅಂಶಗಳೂ ಆಕರಗಳೇ, ಸಂಸ್ಕೃತಿಯನ್ನರಿಯಲು, ಆರಂಭದ ಕಾಲ ಘಟ್ಟದ ಅಧ್ಯಯನವಾಗಿರುವುದರಿಂದ ಹಲವಾರು ಮಿತಿಗಳ ಮಧ್ಯೆಯೂ ಇದು ಉತ್ತಮ ಅಧ್ಯಯನವೆನಿಸಿದೆ.

ಡಾ.ಎನ್.ಆರ್.ನಾಯಕರ ಕಾರವಾರ ಜಿಲ್ಲೆಯ ಜನಪದ ಗೀತೆಗಳು, ದಕ್ಷಿಣ ಕರ್ನಾಟಕವು ಕರ್ನಾಟದಲ್ಲಿ ಒಂದು ವೈಶಿಷ್ಟಪೂರ್ಣವಾದ ಭೂ-ಭಾಗವಾಗಿದೆ. ಈ ಪ್ರದೇಶವು ಸಂಸ್ಕೃತಿಯಲ್ಲೂ ಈ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿರುವುದು ವಿಶೇಷವಾಗಿದೆ. ಈ ವೈಶಿಷ್ಟ್ಯಪೂರ್ಣವಾದ ಸಂಸ್ಕೃತಿಯನ್ನು ಹೊಂದಿರುವ ಈ ಭಾಗದ ಗೀತ ಪ್ರಕಾರಗಳನ್ನು ಇಟ್ಟುಕೊಂಡು ಆ ಮುಖಾಂತರ ಆ ಭಾಗದ ಸಾಂಸ್ಕೃತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ೭೦ರ ದಶಕದಲ್ಲಿ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ.

ಇದರಲ್ಲಿ ಒಟ್ಟು ೮ ಅಧ್ಯಾಯಗಳಿವೆ. ಭಕ್ತಿಗೀತೆಗಳು, ಮಂಗಳ ಗೀತೆಗಳು, ಶಿಶು, ಗಂಡಸರ ಗೀತೆಗಳು, ನೃತ್ಯಗಳೆಂದು ವಿಂಗಡಿಸಿಕೊಂಡು ಇವುಗಳ ಶೈಲಿಯನ್ನಿಟ್ಟುಕೊಂಡು ಮಾತ್ರ ಅಭ್ಯಾಸ ಮಾಡಿದ್ದಾರೆ. ತಾತ್ವಿಕವಾಗಿ ಗೀತೆಗಳೆಲ್ಲವೂ ಕೂಡ ಸಾಂಸ್ಕೃತಿಯನ್ನು ಬಿಂಬಿಸುತ್ತವೆ. ಆದರೆ ಅವುಗಳ ತಾತ್ವಿಕ ಮಿತಿಯನ್ನು ಗುರುತಿಸುವಲ್ಲಿ ಈ ಅಧ್ಯಯನವು ಸೋತಿದೆ.

ಡಾ. ಬಿ.ಎಸ್.ಭಜಂತ್ರಿಯವರ "ಹುಲಕುಂದದ ಲಾವಣಿ ಸಂಪ್ರದಾಯ ಒಂದು ಅಧ್ಯಯನ" ಇದು ಹುಲಕುಂದ ಪ್ರದೇಶದ ಲಾವಣಿಯನ್ನು, ಈ ಪ್ರದೇಶದ ಸಂಪ್ರದಾಯವನ್ನು ವಿಶೇಷವಾದ ಅಧ್ಯಯನ ವಸ್ತುವನ್ನಾಗಿಸಿಕೊಂಡಿದ್ದಾರೆ. ಅದೂ ಈ ಲಾವಣಿ ಪರಂಪರೆಯ ಮೂಲಕ, ಹಲಸಂಗಿ, ಗೆಳೆಯರ ಗುಂಪಿನಂತೆ, ಹುಲಕುಂದದಗೆಳೆಯರ ಗುಂಪೂ ಒಂದೆಂದು ಹೇಳಿದ್ದಾರೆ. ಧಾರವಾಡದಂತೆ ಹುಲಕುಂದವೂ ಸಾಂಸ್ಕೃತಿಕ ಕೇಂದ್ರಸ್ಥಾನವೆಂದು ನಿರೂಪಿಸಿದ್ದಾರೆ. ೧೯೩೭ರಲ್ಲಿ ಹುಲಕುಂದದಲ್ಲಿ ಭೀಮಕವಿಯ ಮುಂದಾಳತ್ವದಲ್ಲಿ ಸ್ವಾತಂತ್ರ್ಯ ಹೋರಾಟದ ಒಂದು ಅಂಗವಾಗಿ ಸ್ಥಾಪಿತವಾಗಿದ್ದನ್ನು ಇಲ್ಲಿ ಸ್ಮರಿಸಬಹುದು.

ಹಲವಾರು ಕಾರಣಗಳಿಂದಾಗಿ ಒಂದು ಭೌಗೋಳಿಕ ಪ್ರದೇಶದಲ್ಲಿ ಸಾಹಿತ್ಯಿಕ ಸಂಪ್ರದಾಯ ಅಸ್ತಿತ್ವ ಪಡೆದುಕೊಳ್ಳುತ್ತದೆ. ಅದು ಆಯಾ ಪ್ರದೇಶಕ್ಕೆ ಸೀಮಿತವಾಗಿರುವುದಿಲ್ಲ. ಬದಲಿಗೆ ತನ್ನ ಅಕ್ಕ-ಪಕ್ಕದ ಪ್ರದೇಶಗಳನ್ನು ವ್ಯಾಪಿಸಿಕೊಂಡು ಆ ಪ್ರದೇಶಗಳನ್ನು ಪ್ರಭಾವಿಸುತ್ತದೆ. ಇದಕ್ಕೆ ಉದಾಹರಣೆಯೆಂದರೆ ಈ ಪ್ರಬಂಧದಲ್ಲಿ ಹುಲಕುಂದದ ಜೊತೆಗೆ ತೇರದಾಳ, ಹಲಸಂಗಿ, ಇಂಗಳಗಿ, ಸಾವಳಗಿ, ದೇಗಾರಿಯಿ, ಈ ಪ್ರದೇಶದ ಲಾವಣಿಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿರುವುದು. ಚಾರಿತ್ರಿಕ ಲಾವಣಿಗಳ ಕುರಿತು ವಿವರವಾದ ಮಾಹಿತಿಯನ್ನು ಕಲೆ ಹಾಕಿದ್ದಾರೆ. ಇವರು ಆರು ಅಧ್ಯಾಯನಗಳನ್ನು ಮಾಡಿಕೊಂಡಿದ್ದು, ಸಂಪ್ರದಾಯ ಪ್ರಾಚೀನತೆ, ಲಾವಣಿಕಾರರು, ಮೌಲ್ಯ ವಿವೇಚನೆಯಂತಹ ಹಲವಾರು ಮುಖ್ಯ ಭಾಗಗಳನ್ನಾಗಿ ಮಾಡಿಕೊಂಡು ಅಧ್ಯಯನ ಕೈಗೊಂಡಿದ್ದಾರೆ.

ಡಾ.ವಾಯ್.ಎಫ್.ಸೈದಾಪೂರ್ ಅವರ "ಉತ್ತರ ಕರ್ನಾಟಕದ ಜನಪದ ವೀರ ಗೀತೆಗಳು". ಇದರಲ್ಲಿ ಒಟ್ಟು ಆರು ಅಧ್ಯಾಯಗಳಿವೆ.

ಜನಪದ ಸಾಹಿತ್ಯದಲ್ಲಿ ಹಲವಾರು ಪ್ರಕಾರಗಳಿವೆ. ಗಾದೆ, ಗೀತೆ, ಕಥೆ, ಐತಿಹ್ಯ, ಒಗಟು, ಲಾವಣಿ, ಇವೆಲ್ಲವುಗಳನ್ನು ಮತ್ತೆ ಒಂದೊಂದರಲ್ಲಿ ಹಲವಾರು ಪ್ರಕಾರಗಳನ್ನಾಗಿ ವಿದ್ವಾಂಸರು ವಿಭಾಗಿಸಿದ್ದಾರೆ. ಇಲ್ಲಿ ಈ ಅಧ್ಯಯನದಲ್ಲಿ "ಗೀತೆ"ಗಳಲ್ಲಿಯ ಒಂದು ಪ್ರಕಾರವಾದ 'ವೀರ ಗೀತೆ'ಗಳನ್ನು ಮಾತ್ರ ಸೈದಾಪೂರ್ ಅವರು ಅಧ್ಯಯನಕ್ಕೆ ತೆಗೆದುಕೊಂಡಿದ್ದಾರೆ.

ಕನ್ನಡ ನಾಡಿನಲ್ಲಿ ಹರಡಿರುವ ಅನೇಕ ವೀರಗೀತೆಗಳ ಅಭ್ಯಾಸದ ಬದಲಿಗೆ ಉತ್ತರ ಕರ್ನಾಟಕದ ವೀರಗೀತೆಗಳನ್ನು ಮಾತ್ರ ತೆಗೆದುಕೊಂಡು ಆ ಭಾಗದ ಜನಪದೀಯ ಸಂಸ್ಕೃತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ಜೊತೆಗೆ ಇವುಗಳ ವೈವಿಧ್ಯ ಪೂರ್ಣ ವಿವರಗಳನ್ನು ದಾಖಲಿಸಲು ಪ್ರಯತ್ನಿಸಿದ್ದಾರೆ. ಮಾನಸಿಕ ಮತ್ತು ದೈಹಿಕ ವೀರಗೀತೆಗಳೆಂದು ಇವರು ಪ್ರಬಂಧ ಮಂಡಿಸುವ ಕ್ರಮ ವಿಶಿಷ್ಟ ಮತ್ತು ವಿಚಿತ್ರವಾಗಿದೆ. ಒಟ್ಟಾರೆಯಾಗಿ ಇದೊಂದು ಕಥನ ಗೀತೆಗಳ ಕುರಿತಾದ (ಐತಿಹಾಸಿಕ) ಅಧ್ಯಯನವಾಗಿದೆ.

ಹೀಗೆ ಕಥನ ಗೀತೆಗಳನ್ನು ಕುರಿತಾಗಿ ಬೇರೆ ಬೇರೆ ರೀತಿಯಲ್ಲಿ ಅಧ್ಯಯನಗಳು ನಡೆದಿರುವುದು ಗೊತ್ತಾಗುತ್ತದೆ.

ಈ ಬಗೆಯ ಅಧ್ಯಯನಗಳು ನಡೆದಿರುವುದು ವಿರಳ ಹಾಗಾಗಿ ಈ ಅಧ್ಯಯನ ಮಾಡುತ್ತಲೇ. ಅಧ್ಯಯನ ವಿಧಾನವೊಂದನ್ನು ರೂಪಿಸಿಕೊಳ್ಳುವುದು ಸಂಶೋಧಕನ ಅಗತ್ಯ. ಅಂತಹ ತಿಳುವಳಿಕೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನ ವಿಧಾನವು ಮುಖ್ಯವಾಗಿ ಡಾ.ಮೊಗಳ್ಳಿ ಗಣೇಶ್ ಅವರು ಪ್ರತಿಪಾದಿಸುವ ದೇಸಿ ಸಂಶೋಧನ ವಿಧಾನವನ್ನು ಅನುಸರಿಸುತ್ತದೆ. ಅಂದರೆ ಕಥನಗೀತೆಗಳ ಅಂತರ್ಯದ ತುಡಿತಗಳು ದಾಖಲಾಗುತ್ತಲೇ, ಸಮುದಾಯಗಳ ಸಮಗ್ರದರ್ಶನ ಆಗುತ್ತದೆ.

'ಮೌಖಿಕ ಚರಿತ್ರೆ'ಗೆ ಹೆಚ್ಚು ಒತ್ತು ಕೊಡುವ ದೃಷ್ಟಿಯಿಂದ ಕಥನ ಗೀತೆಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗುಗಿದೆ. ಇದರ ಮೂಲಕ ಸಾಂಪ್ರದಾಯಿಕ ಇತಿಹಾಸದ 'ಸರಳ ರೇಖಾತ್ಮಕ

ಗ್ರಹಿಕೆ'ಯನ್ನು ಮೀರುವ ಪ್ರಯತ್ನ ಮಾಡಲಾಗಿದೆ. ಮೌಖಿಕ ಚರಿತ್ರೆಗೆ ಸಂಬಂಧಿಸಿದಂತೆ ಇತಿಹಾಸಕಾರರು ನೋಡಿರುವ ದೃಷ್ಟಿಕೋನ ಒಂದು ರೀತಿಯದ್ದಾದರೆ, ಜಾನಪದ ವಿದ್ವಾಂಸರ ದೃಷ್ಟಿಕೋನವೇ ಇನ್ನೊಂದು ರೀತಿಯದ್ದಾಗಿರುತ್ತದೆ. ಈ ವಿಚಾರಗಳನ್ನು ಈ ಅಧ್ಯಯನ ಸಮರ್ಪಕವಾಗಿ ವ್ಯಕ್ತಪಡಿಸುತ್ತದೆಂಬುದೇ ನನ್ನ ಅಭಿಪ್ರಾಯ. ಆದರೆ ಜನಪದ ಸಾಹಿತ್ಯವನ್ನೇ ಮುಖ್ಯ ಆಕರವಾಗಿಸಿಕೊಂಡು ಇಂತಹ ಅಂಶಗಳ ಅಧ್ಯಯನಕ್ಕೆ ತೊಡಗುವಾಗ ಜಾನಪದ ವಿದ್ವಾಂಸನಾಗಲೀ, ಇತಿಹಾಸಕಾರನಾಗಲೀ ಅನುಸರಿಸಬೇಕಾದ ಮಾರ್ಗಗಳು ತುಂಬಾ ಜಟಿಲವಾಗಿರುತ್ತವೆ. ಆದರೆ ಇತಿಹಾಸಕಾರರ ದೃಷ್ಟಿಯಲ್ಲಿ ಅದು 'ಮಾಹಿತಿಯ ದಾಖಲೆ ಮಾತ್ರ ಆಗುತ್ತದೆ. ಆದರೆ ಅದರ ಸಾಂಸ್ಕೃತಿಕ ಸಂದರ್ಭ, ಸಂಘರ್ಷಗಳು, ಕೊಡು ಕೊಳೆ ಇತ್ಯಾದಿಗಳಾವುವೂ ಮುಖ್ಯವಾಗದೇ ಹೋಗುತ್ತವೆ ಲಿಖಿತ ದಾಖಲೆಗಳು "ರಾಜ ಪ್ರತ್ಯಕ್ಷಾ ದೇವತಾ" ಅಂದರೆ ಮೌಖಿಕ ಸಂದರ್ಭದಲ್ಲಿ ಅದು "ರಾಜನ ಕಣ್ಣಿಗೆ ಬೀಳಬೇಡ" ಅಥವಾ "ಅರಮನೆಯ ಹತ್ತಿರ ಸುಳಿಯಬೇಡ ಎಂದಾಗುತ್ತದೆ. ಅಂದರೆ ಲಿಖಿತವೇ ಅಧಿಕೃತ ಎನ್ನುತ ಅದರ ಸುತ್ತಲೂ ಒಂದು ಪ್ರಭಾವಳಿಯನ್ನು ನಿರ್ಮಿಸುವ ಪ್ರಯತ್ನಕ್ಕೆ ಈ ತರದ ಮೌಖಿಕ ಆಕರಗಳು ಒಂದು ರೀತಿಯಲ್ಲಿ ತಡೆಗೋಡೆಯಂತೆ ಕಾಣುತ್ತವೆ. ಆ ಕಾರಣಕ್ಕಾಗಿಯೇ ಕಾಲದ ನೆಪವೊಡ್ಡಿ ಈ ಆಕರಗಳನ್ನು ಅಷ್ಟಾಗಿ ಪರಿಗಣಿಸಿದಂತೆ ಕಾಣುವುದಿಲ್ಲ. ಅಂದರೆ, ಇಲ್ಲಿ ಆಯಾ ಚಾರಿತ್ರಿಕ ಸಂದರ್ಭಗಳ ಹಿನ್ನೆಲೆಯಲ್ಲಿಯೇ ವ್ಯಕ್ತಿಗಳನ್ನು ಅಥವಾ ಘಟನೆಗಳನ್ನು ಪರೀಕ್ಷಿಸುವುದು, ವಿಶ್ಲೇಷಿಸುವುದು ಸೂಕ್ತ ಎನ್ನುವ ವಾದ ಬರುತ್ತದೆ. ಆದರೆ ಮೌಖಿಕ ಸಂದರ್ಭದಲ್ಲಿ ಇದು ಸಾಧ್ಯವಾಗದೇ ಹೋಗಬಹುದು. ಅಧ್ಯಯನದ ಅನುಕೂಲಕ್ಕಾಗಿ ಕೆಲವೇ ಕಥನಗೀತೆಗಳನ್ನು ಆಯ್ದುಕೊಂಡು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ನನ್ನ ಅಧ್ಯಯನದಲ್ಲಿ ಆರು ಅಧ್ಯಾಯನಗನ್ನು ಮಾಡಿಕೊಳ್ಳಲ್ಲಾಗಿದೆ.

ಮೊದಲನೇ ಅಧ್ಯಾಯವು ಅಧ್ಯಯನದ ವ್ಯಾಪ್ತಿ, ವಿಧಾನ, ಸ್ವರೂಪವನ್ನು ಒಳಗೊಂಡಿರುತ್ತದೆ.

ಎರಡನೇ ಅಧ್ಯಾಯವು ಮೌಖಿಕ ಚರಿತ್ರೆಯ ತಾತ್ವಿಕ ನೆಲೆಯನ್ನೊಳಗೊಂಡಿದೆ. ಇದರಲ್ಲಿ ಮೌಖಿಕ ಚರಿತ್ರೆಯ ತಾತ್ವಿಕತೆಯನ್ನು ಕುರಿತು ಚರ್ಚಿಸಲಾಗಿದೆ. ಅಂದರೆ, ದ್ರಾವಿಡ ಮೂಲ ಮೌಲ್ಯಗಳನ್ನು ಹಾಗೂ ಈ ಮೂಲಕ ತಮ್ಮದೇ ನೆಲದ ಗುಣವನ್ನು ಸಹಜವಾಗಿ ಹೊರಸೂಸುವ ದೀರ್ಘ ಕಥಾನಕಗಳು ನಮ್ಮಲ್ಲಿವೆ. ಈ ಕಥನಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನು ನಿರೂಪಿಸಬಲ್ಲಂಥ ಶಕ್ತಿ ಪಡೆದವುಗಳಾಗಿವೆ.

ಮೂರನೇ ಅಧ್ಯಾಯವು 'ಪರಂಪರೆ ಮತ್ತು ಚಾರಿತ್ರಿಕ ಪ್ರಜ್ಞೆ'. ಇದು ಮೌಖಿಕ ಪರಂಪರೆ, ಲಿಖಿತ ಪರಂಪರೆ, ಸ್ಥಳೀಯ ಕಥನ ಪರಂಪರೆ ಮತ್ತು ವಿಶ್ವಾತ್ಮಕ ಕಥನ ಪರಂಪರೆಗಳ ತಾತ್ವಿಕ ಸ್ವರೂಪವನ್ನು ಕುರಿತು ಮಾತಾಡುತ್ತದೆ.

ನಾಲ್ಕನೇ ಅಧ್ಯಾಯ 'ಚರಿತ್ರೆ ರಚನೆ ಮತ್ತು ಕಥನ ಗೀತೆಗಳು'. ಇಲ್ಲಿ ಕಥನ ಗೀತೆಗಳು ಶಿಷ್ಟ ಚರಿತ್ರೆಗಿಂತ ಭಿನ್ನವಾಗಿ ಸಾಂಸ್ಕೃತಿಕ ಚರಿತ್ರೆಯನ್ನು ಯಾವ ರೀತಿಯಲ್ಲಿ ದಾಖಲಿಸಿವೆ ಎಂಬುದನ್ನು ಮತ್ತು

ಸಮುದಾಯಗಳ ಸಾಮಾಜಿಕ, ಆರ್ಥಿಕ, ಮತ್ತು ಸಾಂಸ್ಕೃತಿಕ ಸಂಬಂಧಗಳ ತಾತ್ವಿಕ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

ಐದನೇ ಅಧ್ಯಾಯ 'ಕಥನಗೀತೆಗಳು ಮತ್ತು ಸಮಕಾಲೀನ ಸಮಾಜ'. ಈ ಅಧ್ಯಾಯದಲ್ಲಿ ಕಥನಗೀತೆಗಳ ಕುರಿತಂತೆ ಸಮಕಾಲೀನ ಸಂದರ್ಭದ ನಿರೂಪಣೆಗಳು ಮತ್ತು ತಳೆದ ನಿಲುವುಗಳು; ಮುಖ್ಯವಾಗಿ ಸಮುದಾಯಗಳು ಕಥನಗಳನ್ನು ಕಟ್ಟಿಕೊಳ್ಳುವುದರ ಜೊತೆಗೆ ಸಮಕಾಲೀನ ಸಂದರ್ಭದಲ್ಲಿ ಬದುಕನ್ನು ಹೇಗೆ ರೂಪಿಸಿಕೊಳ್ಳುತ್ತವೆ, ಪ್ರಭುತ್ವದ ಜೊತೆಗಿನ ಸಂಘರ್ಷದಲ್ಲಿ ಯಾವ ರೀತಿಯ ನಿಲುವುಗಳನ್ನು ತಾಳುತ್ತವೆ ಎಂಬುದಾಗಿದೆ.

ಆರನೇ ಅಧ್ಯಾಯ 'ಸಮಾರೋಪ'ವಾಗಿದೆ.

* * *

## ಅಧ್ಯಾಯ ೨

# ಮೌಖಿಕ ಪರಂಪರೆಯ ತಾತ್ವಿಕ ನೆಲೆ

ಸಂಸ್ಕೃತಿ ಅಧ್ಯಯನಕ್ಕೆ ಇಂದು ನಾವು ಮೌಖಿಕ ಆಕರಗಳನ್ನು ಅಥವಾ ಮೌಖಿಕ ಪರಂಪರೆಯನ್ನು ಪರಿಗಣಿಸಲೇಬೇಕು. ಇದಕ್ಕೆ ಕಾರಣಗಳು ಹಲವಾರು. ಅವುಗಳನ್ನು ವಿದ್ವಾಂಸರು ವಿಭಾಗಿಸಿದ ಆಧಾರದ ಮೇಲೆ ಹೇಳುವುದಾದರೆ ಭಾಷಿಕ ಬಗೆ, ಸಾಹಿತ್ಯಕ ಬಗೆ, ಕ್ರಿಯಾತ್ಮಕ ಬಗೆ, ಭೌತಿಕ ಸಂಸ್ಕೃತಿ, ಸಾಮಾಜಿಕ ಜನಪದ ಸಂಪ್ರದಾಯಗಳು. ಪ್ರದರ್ಶನಾತ್ಮಕ ಜನಪದ ಕಲೆಗಳು ಮತ್ತು ಮೌಖಿಕ ಸಾಹಿತ್ಯ. ಹೀಗೆ ಬೇರೆ ಬೇರೆ ವಿದ್ವಾಂಸರುಗಳು ವಿಂಗಡಿಸಿದ್ದಾರಾದರೂ ಕೊನೆಯಲ್ಲಿ ನಾವು ಪರಿಗಣಿಸಬೇಕಾದುದು ಮೌಖಿಕ ಸಾಹಿತ್ಯವನ್ನೇ. ಇಡೀ ಜಾನಪದದ ಸತ್ವ ಅಡಗಿರುವುದೇ ಈ ಮೌಖಿಕ ಸಾಹಿತ್ಯದಲ್ಲಿ. ಚರಿತ್ರೆಯನ್ನು ಪರಿಗಣಿಸಬೇಕಾದರೆ ನಾವು ಆಧಾರಗಳನ್ನು ಲಿಖಿತ ಮಾದರಿಗಳನನು ಅವಲಂಭಿಸುತ್ತೇವೆ. ಅವುಗಳ ಆಧಾರದ ಮೇಲೆಯೇ ನಾವು ಹೇಳಬೇಕಾದ ಚರಿತ್ರೆಯ ಕುರಿತು ಮಾತಾಡುತ್ತೇವೆ. ಆದರೆ ಆ ಆಧಾರಗಳ ಖಚಿತತೆ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಲಿಖಿತವಾದವುಗಳು ಖಚಿತವಾಗಿರತ್ತವೆ ಎಂಬ ನಂಬಿಕೆ; ಶಾಸನ, ನಾಣ್ಯ, ಕಡತಗಳು ಇತ್ಯಾದಿಗಳೆಲ್ಲ ಚರಿತ್ರೆ ರಚನಾ ಸಾಮಗ್ರಿಗಳು. ಇದು ಶಿಷ್ಟ ಮಾದರಿ ಇತಿಹಾಸ ರಚನಾ ಮಾದರಿಗಳು. ಇತಿಹಾಸವನ್ನು ನಾವು ಇನ್ನೊಂದು ಬಗೆಯ ಆಧಾರಗಳ ಮೇಲೆಯೂ ರಚಿಸಬಹುದು. ಅದು ಮೌಖಿಕ ಆಧಾರಗಳು, ಐತಿಹ್ಯ ಕಥನ ಗೀತೆಗಳು, ಲಾವಣಿಗಳು, ಇತ್ಯಾದಿಗಳೇ ಆ ಆಧಾರಗಳು. ಇವುಗಳನ್ನು ಮೌಖಿಕ ಇತಿಹಾಸಕ್ಕೆ ಸೇರಿಸಲಾಗಿದೆ. ಈ ಆಧಾರಗಳು ಒಂದಲ್ಲಾ ಒಂದು ರೀತಿಯ ಸತ್ಯವನ್ನು ಬಚ್ಚಿಟ್ಟು ಕೊಂಡಿರುತ್ತವೆ. ಚರಿತ್ರೆಕಾರರು ಜಾನಪದ ವಿದ್ವಾಂಸರು ಈ ತರಹದ ಸಾಮಗ್ರಿಯನ್ನು ತಮ್ಮ ಬರಹಗಳಲ್ಲಿ ಬಳಸಿಕೊಂಡು, ಮೌಖಿಕ ಆಕರಗಳನ್ನು ಚರಿತ್ರೆ ರಚನೆಯತ್ತ ಕೊಂಡೊಯ್ದಿದ್ದಾರೆ. ಅವರಲ್ಲಿ ಎಲ್.ಗುಂಡಪ್ಪ, ಮಾಸ್ತಿ ವೆಂಕಟೇಶ ಐಯ್ಯಂಗಾರ, ನಂ.ನಾರಯಣಗೌಡ, ಕ.ರಾ.ಕೃ ಮತಿಘಟ್ಟರಾಮಸ್ವಾಮಿ, ಮಹದೇವ ಬಣಕಾರ, ಚಂದ್ರಶೇಖರ ಕಂಬಾರ, ಎಂ.ಚಿದಾನಂದ ಮೂರ್ತಿ, ಕಾಳೇಗೌಡ ನಾಗವಾರ, ಜೀ.ಶಂ.ಪರಮಶಿವಯ್ಯ, ಮುಂತಾದವರ ಸಂಗ್ರಹಗಳು ಮೌಖಿಕ ಆಕರಗಳಾಗಿ ಬಳಕೆಯಾಗಿವೆ.

ಇತಿಹಾಸದ ಪ್ರಜ್ಞೆಯನ್ನು ಜನಪದ ಸಮಾಜಗಳು ತಮ್ಮ ಪರಂಪರೆಯಿಂದ ಪಡೆದುಕೊಂಡಿರುತ್ತವೆ. ಹೀಗಾಗಿ ಏಕ ಕಾಲಕ್ಕೆ ಪರಂಪರೆ ಮತ್ತು ಇತಿಹಾಸ ಜನಪದ ಸಮಾಜಕ್ಕೆ ಜೀವನಕ್ರಮವಾಗಿದೆ. ಅಂದರೆ ಮೌಖಿಕ ಇತಿಹಾಸ ಯಾವತ್ತೂ ಸಮಷ್ಠಿಯ ಸೃಷ್ಠಿ; ಇದು ಸಮಷ್ಠಿಗೆ ಬದ್ಧವಾಗಿರುತ್ತೆ ಅನ್ನುವುದು ಹಲವಾರು ಉದಾಹರಣೆಗಳ ಮೂಲಕ ನಮಗೆ ಗೊತ್ತಾಗುತ್ತದೆ. ಅದು ಗೀತೆ, ಕಥೆ, ಒಗಟು, ಗಾದೆ,ಲಾವಣಿ, ಹೀಗೆ ಹಲವಾರು ಜನಪದ ಸಾಹಿತ್ಯದ ಪ್ರಕಾರಗಳನ್ನು ಉದಾಹರಿಸಬಹುದು.

ಮೌಖಿಕ ರೂಪದಲ್ಲಿ ಲಭ್ಯವಿರುವ ಮಾಹಿತಿಗಳನ್ನು ಬಳಸಿಕೊಂಡು ಅವನ್ನು, ಮುಖ್ಯ ಆಕರವನ್ನಾಗಿಸಿಕೊಂಡು ಬರೆಯುವ ಇತಿಹಾಸಕ್ಕೆ ನಾವು 'ಮೌಖಿಕ ಇತಿಹಾಸ', ಎಂದು ಕರೆಯಬಹುದು. ಇದಕ್ಕೆ ಪರ್ಯಾಯವಾಗಿರುವ ಇತಿಹಾಸ 'ಲಿಖಿತ ಇತಿಹಾಸ', ಇದು ಪಾರಂಪರಿಕವಾಗಿ ಗತವನ್ನು ಅಧ್ಯಯನ ಮಾಡುವ ಕ್ರಮ. ಡಾ.ಮೊಗಳ್ಳಿ ಗಣೇಶ್ ಅವರ ಅನೇಕ ಬರಹಗಳಲ್ಲಿಯೂ ಈ ಕುರಿತು ಚರ್ಚಿಸಿರುವುದನ್ನು ಕಾಣಬಹುದು. 'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ' ಎಂಬ ವಸಾಹತುಷಾಹಿಯ ವಾದನ್ನು ಮುರಿದು, ದೇಶೀಯ ನೆಲೆಯಲ್ಲಿ, ಸಮಷ್ಠಿ ವಿವೇಕದಿಂದ ನಮ್ಮ ಚರಿತ್ರೆಯನ್ನು ಪುನರ್ ವ್ಯಾಖ್ಯಾನಿಸಿಕೊಳ್ಳುವ ಅಗತ್ಯವನ್ನು ೨೦ನೇ ಶತಮಾನದ ವೈಚಾರಿಕ ಗದ್ಯ ನಮಗೆ ತೋರಿಸಿಕೊಟ್ಟಿದೆ. ಆಧುನಿಕ ಸಂದರ್ಭದ ಗದ್ಯ ಸಮಕಾಲೀನ ಚಾರಿತ್ರಿಕ ಕ್ರಮವನ್ನು ನಿರೂಪಿಸಿದರೆ, ಮೌಖಿಕ ಪರಂಪರೆಯು ಬಹುರೂಪಿ ಸಾಹಿತ್ಯದ ಅಲಕ್ಷಿತರ ಇತಿಹಾಸವನ್ನು ಭಿನ್ನ ನೆಲೆಯಲ್ಲಿ ಕಟ್ಟಿ ಕೊಡುತ್ತದೆ. ಚರಿತ್ರೆಯ ಕುರಿತಾದ ಪಾಶ್ಚಿಮಾತ್ಯ ದೃಷ್ಟಿಕೋನ, ಒಂದು ರೀತಿಯಲ್ಲಿದ್ದರೆ 'ರಾಷ್ಟ್ರೀಯ'ವೆನ್ನುವ ಮಾದರಿಯ 'ಹಿಂದುತ್ವ' ಎನ್ನುವ ಪ್ರಜ್ಞೆಯೊಂದಿಗೆ ಸಮಷ್ಠಿ ಸಮುದಾಯಗಳ ಲೋಕ ದೃಷ್ಟಿಯನ್ನು ಮೀರಿ, ಅವುಗಳ ಚಾರಿತ್ರಿಕ ಪ್ರಜ್ಞೆಯನ್ನು ಒಳಗೊಳ್ಳದೇ ತನ್ನ ಸಾಂಸ್ಕೃತಿಕ ಹಿರಿಮೆಯಲ್ಲಿ ತನ್ನಿಷ್ಟಕ್ಕೆ ಬೇಕಾದ್ದನ್ನೂ ಆಯ್ಕೆ ಮಾಡಿಕೊಂಡು ಬೆಳೆದಿರುವುದು ಕಾಣುತ್ತದೆ. ಚಾರಿತ್ರಿಕ ವಿವರಗಳು ಯಾವತ್ತೂ ಅಂತಿಮವಲ್ಲ. ಅದರ ಲಿಖಿತ ವಿವರಗಳು ಸಮುದಾಯಗಳ ಹೊರ ರೂಪವನ್ನು ತಿಳಿಸಿದರೆ ಅಲಿಖಿತ ಅಥವಾ ಮೌಖಿಕ ಮಾಹಿತಿಗಳು ಆ ಸಮುದಾಯಗಳ ತಾತ್ವಿಕ ಸಂಬಂಧದ ತಿರುಳನ್ನು ಕಥನ ರೂಪದಲ್ಲಿ, ಜೀವಂತವಾಗಿರಿಸುತ್ತದೆ. ಜನಪದರು ಇಂತಹ ಹಾದಿಯಲ್ಲಿ ಏಕಕಾಲಕ್ಕೆ ಬಹುರೂಪವನ್ನು ಪ್ರವೇಶಿಸಲು ಸಾಧ್ಯವಾಗುತ್ತದೆ. ಹೀಗಾಗಿ ಚರಿತ್ರೆಯು ಜನಪದರ ಸೃಷ್ಟಿಯಾದ ಮೌಖಿಕ ನಿರೂಪಣೆಗಳಿಗೆ ಒಂದೇ ಅವಧಿಯಲ್ಲಿ ಹಲವು ಕಾಲ, ಸಂವೇದನೆಗಳನ್ನು ಸಮಾನವಾಗಿ ನಿರೂಪಿಸುತ್ತದೆ. ಈ ಕಾರಣಗಳಿಂದಾಗಿಯೇ ಆದಿ ಮಾನವನ ಚರಿತ್ರೆಯನ್ನು ಯಾವುದೋ ಐತಿಹ್ಯ, ಪುರಾಣ ಅಥವಾ ಆಚರಣೆಯಲ್ಲೋ ರೂಪಕ ಪ್ರತಿಭೆಯನ್ನಾಗಿ ಮಾಡಿ ಚರಿತ್ರೆಯನ್ನು ನಿಂತ ನೀರಾಗಿಸದೇ ಸದಾ ಹರಿಯುವಂತೆ ಮಾಡಿ, ಅದನ್ನು ಜೀವಂತವಾಗಿರಿಸಿದೆ.

ಹೀಗೆ ಚರಿತ್ರೆಯನ್ನು ಕಟ್ಟುವಾಗ ಮೌಖಿಕ ಸಾಹಿತ್ಯವನ್ನು ಬಳಸಿಕೊಂಡು ತನ್ನದೇ ನೆಲೆಯಲ್ಲಿ ಚರಿತ್ರೆಯನ್ನು ಬಲಪಡಿಸಿಕೊಳ್ಳುವ ಪ್ರಜ್ಞೆ ಮೂಲತಃ ಬಂದದ್ದು ಯೂರೋಪಿನಿಂದ ಅದರಲ್ಲೂ ಮುಖ್ಯವಾಗಿ ಅಮೇರಿಕಾದ ಬಹುಮೂಲದ ಸಮುದಾಯಗಳಿಗೆ ತಮ್ಮದೇ ಆದ ಒಂದೊಂದು ಚರಿತ್ರೆ ಅವರಿಗೆ ಬೇಕಿತ್ತಾದರೂ, ಅವರಿಗೆ ಖಚಿತವಾದ, ದೀರ್ಘವಾದ ಚರಿತ್ರೆಯೇ ಇರಲಿಲ್ಲ, ವಿಶ್ವದ ಬೇರೆ ಬೇರೆ

ಕಡೆಗಳಿಂದ ಹೋಗಿ ಅಮೇರಿಕಾದಲ್ಲಿ ನೆಲೆಸಿದ ಯುರೋಪಿಯನ್ನರಿಗೆ ಸಿಕ್ಕ ಸಣ್ಣ ಪುಟ್ಟ ಮಾಹಿತಿಯು ಜಾನಪದ ಮೂಲದ್ದೇ ಆದರೂ ಅದು ತುಂಬಾ ನಿಖರವಾಗಿರಲಿಲ್ಲ, ಆ ಕಾರಣಕ್ಕಾಗಿಯೇ ಅವರು ಆತ್ಮಕತೆ, ಜೀವನ ಚರಿತ್ರೆ, ಲಾವಣಿ, ಕಥೆ, ಮತ್ತು ವೈಯಕ್ತಿಕವಾದ ಹಳೆಯ ಮಾಹಿತಿಗಳನ್ನು ಒಟ್ಟು ಗೂಡಿಸಿ ಆ ಮೂಲಕ ಚರಿತ್ರೆಯಲ್ಲಿ ಹೊಸದಾಗಿ 'oral History'ಎಂಬ ಪರಿಕಲ್ಪನೆಯನ್ನು ೧೯೩೦ರ ವೇಳೆಗೆ ಸೃಷ್ಠಿಸಿದರು.| ಮೌಖಿಕ ಚರಿತ್ರೆಯನ್ನು ಈ ಬಗೆಯಲ್ಲಿ ಬಲವಾಗಿ ಪ್ರತಿಪಾದಿಸಿದವನೆಂದರೆ ಅಲನ್ ನಿವೇನ್ಸ್. ಈತನನ್ನು 'Father of oral History'ಎಂದು ಗುರುತಿಸಲಾಗಿದೆ. ಆದರೆ ಇದಕ್ಕೂ ಮುನ್ನ ರಿಚರ್ಡ್ ಎಂ.ಡಾರ್ಸನ್ ಈ ಕುರಿತು ಮೊದಲ ಬಾರಿಗೆ ಒಂದು ದೃಷ್ಟಿಕೋನವನ್ನು ಹುಟ್ಟುಹಾಕಿದ. ನಮ್ಮ ಅನೇಕ ಜಾನಪದ ವಿದ್ವಾಂಸರು ಚಿಕ್ಕ ಚಿಕ್ಕ ಮೌಖಿಕ ಕಥನಗಳನ್ನು ಮುಂದಿಟ್ಟು ಕೊಂಡು ಮೌಖಿಕ ಚರಿತ್ರೆಯ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಹೀಗೆ ಮೌಖಿಕ ಚರಿತ್ರೆಯ ಅಧ್ಯಯನದ ಹಿನ್ನೆಲೆಯನ್ನು ವ್ಯಕ್ತಿ ಚರಿತ್ರೆಯಲ್ಲಿ, ಸಮುದಾಯ ಚರಿತ್ರೆಯಲ್ಲಿ, ಪ್ರಾದೇಶಿಕ ಚರಿತ್ರೆಯಲ್ಲಿ, ಕಂಡುಕೊಳ್ಳುತ್ತೇವೆ. ಆದರೆ ಅಮೇರಿಕಾದ ಚರಿತ್ರೆಕಾರರ ನಿಲುವಿಗೂ ನಮ್ಮ ತಾತ್ವಿಕ ನಿಲುವಿಗೂ ತುಂಬಾ ಅಂತರಗಳಿರುವುದನ್ನು ಕಾಣಬಹುದು. ಡಾ.ಮೊಗಳ್ಳಿ ಗಣೇಶ್ ಅವರು ಮೌಖಿಕ ಚರಿತ್ರೆಯ ತಾತ್ವಿಕ ಅಂಶಗಳನ್ನು ಕುರಿತು ಬೀಜ ರೂಪದ ಕೆಲವು ಹೇಳಿಕೆಗಳನ್ನು ಈ ರೀತಿಯಾಗಿ ಹೇಳುತ್ತಾರೆ.

* ಇದು ಬಹುರೂಪಿ ಪರ್ಯಾಯ ಸಂವೇದನೆಯಿಂದ ಕೂಡಿರುತ್ತದೆ.
* ಚರಿತ್ರೆಯನ್ನು ವಿಕೇಂದ್ರಿತ ಪ್ರಜ್ಞೆಯಿಂದ ನಿರೂಪಿಸಬಹುದು.
* ಕಥನ ಸಾಕ್ಷಿಯ ರೂಪಕಗಳಿಂದ ನಿರೂಪಿಸಬಹುದು.
* ಚರಿತ್ರೆಯನ್ನು ದಾಖಲಿಸುವುದಕ್ಕಿಂತ ಚರಿತ್ರೆಯ ಪ್ರಜ್ಞೆಯನ್ನು ವಿಸ್ತರಿಸುತ್ತದೆ.
* ಆಧಾರ ನಿಷ್ಠವಾಗಿರದೇ, ಅನುಭವ ನಿಷ್ಠವಾಗಿರುತ್ತದೆ.
* ಪ್ರಾದೇಶಿಕ ವಿವರಗಳಿಂದ ರಾಷ್ಟ್ರೀಯ ರೂಪಕವನ್ನು ನಿರ್ಮಿಸುತ್ತದೆ.
* ಅನುಭವದಿಂದ ಅನುಭವಕ್ಕೆ ವಿಸ್ತರಿಸಿ ಕಾಲಾತೀತ ಕಲ್ಪನೆಯನ್ನು ಬಿತ್ತುತ್ತದೆ.

ಈ ಎಲ್ಲಾ ಪ್ರಮುಖ ಅಂಶಗಳಲ್ಲಿ ಮೌಖಿಕ ಪರಂಪರೆಯನ್ನು ವಿಭಿನ್ನ ನೆಲೆಗಳಲ್ಲಿ ಗುರುತಿಸಿಕೊಳ್ಳುತ್ತಲೇ ಚರಿತ್ರೆಯ ಕಥನದ ಆಳವನ್ನು ಪ್ರವೇಶಿಬಹುದು. ಯಾವುದೇ ಒಂದು ಅಭಿವ್ಯಕ್ತಿಯು ಸೃಜನಶೀಲ ನೆಲೆಯಲ್ಲಿ ಜನಮುಖಿಯಾಗಬೇಕಾದರೆ ಈ ಮೇಲಿನ ಎಲ್ಲಾ ಅಂಶಗಳೂ ಕೂಡ ಹಳೆಯ ಅರ್ಥಗಳನ್ನು ಕಳಚಿ ಹೊಸ ಧ್ವನಿಯ ಅಸ್ತಿತ್ವಕ್ಕೆ ಕಾರಣವಾಗುತ್ತವೆ.

ಲಿಖಿತ ಪರಂಪರೆಯು ಹಿಂದಿನ ಕಾಲದ ಅಶಿಕ್ಷಿತ ಜನರ ಬಗ್ಗೆ ಏನನ್ನೂ ತಿಳಿಸುವುದಿಲ್ಲ. ಸಾಂಸ್ಕೃತಿಕವಾದ ಕೆಲವು ವಿವರಗಳನ್ನು ಬಿಟ್ಟರೆ ಬೇರೆ ವಿವರವಾದ ಯಾವ ಮಾಹಿತಿಯೂ ದೊರಕುವುದಿಲ್ಲ. ಕೇವಲ ಅವರ ಸಾವು, ನೋವು, ದುರಂತಗಳ ಬಗ್ಗೆಯಷ್ಟೇ ಮಾತಾಡುತ್ತದೆ. ಆದರೆ ಅವರ ಜೀವನದ ವಾಸ್ತವಿಕ ಅಂಶಗಳ ಬಗ್ಗೆ ಏನನ್ನೂ ತಿಳಿಸುವುದಿಲ್ಲ. ಮೌಖಿಕ ಪರಂಪರೆಯಲ್ಲಿಯ ಅಂಶಗಳು ಲಿಖಿತ ಪರಂಪರೆಯ ಅಂಶಗಳಿಗಿಂತಲೂ ತುಂಬಾ ಮಹತ್ವದ್ದಾಗಿರುತ್ತವೆ. ಲಿಖಿತ ಪರಂಪರೆಯಲ್ಲಿ ರಾಜನನ್ನು

ಕುರಿತು ಅವನ ಗುಣಗಳನ್ನು ವೈಭವೀಕರಿಸಿ ಅವನನ್ನು ಹೊಗಳಿದರೆ, ಮೌಖಿಕ ಪರಂಪರೆಯ ದಾಖಲೆಗಳಲ್ಲಿ ಅವನ ದುಷ್ಟತೆ, ಕ್ರೂರತೆ, ಸ್ವಾರ್ಥತೆ, ಮುಂತಾದ ಹಿಂಸಾತ್ಮಕ ವಿವರಗಳು ಸಿಗುತ್ತವೆ. ಲಿಖಿತ ಪರಂಪರೆಯು ಆಡಳಿತ ವರ್ಗದ, ಶಿಕ್ಷಣ ಹೊಂದಿದವರ ರಚನೆಗಳೆಂಬುದು ಗೊತ್ತು. ಸಾಹಿತ್ಯ, ಶಾಸನ, ಪ್ರವಾಸಿ ಬರವಣಿಗೆಗಳು ಎಲ್ಲವೂ ಆಡಳಿತ ವರ್ಗದವರನ್ನು ಮೆಚ್ಚಿಸುವ ಸಲುವಾಗಿಯೇ ಬರೆಯಲ್ಪಟ್ಟ ಬರಹಗಳೆಂಬುದು ಅವುಗಳ ವಿವರಗಳಿಂದ ತಿಳಿಯುತ್ತದೆ. ಇವುಗಳು ಇತಿಹಾಸಕ್ಕೆ ಪೂರಕವಾಗಿವೆಯಾದರೂ ಈ ರೀತಿಯ ಸಾಮಾಜಿಕ, ಆರ್ಥಿಕವಾಗಿ ಮೇಲ್ಮಟ್ಟದಲ್ಲಿರುವವರನ್ನು ಕುರಿತಾದ ಇತಿಹಾಸವನ್ನು ರಚಿಸುವಲ್ಲಿ ಸಹಾಯಕ್ಕೆ ಬರುವಂತಹ ಐತಿಹಾಸಿಕ ಆಕರ ಸಾಮಗ್ರಿಗಳಾಗುತ್ತವೆ.

ಇತಿಹಾಸದ ಪ್ರಜ್ಞೆಯನ್ನು ಜನಪದ ಸಮಾಜಗಳು ತಮ್ಮ ಪರಂಪರೆಯಿಂದ ಪಡೆದುಕೊಂಡಿರುತ್ತವೆ. ಪರಂಪರೆ ಎಂದಾಕ್ಷಣ ಕೇವಲ ಎರಡು ಅಥವಾ ಮೂರು ತಲೆಮಾರುಗಳ ಅನುಭವ ಎಂದರ್ಥವಲ್ಲ. ಅದು ಹಲವಾರು ತಲೆಮಾರುಗಳ ಅನುಭವ ಕಥನವಾಗಿರುತ್ತದೆ. ಆ ಕಾರಣಕ್ಕಾಗಿ ಜನಪದ ಸಮಾಜಕ್ಕೆ ಇತಿಹಾಸ ಮತ್ತು ಪರಂಪರೆಗಳೆರಡೂ ಜೀವನ ಕ್ರಮವಾಗಿರುತ್ತವೆ. ಈ ಜೀವನ ಕ್ರಮವೇ ಸಮಷ್ಟಿಯ ಸೃಷ್ಟಿಗೆ ಕಾರಣವಾಗಿ ಹಲವಾರು ಪ್ರಕಾರಗಳಲ್ಲಿ ಕಾಣಿಸಿಕೊಳ್ಳುತ್ತದೆ. ಜೊತೆಗೆ ಇದು ಸಮುದಾಯಗಳಿಗೆ ಸಾಂಸ್ಕೃತಿಕ ಪ್ರತಿರೋಧ ಶಕ್ತಿಯನ್ನು ತಂದು ಕೊಡುತ್ತದೆ. ಆ ಕಾರಣಕ್ಕಾಗಿಯಾದರೂ 'ಚಾರಿತ್ರಿಕ ಎಚ್ಚರ' ಎನ್ನುವ ಪರಿಭಾಷೆಯಿಂದ ಗುರ್ತಿಸಬೇಕು. ಹೀಗಾಗಿಯೇ ಮೌಖಿಕ ಇತಿಹಾಸದ ತಾತ್ವಿಕತೆ ಎಂದರೆ ಸಮಷ್ಟಿ ಸಾಂಸ್ಕೃತಿಕ ಕಥನ ಎಂದು ಭಾವಿಸಬೇಕಾಗಿದೆ. ಸಾಂಸ್ಕೃತಿಕ ಇಚ್ಛೆಯ ಮೂಲಕ ತೆರೆದುಕೊಳ್ಳುವ ಮೌಖಿಕ ಇತಿಹಾಸ ಪ್ರಭುತ್ವದ ಆರಾಧನೆಯಲ್ಲಿ ಗುರ್ತಿಸಿಕೊಳ್ಳುವುದಿಲ್ಲ. ರಾಜಶಾಹಿಯ ಒಟ್ಟಾರೆ ಸಾಮರ್ಥ್ಯವನ್ನೆಲ್ಲ ಸಾಮಾನ್ಯವಾಗಿ ತನ್ನ (ಕಥನ) ಕಾವ್ಯಗಳ ನಾಯಕರಾದ ಕುಂಟ, ಕಿವುಡ, ಅಂಗವಿಕಲ, ತಬ್ಬಲಿ, ಇಂತಹ ದುರ್ಬಲ ಪಾತ್ರಗಳ ಮೂಲಕವೇ ಗೇಲಿ ಮಾಡಿ ಬಿಡುತ್ತದೆ. ಹಿಂದೂ ಸಾಮ್ರಾಜ್ಯದ ಟೊಳ್ಳುತನ ಎಂತಹುದು ಎಂಬುದನ್ನು ವ್ಯಂಗ್ಯಮಾಡಿ ತೋರಿಸುವ ಜನಪದ ಕಾವ್ಯಗಳ ಮನೋಧರ್ಮ ಈ ಬಗೆಯದ್ದು. ಅಂದರೆ, ಪ್ರಭುತ್ವವನ್ನು ಫ್ಯಾಂಟಸಿಯ ಮೂಲಕ ವಿಮರ್ಶಿಸುವ, ಅದರ ದೌರ್ಬಲ್ಯಗಳನ್ನು ಗುರ್ತಿಸುವ, ಲೋಲುಪತೆಯನ್ನು ವಿಡಂಬಿಸುವ ಗುಣಗಳನ್ನು ಮೌಖಿಕ ಆಕರಗಳು ಹೊಂದಿರುತ್ತವೆ. ಮುಖ್ಯವಾಗಿ ನಾವು ಈ ರೀತಿಯ ವಿಡಂಬನಾ ಸ್ವಭಾವ ಮಧ್ಯಕಾಲೀನ (ಇತಿಹಾಸದ) ಸಾಮ್ರಾಜ್ಯಗಳ ವಿಷಾದಯೋಗವನ್ನು ರಮಣೀಯತೆ ಅಥವಾ ರಮ್ಯ ಕಲ್ಪನೆಯಲ್ಲಿ ಜನಪದ ಕಾವ್ಯಗಳ ಮೂಲಕ ಹಾಡಿ ತೋರಿಸಿರುವುದನ್ನು ಕಾಣಬಹುದು. ಮೌಖಿಕ ಇತಿಹಾಸ ಪ್ರಾದೇಶಿಕತೆ ಮೂಲಕ ವಿಶ್ವಾತ್ಮಕವಾಗುವ ಕಡೆ ತನ್ನ ಅಸ್ತಿತ್ವ ಸಾಬೀತುಗೊಳಿಸಿಕೊಳ್ಳುತ್ತಿರುತ್ತದೆ. ಈ ಮೌಖಿಕ ಪರಂಪರೆಯು ಜಾಗತಿಕವಾದರೂ ಅದು 'ಪ್ರಾದೇಶಿಕತೆ'ಯ ಸಾಮಾನ್ಯ ರೂಪದಲ್ಲಿಯೇ ನಮಗೆ ಕಂಡು ಬರುತ್ತದೆ. ಒಂದರ್ಥದಲ್ಲಿ ಇದು ಸಾರ್ವತ್ರಿಕ ಸಂವೇದನೆ. ಪ್ರಾದೇಶಿಕವಾಗಿ ಪ್ರಾತಿನಿಧಿಕ ಭಿನ್ನತೆಗಳೊಂದಿಗೇ ಜಾಗತಿಕ ಸೂಕ್ಷ್ಮತೆಯನ್ನು ಹೊಂದಿದೆ. ಅಂದರೆ, ಜಗತ್ತಿನ ಉದ್ದಕ್ಕೂ ಭಿನ್ನ ಧಾರೆ, ಸ್ವರೂಪ, ಚಹರೆಗಳಲ್ಲಿ ಚಾಚಿಕೊಂಡಿರುವ ಅಸಂಖ್ಯಾತ ಪ್ರಾದೇಶಿಕ ಮೌಖಿಕ ಇತಿಹಾಸ ಕಥನಗಳು ಇವೆ. ಆದರೆ 'ಶಿಷ್ಟ' ಜಗತ್ತಿನ ಇತಿಹಾಸ ಪುಟಗಳಲ್ಲಿ

ಇವುಗಳ ದಾಖಲೆ ಅಲ್ಪ. ವಾಸ್ತವವಾಗಿ ಜಗತ್ತಿನಲ್ಲಿ ಅತೀ ಹೆಚ್ಚು ಮಾದರಿಗಳಲ್ಲಿ ಕಾಣಿಸಿಕೊಂಡಿರುವ ಜೀವಂತ ಇತಿಹಾಸವೆಂದರೆ ಮೌಖಿಕ ಇತಿಹಾಸ. ಇಲ್ಲಿ ಮಾದರಿ ಎಂದರೆ ರೂಪಗಳು ಎನ್ನುವ ಅರ್ಥದಲ್ಲಿ ಬಳಸಲಾಗಿದೆ. ಅಂದರೆ ಮೌಖಿಕ ಪರಂಪರೆಯಲ್ಲಿ ಬರುವ ಗೀತೆ, ಕಥೆ, ಗಾದೆ, ಲಾವಣಿ, ಒಗಟು ಇತ್ಯಾದಿ ಪ್ರಕಾರಗಳೆಂದರ್ಥ. ಹೀಗೆ ಅಸಂಖ್ಯ ಧಾರೆಗಳಲ್ಲಿ ಜೀವಂತವಾಗಿರುವ ಇತಿಹಾಸವೇ ಆಗಿರುವುದರಿಂದ ಇದನ್ನು 'ಜಾಗತಿಕ ಇತಿಹಾಸ' ಎಂಬ ನೆಲೆಯಲ್ಲಿ ಪರಿಭಾವಿಸುವ ಕ್ರಮ ನಮ್ಮ ಇತ್ತೀಚಿನ ಬಹುತೇಕ ಅಧ್ಯಯನಗಳಲ್ಲಿ ನಡೆಯುತ್ತಿರುವುದನ್ನು ಕಾಣಬಹುದಾಗಿದೆ.

ಜನಪದ ಸಮಾಜದ ರಚನೆಯಲ್ಲಿ ದೇಶೀ ಕಥನಗಳು ರೂಪಿಸುವ ಸಾಂಸ್ಕೃತಿಕ ಬಂಧುತ್ವದ ಜೊತೆಗೆ ಚರಿತ್ರೆಯ ಬಂಧುತ್ವವನ್ನು ಹೇಳುತ್ತವೆ. ಈ ಬಗೆಯ ದೇಶೀ ಕಥನಗಳು ತಳಸಮುದಾಯಗಳ ಆತ್ಮಕಥನಗಳೂ ಆಗಿರುತ್ತವೆ. ಇವುಗಳು ಆಯಾ ಸಮುದಾಯಗಳ ಚರಿತ್ರೆಯನ್ನು (ಕಥನಗಳನ್ನು) ನಿರೂಪಿಸುತ್ತವೆ. ಆ ಚರಿತ್ರೆಯು ಕಟ್ಟಿ ಕೊಡುವ ಸಂಗತಿಗಳು ಯಾವಾಗಲೂ ಒಂದು ಗತಿಶೀಲತೆಯನ್ನು ಆಧರಿಸಿರುತ್ತವೆ, ಅವುಗಳ ಮಾದರಿಯಲ್ಲಿ ವ್ಯತ್ಯಾಸವಾಗುವ ಸಾಧ್ಯತೆಯಿದ್ದಾಗ್ಯೂ ಕೂಡ ಕಥನದಲ್ಲಿ, ಮತ್ತು ಅಭಿವ್ಯಕ್ತಿ ಕ್ರಮದಲ್ಲಿ ಯಾವುದೇ ವ್ಯತ್ಯಾಸಗಳಾಗುವುದಿಲ್ಲ. ಇವು ಸಂಸ್ಕೃತಿಯ ಇಚ್ಛಾಶಕ್ತಿ ಎಂಬುದು ಈ ವಿವರಗಳಿಂದ ತಿಳಿದು ಬರುವ ಸಂಗತಿಯಾಗಿದೆ. ದೇಶೀ ಕಥನಗಳು ಬಿಂಬಿಸುವ ಬಂಧುತ್ವ ಬಾಹ್ಯವಾಗಿ ಕಾಣಿಸುವುದಿಲ್ಲವಾದರೂ ಅದು ಆಂತರಿಕವಾಗಿರುತ್ತದೆ. ಅಂದರೆ, ಆಚರಣೆ ಮತ್ತು ಸುಪ್ತ ಮನಸ್ಸಿನ ಸ್ತರಗಳಲ್ಲಿ ಮಾತ್ರ ಅದು ಅನಾವರಣಗೊಳ್ಳುತ್ತಿರುತ್ತದೆ. ಕನ್ನಡದ ಮಟ್ಟಿಗೆ ಇದು ನಿಜವೆನಿಸುತ್ತದೆ. ಕನ್ನಡದ ದೇಶೀ ಕಥನಗಳು ಸಮುದಾಯದ ಆಂತರಿಕ ಬಂಧುತ್ವವನ್ನು ಗುಪ್ತವಾಗಿ ನಿರೂಪಿಸಿದ್ದರಿಂದಲೇ ತಳ ಸಮುದಾಯಗಳಿಗೆ ಒಂದೊಂದು ಬಗೆಯ, ಭಿನ್ನ, ಭಿನ್ನ ಬಗೆಯ ಕಾವ್ಯಗಳು ಸಾಧ್ಯವಾಗಿರುವುದು. ಉದಾಹರಣೆಗೆ ಜುಂಜಪ್ಪ, ಮಂಟೇಸ್ವಾಮಿ, ಮಲೆಮಾದೇಶ್ವರ, ಮೈಲಾರಲಿಂಗ, ಸಿರಿಯಂತಹ ಸಮುದಾಯ ನಿಷ್ಠ ಕಥನಗಳು ಸಾಂಸ್ಕೃತಿಕ ಬಂಧುತ್ವವನ್ನು ಸಾಮರಸ್ಯದ ನೆಲೆಯಲ್ಲೇ ನಿರೂಪಿಸಿವೆ. ಈ ಮುಖಾಂತರ ಅವು ಸಮುದಾಯಗಳ ಆತ್ಮಕಥನಗಳಾಗಿ ಬೆಳೆದಿವೆ. ಹಾಗೂ ಮೌಖಿಕ ಇತಿಹಾಸವನ್ನು ಸಾಂಸ್ಕೃತಿಕ ಪಾತಳಿಯ ಮೇಲೆಯೇ ನಿರೂಪಿಸುತ್ತವೆ. ಆ ಕಾರಣಕ್ಕಾಗಿ ಮೌಖಿಕತೆಯು ಸಮಷ್ಠಿ ನೆಲೆಯಲ್ಲೇ ಸಂಸ್ಕೃತಿಯನ್ನು ಜೀವಂತ ಇತಿಹಾಸವನ್ನಾಗಿಸುತ್ತದೆ. ಈ ನಿಟ್ಟಿನಲ್ಲಿ ಎಲ್ಲಾ ಬಗೆಯ ಮಾನವ ಸಂಬಂಧಿ ಅರ್ಥ ಪೂರ್ಣ ಸಂಯೋಗವನ್ನು ನಿರ್ದಿಷ್ಟ ಪಡಿಸಲು ಹಾಗೂ ಸ್ಥಳೀಯ ಹುಡುಕಾಟದ ಮೂಲಕ ಜಾಗತೀಕರಣ ಪ್ರಕ್ರಿಯೆಯಲ್ಲಿ ನಿರಂತರವಾಗಿ ತೊಡಗಿಸಿಕೊಳ್ಳಲು ಜನ ಸಮುದಾಯವನ್ನು ಸಜ್ಜುಗೊಳಿಸಲು ಸಾಧ್ಯವಾಗುತ್ತದೆ. ಈ ಸಂಬಂಧದಲ್ಲಿ ದೇಶೀ ಕಥನಗಳು ಸಮುದಾಯಗಳ ಆತ್ಮ ಕಥನಗಳಾಗಿ ಬೆಳೆದಿರುತ್ತವೆ.

ಮೌಖಿಕ ಪರಂಪರೆಯ ಒಟ್ಟು ಸಂವೇದನೆಯು ಕಾಲಾತೀತವಾದ ಚಲನೆಯನ್ನು ಅನುಸರಿಸುತ್ತದೆ. ಮೌಖಿಕ ಪರಂಪರೆಯ ಚಾರಿತ್ರಿಕ ಪ್ರಜ್ಞೆ ತನ್ನ ಪರಿಸರ ಜೈವಿಕ ಸಂಬಂಧಗಳ ಜೊತೆ ಅನುಸಂಧಾನಗೊಂಡಿರುತ್ತದೆ. ಆದ್ದರಿಂದ ಮೌಖಿಕ ಇತಿಹಾಸ ಚೌಕಟ್ಟನ್ನು ಬಯಸುವುದಿಲ್ಲ. ಶಿಷ್ಟ ಇತಿಹಾಸದ ಆಕರಗಳಿಗೆ ನಿರ್ದಿಷ್ಟತೆ, ಖಚಿತ ಕಾಲಮಾನಕ್ಕೆ ಸ್ಪಷ್ಟ ದಾಖಲೆಯ ಆಧಾರವಿದ್ದರೆ, ಮೌಖಿಕ

ಪರಂಪರೆಯ ಇತಿಹಾಸಕ್ಕೆ ನಿರ್ದಿಷ್ಟತೆ ಇರುವುದಿಲ್ಲ. ಚೌಕಟ್ಟಿಗೆ ಒಳಪಡುವ ಇತಿಹಾಸ ಬಹುಪಾಲು ವ್ಯಕ್ತಿ ಕೇಂದ್ರಿತ, ಧರ್ಮ, ಸಾಮ್ರಾಜ್ಯ ಕೇಂದ್ರಿತವೂ ಆಗಿರುತ್ತದೆ. ಇದ್ಯಾವುದನ್ನೂ ಒಪ್ಪಿಕೊಳ್ಳದ ಮೌಖಿಕ ಚರಿತ್ರೆಯು ಅಧಿಕಾರದ ಎಲ್ಲಾ ಕೇಂದ್ರಗಳನ್ನು ತನ್ನ ಮಾಂತ್ರಿಕ ವಿಶ್ವಾಸದಿಂದ ಭಗ್ನಗೊಳಿಸುತ್ತದೆ. ಹೀಗಾಗಿ ಮೌಖಿಕ ಇತಿಹಾಸದ ಆಕರಗಳಿಗೆ ಚೌಕಟ್ಟಿಲ್ಲ ಅವುಗಳ ಅರ್ಥಕ್ಕೆ ಸೀಮೆಯಿಲ್ಲ.

ಶಿಷ್ಟ ಪರಂಪರೆಯ ಇತಿಹಾಸವು ಮಾನವೀಯ ಮೌಲ್ಯಗಳನ್ನು ಹೊಂದಿರುವುದಿಲ್ಲ. ಇದು ಯಾವತ್ತೂ ದಿಗ್ವಿಜಯದ ಇತಿಹಾಸವಾಗಿರುತ್ತದೆ. ಹಾಗಾಗಿಯೇ ಜನರ ನೋವು, ತವಕ, ತಲ್ಲಣಗಳು (ಭಾರತದಂತಹ) ಇತಿಹಾಸದಲ್ಲಿ ಸಂಗ್ರಹವಾಗುವುದಿಲ್ಲ. ಹಾಗಾಗಿ ಇದು ಏಕ ಮುಖವಾದ ಇತಿಹಾಸ, ಮಾನವೀಯ ಪರಂಪರೆಯ ನಿರೂಪಣೆಯು ಮೌಖಿಕ ಚರಿತ್ರೆಯಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ಇದು ಏಕಮುಖ ನಿರೂಪಣೆಯನ್ನು ಒಳಗೊಂಡಿರುವುದಿಲ್ಲ. ಇದು ಬಹುರೂಪಿ ಕಥನ ನಿರೂಪಣೆ, ಬಹುರೂಪಿ ಸಂವೇದನೆಯಾಗಿದೆ. ಮೌಖಿಕ ಪರಂಪರೆಯು ಇತಿಹಾಸವನ್ನು ತನ್ನ ಕಾಲಕ್ಕೆ ಬೇಕಾದಂತೆ ಸೃಜಿಸಿಕೊಳ್ಳಬಲ್ಲುದಾಗಿದೆ. ಆದ್ದರಿಂದ ಇದು ಕಾಲದ ಹಂಗನ್ನು ತೊರೆದಿರುವಂತದ್ದು. ಶಿಷ್ಟವು ಘಟನೆ, ಕಾರಣ, ಕ್ರಿಯೆಗಳನ್ನು ಮತ್ತು ಕಾಲವನ್ನು ಬದಲಾಯಿಸಿಕೊಳ್ಳುವುದಿಲ್ಲ. ಮೌಖಿಕ ಚರಿತ್ರೆಯಲ್ಲಿ ಇತಿಹಾಸವು ಸದಾಕಾಲ ಪುನರ್ ಸೃಷ್ಟಿಗೆ ಒಳಪಡುತ್ತಿರುತ್ತದೆ. ಜನಪದ ಸಮಾಜಕ್ಕೆ ಇತಿಹಾಸವೆಂಬುದು ಜೀವಂತ ಕ್ರಮವೇ ಹೊರತು ಅದು ಇತಿಹಾಸ ಕಥನವಾಗಲಾರದು. ಆ ಕಾರಣಕ್ಕಾಗಿಯೇ ಜನಪದ ಸಮಾಜಕ್ಕೆ ಇತಿಹಾಸದ ಪ್ರಜ್ಞೆ ಗಾಢವಾಗಿದೆ. ಹಾಗಾಗಿಯೆ "ಅಲಿಖಿತ ಇತಿಹಾಸಕ್ಕೆ ಇರುವ ಮುಕ್ತವಾದ ಸ್ವರೂಪ ಬರೆದ ಇತಿಹಾಸಕ್ಕೆ ಇರುವುದಿಲ್ಲ. ಬರೆದ ಇತಿಹಾಸದ ರೂಪುರೇಖೆಗಳು ಅದಕ್ಕೊಂದು ಅರ್ಥವನ್ನು ನೀಡುವಂತೆ ಅದರ ಮೌಲ್ಯವನ್ನು ನಿಯಂತ್ರಿಸುತ್ತವೆ" ಎಂಬುದನ್ನು ಹಲವಾರು ಉದಾಹರಣೆಗಳ ಮೂಲಕ ನೋಡಬಹುದಾಗಿದೆ. ಉದಾಹರಣೆಗೆ ಶಾಸನಗಳು; ರಾಜ ಬರೆಸಿ ಹಾಕಿಸಿದ ಶಾಸನಗಳು ರಾಜ ಧರ್ಮವನ್ನು ಹೇಳುವುದರ ಜೊತೆಗೆ ಇಡೀ 'ರಾಜ್ಯ'ದ ಸಾಮಾಜಿಕ ಸಂಗತಿಗಳನ್ನು ತಿಳಿಸುತ್ತವೆ ಮತ್ತು ಸಮಾಜದ ಗತಿಶೀಲತೆಯನ್ನೇ ಬದಲಿಸಬಲ್ಲುವು.

ಚರಿತ್ರೆ ರಚನೆಯ ಕಾಲಕ್ಕೆ ಜನಪದ ಸಾಹಿತ್ಯದ ಬಳಕೆ ಕುರಿತಾದ ಧ್ವನಿ, ಮೌಖಿಕ ಆಕರಗಳ ಬಳಕೆಯ ಕುರಿತು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಆಸಕ್ತಿ ಮೂಡತೊಡಗಿತು. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಮೌಖಿಕ ಆಕರಗಳ ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ಸಾಧ್ಯತೆಯನ್ನು ಕುರಿತಂತೆ ನಡೆದ ಅಧ್ಯಯನಗಳು. ಕನ್ನಡ ಸಂದರ್ಭಕ್ಕಂತೂ ಈ ಹಂತ ಶುರುವಾಗಿದ್ದೇ ಮಹಾಕಾವ್ಯಗಳ ಬಗೆಗಿನ ಅಧ್ಯಯನ ಆಸಕ್ತಿ ಪ್ರಾರಂಭವಾದ ಕಾರಣಕ್ಕಾಗಿ. ಮಹಾಕಾವ್ಯಗಳನ್ನು ಯಾವಾಗ ಸಂಗ್ರಹಿಸಿ ಪ್ರಕಟಿಸಲಾಯಿತೋ ಅದರ ಹಿಂದೆಯೇ ಅವುಗಳ ಮೇಲಿನ ತಾತ್ವಿಕ ಚರ್ಚೆಗಳು ಶುರುವಾದವು; ಜೊತೆಗೆ ಸೈದ್ಧಾಂತಿಕ, ವಿಶ್ಲೇಷಣಾತ್ಮಕ ಚರ್ಚೆಗಳು ರೂಪು ಪಡೆದವು. "ಜನಪದ ಮಹಾಕಾವ್ಯ ಅದನ್ನು ಹಾಡುವ ಮತ್ತು ಕೇಳುವ ಜನರಲ್ಲಿ ಸಹಜವಾಗಿ ಇರುವಂತಹದ್ದಲ್ಲ. ಈ ಪರಿಕಲ್ಪನೆಯನ್ನು ಜಾನಪದ ವಿದ್ವಾಂಸರು ಶಿಷ್ಟ ಮಹಾಕಾವ್ಯಗಳ ಮಾದರಿಯಲ್ಲಿ ಅಧ್ಯಯನದ ಸಲುವಾಗಿ ರೂಪಿಸಿಕೊಂಡರು. ಇದು ಅವರು ರೂಪಿಸಿಕೊಂಡ

ವಿಶ್ಲೇಷಣಾತ್ಮಕ ಪ್ರಕಾರ (Analyhical catagory). ವಿದ್ವಾಂಸರು ಯಾವುದನ್ನೂ ಜನಪದ ಮಹಾಕಾವ್ಯ ಎನ್ನುತ್ತಾರೋ ಅದನ್ನು ಹಾಡುವವರು ಮತ್ತು ಕೇಳುವವರು ಹಾಡು, ಪದ, ಕಥೆ ಎಂದು ಕರೆಯುತ್ತಾರೆ. ಸಹಜವಾಗಿ ಅವರು ವರ್ಗೀಕರಿಸುವ ರೀತಿಯಲ್ಲಿ ಇದು ಸಾಂಸ್ಕೃತಿಕ ಪ್ರಕಾರ (Ethnic genre)" (ತೀ.ನಂ.ಶಂಕರನಾರಾಯಣ, ಕರ್ನಾಟಕ ಜನಪದ ಮಹಾಕಾವ್ಯಗಳು, ಪು:iv)ವಾಗಿದೆ. ಈ ಸಾಂಸ್ಕೃತಿಕ ಪ್ರಕಾರಗಳೆಲ್ಲವೂ ನೇರವಾಗಿ ಏನನ್ನೂ ಹೇಳುವುದಿಲ್ಲ. ಪರೋಕ್ಷವಾಗಿಯೇ ಹೇಳುತ್ತಿರುತ್ತವೆಯಾದ್ದರಿಂದ, "ಜನಪದ ಸಾಹಿತ್ಯದಲ್ಲಿ ಅದರ ಸಾಂಕೇತಿಕ ಭಾಷೆಯನ್ನು, ಧ್ವನಿಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. (ಡಾ.ವಸು, ಮೌಖಿಕ ಇತಿಹಾಸ, ಪು:೯೨). ಉದಾಹರಣೆಗೆ ಸಂಗ್ಯಾ-ಬಾಳ್ಯಾ ನಾಟಕದಲ್ಲಿ ಗಂಗಿ, ಬಾಳ್ಯಾ ಆಕೆಯ ಮನೆಗೆ ಹೋದಾಗ ಅವನ ಬೆನ್ನ ಮೇಲೆ ಕೆಲವು ಸಂಕೇತಗಳನ್ನು ಬರೆದು ಕಳುಹಿಸಿರುತ್ತಾಳೆ. ಅದರಿಂದ ಸಂಗ್ಯಾ ಏನೆಂಬುದನ್ನು ತಿಳಿದುಕೊಳ್ಳುತ್ತಾನೆ. ಇದು ಜಾನಪದದಲ್ಲಿ ಬರುವ ಸಾಂಕೇತಿಕ ಭಾಷೆಯ ಸ್ವರೂಪ. ಈ ಕಾರಣಕ್ಕಾಗಿ ಮೌಖಿಕ ಆಕರಗಳೆಲ್ಲವೂ ಉತ್ಪ್ರೇಕ್ಷೆಗೊಳಗಾಗುತ್ತವೆ. ಕಾರಣ ಅವುಗಳಲ್ಲಿರುವ ರಮ್ಯತೆ ಮತ್ತು ಅತೀ ರಂಜಕತೆ. "ಕೆಂಪೇಗೌಡನ ಕಥೆಯಲ್ಲಿ ಆತ ರಾಜನಾಗುವ ಮೊದಲು ಮರದ ಕೆಳಗೆ ಮಲಗಿದ್ದಾಗ ಸರ್ಪವೊಂದು ತಲೆಯ ಮೇಲೆ ಹೆಡೆಯಾಡಿಸಿತು ಎಂಬುದು ಕರ್ನಾಟಕದ ಹಲವು ರಾಜರ ಕಥೆಗಳಲ್ಲಿ ತಳುಕು ಹಾಕಿಕೊಂಡಿದೆ. ಈ ಕಥೆಗಳಾವುವು ರಾಜರು ಅಧಿಕಾರಕ್ಕೆ ಬಂದಾಗಲೇ ಹುಟ್ಟಿರದ ಕಥೆಗಳಾಗಿರದೆ ಅವರು ಪ್ರಸಿದ್ಧಿಗೆ ಬಂದಾಗ ಹುಟ್ಟಿಕೊಳ್ಳುತ್ತವೆ. ಆತ ಪ್ರಸಿದ್ಧಿಗೆ ಬಂದಾಗ ಆತನನ್ನು ಸಾಮಾನ್ಯ ವ್ಯಕ್ತಿಯನ್ನಾಗಿ ಕಾಣಲು ಜನ ಬಯಸುವುದಿಲ್ಲ." (ಅದೇ, ಪು:೯೨) ಭಾರತೀಯ ಸಾಮ್ರಾಜ್ಯಷಾಹಿ ಅಥವಾ ರಾಜ ಪ್ರಭುತ್ವವನ್ನು ಸೈದ್ಧಾಂತಿಕವಾಗಿ ಚರ್ಚಿಸುವಾಗ ರಾಜನನ್ನು ದೈವತ್ವಕ್ಕೆ ಏರಿಸುವುದನ್ನು (Devine Theory of Kingship) ಕಾಣುತ್ತೇವೆ. ಆ ಕಾರಣಕ್ಕಾಗಿ ಪಟ್ಟಾಭಿಷೇಕದಂತಹ ಹಲವಾರು ಸಂದರ್ಭಗಳಲ್ಲಿ ಧಾರ್ಮಿಕ ಆಚರಣೆ, ವಿಧಿನಿಯಮಗಳನ್ನು ಕಾಣುತ್ತೇವೆ. ಮಧ್ಯಕಾಲೀನ ಇತಿಹಾಸದ ಗ್ರಹಿಕೆಯ ಸಂದರ್ಭದಲ್ಲಿ ಈ ಅಂಶಗಳು ಹೆಚ್ಚು ಪ್ರಸ್ತುತವಾಗುವುದನ್ನು ಕಾಣಬಹುದು. ಹಾಗಾಗಿಯೇ ಮೌಖಿಕ ಆಕರಗಳೆಲ್ಲವೂ "ರಾಜಕೀಯ ಚರಿತ್ರೆಗಿಂತ ಸಾಂಸ್ಕೃತಿಕ ಇತಿಹಾಸಕ್ಕೆ ಹೆಚ್ಚಿನ ಕೊಡುಗೆಯನ್ನು ನೀಡಬಲ್ಲವು. ಇಲ್ಲಿ ಬರುವ ಜನಪದ ನಾಯಕರು ಸಾಂಸ್ಕೃತಿಕ ನಾಯಕರಾಗಿ ಗುರುತಿಸಲ್ಪಡುತ್ತಿರುವುದು ಬೇರೊಂದು ಅಧ್ಯಯನಕ್ಕೆ ದಾರಿ ಮಾಡಿಕೊಡುತ್ತಿದೆ. ಇದು ಜನಪದ ಮೂಲದ ಚರಿತ್ರೆಯ ನಿರ್ಮಾಣದ ಅಗತ್ಯವನ್ನೂ ಸೃಷ್ಟಿಸುತ್ತಿದೆ." (ಅದೇ, ಪು:೯೩) ಮೌಖಿಕ ಪರಂಪರೆಯನ್ನು ಚರಿತ್ರೆ ನಿರ್ಮಾಣದ ಅಗತ್ಯವಾಗಿಸುತ್ತಿರುವ ಸಾಂಸ್ಕೃತಿಕ ನೆಲೆಯ ಹುಡುಕಾಟದ ಚರಿತ್ರೆಯಲ್ಲಿ ಕಡೆಗಣಿಸಲ್ಪಟ್ಟಿದ್ದ ವರ್ಗಗಳು ತಮ್ಮ ಚರಿತ್ರೆಯನ್ನು ಸಾಂಸ್ಕೃತಿಕ ಚಹರೆಯನ್ನು, ಸಾಮಾಜಿಕ ನೆಲೆಯನ್ನು ಹುಡುಕುವಾಗ ಚಾರಿತ್ರಿಕ ವ್ಯಕ್ತಿಗಳನ್ನು ಸಾಂಕೇತಿಕವಾಗಿಸಿಕೊಂಡವು. ಆ ಮೂಲಕ ಪ್ರತಿಯೊಂದು ಸಮುದಾಯವೂ ಒಬ್ಬೊಬ್ಬ ಸಾಂಸ್ಕೃತಿಕ ನಾಯಕನನ್ನು ಆರಿಸಿಕೊಂಡಿತು ಮತ್ತು ಆ ನಾಯಕರುಗಳೇ ಆಯಾ ಸಮುದಾಯಗಳಿಗೆ ಆತ್ಯಂತಿಕ ಸಂಕೇತಗಳಾದವು. ಬ್ರಿಟಿಷ್ ಭಾರತದಲ್ಲಿ ವೇದ ಉಪನಿಷತ್ತುಗಳೇ ಅಂತಿಮ ಮಹಾಕಾವ್ಯಗಳಾಗಿದ್ದವು ಮತ್ತು ವೈದಿಕ ಸಂಸ್ಕೃತಿಯೇ ಭಾರತೀಯ ಸಂಸ್ಕೃತಿಯಾಗಿತ್ತು. ಅದನ್ನು

ಆ ರೀತಿ ನಂಬಿಸಲಾಗಿತ್ತು. ಶಾಸನಗಳು, ಆಸ್ಥಾನದ ಚಿತ್ರಣ, ರಾಜಾಶ್ರಯದ ಬದುಕೇ ಅಂತಿಮವಾಗಿ ಭಾರತದ ಸಂಸ್ಕೃತಿಯಂತೆ ಬಿಂಬಿತವಾಗಿತ್ತು. ಚರಿತ್ರೆಯಲ್ಲಿ ಧ್ವನಿಯಿಲ್ಲದ ವರ್ಗಗಳ ಧ್ವನಿಯಾಗಿ ಜನಪದ ಸಾಹಿತ್ಯ ಕಾಣತೊಡಗಿತ್ತು. ಅದರಿಂದಾಗಿ ಈ ಹಿಂದೆ ಒಂದು ಹಣೆಪಟ್ಟಿ (ಭಾರತೀಯ ಸಂಸ್ಕೃತಿಯೆಂದು) ಕಟ್ಟಿಕೊಡಿದ್ದ ಸಂಸ್ಕೃತಿಯಲ್ಲಿ ಶಿಥಿಲತೆ ಉಂಟಾಗುತ್ತಾ ಹೋಯಿತು. ಇದು ಮುಂದೆ ಕ್ರಮೇಣ ಭಾರತ, ಕರ್ನಾಟಕವಷ್ಟೇ ಅಲ್ಲದೇ ಇಡೀ ವಸಾಹತುಷಾಹಿಯನ್ನು ಆತಂಕದ ಸ್ಥಿತಿಗೆ ತಳ್ಳಿತು.

"ಹೀಗೆ ನಡೆಯಿತು ಎಂದು ತಿಳಿಸುವ ಇತಿಹಾಸ ತನ್ನಷ್ಟಕ್ಕೆ ತಾನು ಶುದ್ಧವಾಗಿರುತ್ತದೆ. ಆದರೆ ಒಬ್ಬ ವ್ಯಕ್ತಿ ಒಂದು ಜನಾಂಗದ ಶ್ರೇಯೋಭಿವೃದ್ಧಿಗಾಗಿ ಸೆಣಸಾಡಿದ್ದರೆ, ಒಂದು ಸಂಸ್ಕೃತಿಯ ರಕ್ಷಣೆಗಾಗಿ ಹೋರಾಡಿದ್ದರೆ ಅವನ ಬಗೆಗೆ ಜನತೆ ಗೌರವಾದರಗಳನ್ನು ಬೆಳೆಸಿಕೊಳ್ಳುವುದಲ್ಲದೆ ಕೃತಜ್ಞತೆಯನ್ನು ತೋರಿಸುವಾಗ ಅವನ ವ್ಯಕ್ತಿತ್ವವನ್ನು ಅಸಾಮಾನ್ಯತೆಯ ಮಟ್ಟಕ್ಕೇರಿಸಲು ಪ್ರಯತ್ನಿಸುತ್ತದೆ. ಜನಪದ ಹೃದಯವನ್ನು ಸೂರೆಗೊಂಡ ಅವನ ಜೀವನ ವೃತ್ತಗಳ ಸುತ್ತ ದಂತ ಕಥೆಗಳು ಒಂದರ ಮೇಲೊಂದು ಕೂರುತ್ತಾ ಹೋಗುತ್ತವೆ. ಈ ಹಂತದಲ್ಲಿ ಇತಿಹಾಸ ತನ್ನ ಸ್ವರೂಪವನ್ನು ಮರೆಮಾಡಿಕೊಂಡು ಐತಿಹ್ಯದ ಮುಖವನ್ನು ತೋರಿಸಿಕೊಳ್ಳುತ್ತದೆ. ಐತಿಹ್ಯ ಅರ್ಧ ಐತಿಹಾಸಿಕ ಸಂಗತಿಯಾಗಿರುವುದಲ್ಲದೆ ಬಹಳಷ್ಟು ಸಲ ಇತಿಹಾಸವನ್ನು ಮರೆಸಿ ಕೇವಲ ಕಾಲ್ಪನಿಕ ರೂಪವನ್ನು ಧರಿಸುವುದೂ ಉಂಟು. ಆದರೆ ಈ ಐತಿಹ್ಯಗಳ ನಾಯಕನ ಬಗೆಗಿಟ್ಟಿರುವ ಭಯ ಭಕ್ತಿಗಳು ವಿಕಾಸಹೊಂದುತ್ತಾ ಬಂದಂತೆಲ್ಲಾ ಆ ವ್ಯಕ್ತಿಯನ್ನು ದೈವತ್ವಕ್ಕೇರಿಸುವುದು ಸ್ವಾಭಾವಿಕ. ಈ ಹಂತದಲ್ಲಿ ಐತಿಹ್ಯ ಪವಿತ್ರಾವರಣವನ್ನು ಸೃಷ್ಟಿಸಿಕೊಂಡು ಪುರಾಣವಾಗಿ ಪರಿವರ್ತನೆ ಹೊಂದುತ್ತದೆ. ಇಲ್ಲಿನ ಪುರಾಣದೇವತೆ ಒಂದು ಕಾಲದಲ್ಲಿ ಐತಿಹಾಸಿಕ ವ್ಯಕ್ತಿಯಾಗಿದ್ದ ಎಂಬುದನ್ನು ಮರೆಯುವಂತಿಲ್ಲ. ಆದರೆ ಹೆಚ್ಚಿನ ಪುರಾಣಗಳಲ್ಲಿ ಐತಿಹಾಸಿಕ ಸಂಗತಿಗಳನ್ನು ಗುರುತಿಸುವುದು ಕಷ್ಟ ಸಾಧ್ಯ. ಕೆಲವೊಮ್ಮೆ ಪುರಾಣದಲ್ಲಿ ಹೇಳಿರುವ ವ್ಯಕ್ತಿ ಐತಿಹಾಸಿಕ ವ್ಯಕ್ತಿಯೇ ಅಲ್ಲವೇನೋ ಎನ್ನುವಷ್ಟರ ಮಟ್ಟಿಗೆ ಅವುಗಳ ಬೆಳವಣಿಗೆಯಾಗಿರುತ್ತದೆ.(ಪಿ.ಕೆ.ರಾಜಶೇಖರ, ಜಾನಪದ ರಾಮಾಯಣ, ಪು:೭೪) ಈ ರೀತಿಯ ಬೆಳವಣಿಗೆ ಶಿಷ್ಟ ಇತಿಹಾಸಕಾರರಿಗೆ ಕಾಲದ ತೊಡಕನ್ನು ತಂದೊಡ್ಡುತ್ತದೆ. ಈ ಸಂಗತಿಗಳನ್ನು ಯಾವ ಕಾಲದಲ್ಲಿಟ್ಟು ನೋಡಬೇಕು ಎಂಬುದು ಸಮಸ್ಯೆಯಾಗುತ್ತದೆ, ಆ ಕಾರಣಕ್ಕಾಗಿಯೇ ಮೌಖಿಕ ಆಕರಗಳು ಇತಿಹಾಸ ರಚನೆಗೆ ಪೂರಕವಾಗಲಾರವು ಎಂಬ ವಾದ ಮೂಡ ತೊಡಗಿದೆ. ಹಾಗೆ ನೋಡಿದರೆ ಬರವಣಿಗೆಯು ತನ್ನ ಪಠ್ಯಕ್ಕೆ ಕಟ್ಟು ಬಿದ್ದಿರುತ್ತದೆ. ಅದು ಮೌಖಿಕ ಕೃತಿಗಳಂತೆ ಒಂದು ಪ್ರದರ್ಶನದಿಂದ ಮತ್ತೊಂದಕ್ಕೆ ಬದಲಾಗುವ ಸಾಧ್ಯತೆಗಳಿಲ್ಲ. ಅದಕ್ಕೆ ಆದಿ, ಮಧ್ಯ ಮತ್ತು ಅಂತ್ಯಗಳಿವೆ. ಅಲ್ಲಿ ಕವಿತೆಯ ಬಂಧವು ಎಷ್ಟೊಂದು ಖಚಿತವೂ, ಬಿಗಿಯಾದುದೂ ಆಗಿರುವುದೆಂದರೆ, ಅದರಿಂದ ಒಂದೇ ಒಂದು ಪದವನ್ನು ತೆಗೆದು ಹಾಕಿದರೆ ಅಥವಾ ಸೇರಿಸಿದರೆ ಅದರ ರೂಪದಲ್ಲಿ ಪಲ್ಲಟವಾಗುತ್ತದೆ. (ಡಾ.ಚಂದ್ರಶೇಖರ ಕಂಬಾರ, ದೇಶೀಯ ಚಿಂತನ, ಪು:೫೯-೬೦) ಆದರೆ ಮೌಖಿಕ ಪ್ರಕಾರದಲ್ಲಿ ಯಾವ ಭಾಗವನ್ನಾದರೂ ತೆಗೆದು ಹಾಕಬಹುದು ಅಥವಾ ಯಾವ ಭಾಗವನ್ನಾದರೂ ಬೇಕಾದಲ್ಲಿಗೆ ಸೇರಿಸಬಹುದು. ಇದು ಮೌಖಿಕತೆಯ ಶಕ್ತಿಯೂ ಹೌದು ಮತ್ತು ಮಿತಿಯೂ ಆಗಿದೆ. ಈ ರೀತಿಯ ತೆಗೆಯುವಿಕೆ ಮತ್ತು ಸೇರಿಸುವಿಕೆಯಿಂದ

ಪಠ್ಯಗಳನ್ನು ಸಂಗ್ರಹಿಸುವಾಗ ಅಥವಾ ಪ್ರಕಟಿಸುವಾಗ ಸಂಪಾದಕನೊಬ್ಬ ತನಗೆ ಬೇಕಾದ ರೀತಿಯಲ್ಲಿ ಅದನ್ನು ತಿರುಚಿ ಬಿಡುವ ಅಪಾಯವಿದೆ. ಈ ರೀತಿ ಮಾಡಿದಾಗ ಮೌಖಿಕತೆಗೆ ಬಗೆವ ಬಹುದೊಡ್ಡ ದ್ರೋಹವಾಗುತ್ತದೆ ಮತ್ತು ಇದು ಮೌಖಿಕ ಪರಂಪರೆಯ ಮಿತಿಯೂ ಆಗಿದೆ. ಬೇಡವಾದ ಭಾಗಗಳನ್ನು ತೆಗೆದು ಹಾಕುವುದರಿಂದ ಅದರ ಏಕತಾನತೆಯನ್ನು ನಿವಾರಿಸಬಹುದಾದರೂ ಕೂಡ 'ಬಂಧ'ವು ಅರ್ಥವನ್ನು ಕಳೆದುಕೊಳ್ಳುವ ಸಾಧ್ಯತೆಯೇ ಹೆಚ್ಚು. ಇದರಿಂದಾಗಿ ಕಾವ್ಯದ ಗೇಯತೆಯೇ ಹೋಗಿ ಬಿಡುತ್ತದೆ. ಇದರಿಂದಾಗಿ ಕಾಲದ ಚರ್ಚೆ ಮತ್ತೆ ಶುರುವಾಗುತ್ತದೆ. ಕಾವ್ಯದ ಭಾಗಗಳನ್ನು ತೆಗೆಯುವುದು ಮತ್ತು ಸೇರಿಸುವುದು 'ಕಾಲ'ದ ಚರ್ಚೆಯನ್ನು ಆಹ್ವಾನಿಸಿದಂತೆಯೇ ಆಗಿದೆ. ಉದಾಹರಣೆಗೆ ಮಂಟೇಸ್ವಾಮಿ ಕಾವ್ಯದ ವಿವರಣೆಯನ್ನು ನೋಡುವುದಾದರೆ, ಕಲ್ಯಾಣಪಟ್ಟಣದ ಸಾಲು ನಮಗೆ ಅದನ್ನು ವಿವರಿಸುತ್ತದೆ. ಮಂಟೇಸ್ವಾಮಿ ಕಲ್ಯಾಣವನ್ನು ಪ್ರವೇಶ ಮಾಡುವ ರೀತಿಯೇ ಬಲು ವಿಚಿತ್ರವಾಗಿದೆ. ಅಸಹ್ಯಕರವಾದ ರೀತಿಯಲ್ಲಿ ಒಬ್ಬ ರೋಗಿಯಾಗಿ, ಕೀವು ರಕ್ತ ಸೋರಿಸಿಕೊಂಡು ಮೈಯೆಲ್ಲಾ ಹುಣ್ಣು ಮಾಡಿಕೊಂಡು, ಅವುಗಳಿಂದ ಹುಳ ಬೀಳುವಂತೆ ಮಾಡಿಕೊಂಡು ಕಲ್ಯಾಣ ಪಟ್ಟಣವನ್ನು ಪ್ರವೇಶ ಮಾಡುತ್ತಾನೆ. ಜಂಗಮರು ಕಟ್ಟಿದ ಲಿಂಗಗಳನ್ನೆಲ್ಲಾ, ಮಾಯ ಮಾಡುತ್ತಾನೆ. ಅವರನ್ನು ಹೀಗಳೆಯುತ್ತಾನೆ, ರಂಡ ಪುಂಡ ಜಂಗಮರೆಂದು ಜರಿಯುತ್ತಾನೆ. ಬೋಳು ಬೋಳು ಜಂಗಮರೆಂದು ಬಯ್ಯುತ್ತಾನೆ, ಇವರೆಲ್ಲ ಬಸವಣ್ಣನ ಜೊತೆಯಲ್ಲಿರುವುದನ್ನು ಖಂಡಿಸುತ್ತಾನೆ. ಇವರ ಮತ್ತು ಬಸವಣ್ಣನ ನಿಜಭಕ್ತಿಯನ್ನು ಪರೀಕ್ಷೆ ಮಾಡಲು ಮೈಯಲ್ಲಿ ಕೀವು, ರಕ್ತ, ಹುಳುಗಳನ್ನು ಬಿಟ್ಟುಕೊಂಡು ಕಲ್ಯಾಣ ನಗರವನ್ನು ಪ್ರವೇಶ ಮಾಡುತ್ತಾನೆ. ದಾರಿಯಲ್ಲಿ ಕಟುಗರ ಸಂಗಯ್ಯ ಮಂಟೇಸ್ವಾಮಿಯನ್ನು ಒಳಗೆ ಬಿಡದೆ ತಡೆದು ನಿಲ್ಲಿಸುತ್ತಾನೆ. ಮಂಟೇಸ್ವಾಮಿಯನ್ನು ಸಂಗಯ್ಯ ಹೊಡೆದಾಗ ಹೊಡೆತಗಳು ಬಸವಣ್ಣ ಮತ್ತು ನೀಲಮ್ಮರಿಗೆ ಬೀಳುತ್ತವೆ. ಹೀಗೆ ಮಂಟೇಸ್ವಾಮಿ ಮತ್ತೆ ಮತ್ತೆ ಏನೇನೋ ಪರೀಕ್ಷೆಗಳನ್ನು ನಡೆಸುತ್ತಾನೆ, ಕೊನೆಗೆ ಬಸವಣ್ಣ ಮಂಟೇಸ್ವಾಮಿಯನ್ನು ಒಪ್ಪಿಕೊಳ್ಳುತ್ತಾನೆ. ಇದು ಸಾಂಸ್ಕೃತಿಕ ಸಂಘರ್ಷದ ಪ್ರತೀಕವಾಗಿದೆ. ಅಂದರೆ, ಕಲ್ಯಾಣದಲ್ಲಿ ಇರಲು ಯೋಗ್ಯರಾದವರು ಕೇವಲ ಕೆಳವರ್ಗದ ಶರಣರು ಮಾತ್ರ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಕೊನೆಗೆ ಮಂಟೇಸ್ವಾಮಿಯ ಪರೀಕ್ಷೆಯಲ್ಲಿ ಯಶಸ್ಸುಗಳಿಸುವವರೆಂದರೆ ಹೊಲೆಯರ ಹೊನ್ನಪ್ಪ,ಮಾದಿಗರ ಚನ್ನಯ್ಯ, ಮಡಿವಾಳ ಮಾಚಪ್ಪ, ಗಾಣಿಗರ ದಾಸಪ್ಪ, ಅಂಬಿಗರ ಚೌಡಯ್ಯ, ಈಡಿಗರ ಕ್ಯಾತಪ್ಪ, ಕುರುಬರ ಬೀರಯ್ಯರಂತಹ ಕೆಳವರ್ಗದ ಶಿವಶರಣರು ಮಾತ್ರ. ವೀರಶೈವ ಪುರಾಣಗಳು ಇದನ್ನು ಹೇಳುವಲ್ಲಿ ವಿಫಲವಾಗಿ ಮಂಟೇಸ್ವಾಮಿಕಾವ್ಯ ಇದನ್ನು ಹೇಳಿದೆ. ಕೆಳಜಾತಿಯವರ ಭಾಗವಹಿಸುವಿಕೆಯೂ ಅನಿವಾರ್ಯ, ಆಗ ಮಾತ್ರ ಶರಣ ಚಳುವಳಿ ಪರಿಪೂರ್ಣವಾಗುತ್ತದೆ ಎಂಬುದನ್ನೂ ಒತ್ತಿ ಹೇಳಿದಂತಿದೆ. "ಇದು ಒಂದು ರೀತಿಯಲ್ಲಿ ಕಲ್ಯಾಣದ ಶರಣ ಸಂಸ್ಕೃತಿಯ ಜೊತೆಗೆ ಜನಪದರು ನಡೆಸಿದ ಸಂವಾದ" (ಹಿ.ಚಿ.ಬೋರಲಿಂಗಯ್ಯ, ಮಂಟೇಸ್ವಾಮಿ, ಪು:xvi) ಎಂಬುದನ್ನು ಬಹಳ ಮುಖ್ಯವಾಗಿ ಗಮನಿಸಬೇಕಿದೆ ಈ ಸಂವಾದವು ಸಾಂಸ್ಕೃತಿಕವಾದುದು, ಇದು ನಮಗೆ ಲಿಖಿತ ರೂಪದಲ್ಲಿ ಎಲ್ಲಿಯೂ ಸಿಗುವುದಿಲ್ಲ. ಮತ್ತು ಇದು ಮೌಖಿಕ ಪಂರಪರೆಯಲ್ಲಿ ಮಾತ್ರ ದಾಖಲಾಗಿರುತ್ತದೆ. ಮೌಖಿಕ ಕಥನಗಳು

ಮಾತ್ರ ನಮಗೆ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುತ್ತವೆ; ಈ ರೀತಿ ಹೇಳುತ್ತಾರೆ. "ಈ ಕಥನಗಳ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನು ನಿರೂಪಿಸಬಲ್ಲಂಥ ಶಕ್ತಿ ಪಡೆದವುಗಳು. ರಾಜ ಮಹಾರಾಜರ ಆಳ್ವಿಕೆಯ ವಿಧಾನಗಳೇ ನಮ್ಮ ಭವ್ಯ ಇತಿಹಾಸ ಎಂದು ಸಾರುತ್ತಾ ಬಂದಿರುವ ನಮ್ಮ ಬಹುಪಾಲು ಇತಿಹಾಸಕಾರರ ಕಣ್ಣು ತೆರೆಸಿ ಜನಸಾಮಾನ್ಯರ ಇತಿಹಾಸಕ್ಕಾಗಿ ಒತ್ತಾಯಿಸಬಲ್ಲ, ಆ ಬಗೆಗಿನ ಅರಿವು ಮೂಡಿಸಬಲ್ಲ ಶಕ್ತಿ ಈ ಕಥನಗಳಿದೆ. ಪರಂಪರಾಗತವಾದ ಶಿಷ್ಟ ಮನಸ್ಸಿನ ನಂಬಿಕೆಗಳಿಗೆ ತದ್ವಿರುದ್ಧವಾದ ಈ ಕಥನಗಳು ತಮ್ಮದೇ ಮೌಲ್ಯಗಳನ್ನು ಜೀವನ ದೃಷ್ಟಿಗಳನ್ನು ಆ ಮೂಲಕ ಒಂದು ನಿರ್ದಿಷ್ಟ ನೆಲದ ಲೋಕದೃಷ್ಟಿಯನ್ನು ಹಾಗೂ ಅವರ ವಿವೇಕವನ್ನು ಹೇಳುತ್ತವೆ." (ಅದೇ, ಪು:xi)ಇಲ್ಲಿ ಮತ್ತೊಮ್ಮೆ ಸಾಬೀತಾಗುವುದೆಂದರೆ ಕಾಲದ ಬಗೆಗಿನ ಜಿಜ್ಞಾಸೆ. ಕಥನಗಳು ರೂಪಿಸಲ್ಪಟ್ಟ ಕಾಲಕ್ಕೂ ಮತ್ತು ಅವು ಹಾಡಲ್ಪಡುವ ಅಥವಾ ಪ್ರದರ್ಶಿಸಲ್ಪಡುವ ಕಾಲಕ್ಕೂ ಸಾಕಷ್ಟು ಅಂತರವಿರಬಹುದು, ಆದರೆ ಅವುಗಳ ವಿವರಗಳಿಗೆ ಕಾಲದ ಅಂತರ ವಿರುವುದಿಲ್ಲ. ಮಂಟೆಸ್ವಾಮಿಯ ಕಾಲ ಹದಿನಾರನೆಯ ಶತಮಾನ, ಬಸವಣ್ಣನ ಕಾಲ ಹನ್ನೆರಡನೆಯ ಶತಮಾನ, ಆದರೆ ಮೌಖಿಕ ಪರಂಪರೆಯಲ್ಲಿ ಮಂಟೆಸ್ವಾಮಿ ಬಸವಣ್ಣನ ಕಾಲಕ್ಕೆ 'ಹೋಗುತ್ತಾನೆ' ಬಸವಣ್ಣನ ಜೊತೆಗೆ ಮಾತಡುತ್ತಾನೆ, ಆತನನ್ನು ಪರೀಕ್ಷಿಸುತ್ತಾನೆ, ಆದರೆ ಅಲ್ಲಮನ ಜೊತೆಗೆ ಆ ರೀತಿಯ ಯಾವುದೇ ಸಂಘರ್ಷಗಳನ್ನು ಮಾಡದಿರುವುದು ಆಶ್ಚರ್ಯಕರ ಬೆಳವಣಿಗೆಯಾಗಿದೆ. ಅಲ್ಲಮನನ್ನು ಮಂಟೇಸ್ವಾಮಿಯ ಜೊತೆಗೆ ಸಮೀಕರಿಸುವ ಪ್ರಯತ್ನಗಳು ನಡೆದಿರುವುದನ್ನು ಕಾಣಬಹುದು

ಉದಾಹರಣೆಗೆ "ಜಗಜ್ಯೋತಿಯವರು

ಪರಂಜ್ಯೋತಿಯವರು ಪಾತಾಳಜ್ಯೋತಿಯವರು

ಅಲ್ಲಮಪ್ರಭು ಮಂಟೆದಾ ಲಿಂಗಪ್ಪ"(ಪು.೯೭)

ಎನ್ನುವಲ್ಲಿ ಅಲ್ಲಮ ಮತ್ತು ಮಂಟೆಸ್ವಾಮಿಗೂ ಅವಿನಾಭಾವ ಸಂಬಧವಿರುವುದನ್ನು ಗಮನಿಸಬಹುದು. ಇದಕ್ಕೆ ಬಹು ಮುಖ್ಯ ಕಾರಣ ಒಂದು, ಅಲ್ಲಮ ಕಟ್ಟಿದ ಲಿಂಗಕ್ಕಿಂತ ಆತ್ಮಲಿಂಗಕ್ಕೆ ಹೆಚ್ಚು ಒತ್ತು ಕೊಟ್ಟವನು ಮತ್ತು ತುಂಬಾ ನಿಷ್ಠೂರವಾದಿಯಾಗಿದ್ದವನು. ಮಂಟೇಸ್ವಾಮಿಯೂ ಹಾಗೇ ಇದ್ದವನು. ಎರಡು, ಅಲ್ಲಮ ಕೆಳವರ್ಗದವನು ಎನ್ನುವ ಕಾರಣ. ಯಾಕೆಂದರೆ ಈ ಮಂಟೇಸ್ವಾಮಿ ಕಾವ್ಯದಲ್ಲಿ ಬರುವ 'ಕಲ್ಯಾಣ ಪಟ್ಟಣದ ಸಾಲು' ಗಮನಿಸಿದರೆ, ಈ ಕಲ್ಯಾಣದ ಸಾಲು ವಚನ ಚಳುವಳಿಯ ವಿಫಲತೆಯನ್ನು ನಿವಾರಿಸಲು ಪ್ರಯತ್ನಿಸಿದಂತಿದೆ. ಅಂದರೆ ಆ ಸಂದರ್ಭದ ಶರಣರೆಲ್ಲ ಮೇಲ್ವರ್ಗದಿಂದ ಬಂದವರೇ ಆಗಿದ್ದರು. ನಂತರ ಕೆಳವರ್ಗದ ವಚನಕಾರರು ಸೇರತೊಡಗಿದರು ಎಂಬ ಆಶಯವನ್ನು ಹೊಂದಿದಂತಿದೆ. ಇಡೀ ವಚನ ಚಳುವಳಿಯ ವಿಫಲತೆಗೆ ಈ ಕೆಳವರ್ಗದ ವಚನಕಾರರ ಅಥವಾ ಶರಣರ ಭಾಗವಹಿಸದಿರುವಿಕೆಯೇ ಕಾರಣ ಎಂಬಂತಿದೆ. ಈ ಮೊದಲೇ ಗಮನಿಸಿದಂತೆ ಕಾಲವಿಲ್ಲಿ ಮುಖ್ಯವಲ್ಲ. "ವರ್ತಮಾನ ಮತ್ತು ಭೂತಕಾಲಗಳು ಕಾವ್ಯದ ನೇಯ್ಗೆಯಲ್ಲಿ ಹಾಸುಹೊಕ್ಕಾಗಿರುತ್ತವೆ." (ಡಾ.ಚಂದ್ರಶೇಖರ ಕಂಬಾರ, ದೇಶೀಯ ಚಿಂತನ, ಪು:೬೧) ಗಾಯಕನೊಬ್ಬ ಏಕಕಾಲದಲ್ಲಿ ಮೂರೂ ಕಾಲಗಳ ಕುರಿತು

ಹಾಡುತ್ತಾನೆ. ಭೂತ ಮತ್ತು ಭವಿಷ್ಯತ್ ಕಾಲಗಳನ್ನು ವರ್ತಮಾನಕ್ಕೆ ತಂದುಕೊಂಡು ಅದರ ಕುರಿತು ಕಾವ್ಯದ ನಾಯಕ ಅಥವಾ ತಾನು ಹಾಡುತ್ತಿರುವ ಕಾವ್ಯದ, ಕಥನದ ಪಾತ್ರಗಳ ಮೂಲಕ ಹೇಳುತ್ತ ಹೋಗುತ್ತಾನೆ. ಅಂದರೆ, ಆ ಪಾತ್ರಗಳನ್ನು ವರ್ತಮಾನದ ನೆಲೆಯಲ್ಲಿಯೇ ನಿರೂಪಿಸುತ್ತಾ ಹೋಗುತ್ತಾನೆ. ಹಾಗಾಗಿಯೇ ಇಲ್ಲಿ ಕಾಲದ ಕುರಿತಾದ ಚರ್ಚೆಗಳನ್ನು ಯಾವ ರೀತಿ ಬೆಳೆಸಬೇಕೆಂಬುದು ಸ್ವಲ್ಪ ಸಮಸ್ಯೆಯನ್ನು ಸೃಷ್ಟಿಸುವಂತಾಗಿದೆ. ಇತಿಹಾಸ ರಚನೆಗೆ ಕಾಲ ಬಹಳ ಮುಖ್ಯವಾದ ಪಾತ್ರವಹಿಸುತ್ತದೆ. ಆದರೆ ಮೌಖಿಕ ಪರಂಪರೆಯಲ್ಲಿ ಕಾಲದ ಬಗೆಗಿನ ಗ್ರಹಿಕೆ ತುಂಬಾ ಸೂಕ್ಷ್ಮವಾದುದಾಗಿದೆ. ಲಿಖಿತ ದಾಖಲೆಯಲ್ಲಿನ ಭೂತಕಾಲವು ಮೌಖಿಕ ಪರಂಪರೆಯಲ್ಲಿ ವರ್ತಮಾನ ಅಥವಾ ಭವಿಷ್ಯತ್ ಕಾಲವಾಗಿಯೂ ರೂಪಾಂತರಗೊಳ್ಳುತ್ತದೆ. ಇದೊಂದು ರೀತಿಯ ಸೃಷ್ಟಿ ಕ್ರಿಯೆಯನ್ನು ನಿರ್ಧರಿಸುತ್ತದೆ. ಚಕ್ರಾತೀತ ಮತ್ತು ರೇಖಾತ್ಮಕ ಗತಿಯ ಕಾಲವೆಂದು ನಾವು ಗುರುತಿಸುವುದು ಸೃಷ್ಟಿ ವಿದ್ಯೆಯ ಆಲೋಚನೆಗಳ ಮೂಲಕ. ಜಾಗತಿಕ ಸಿದ್ಧಾಂತ ಕಾಲವನ್ನು ಒಂದು "ಸಾಧ್ಯತೆ"ಯ ದಿಕ್ಕಿನಲ್ಲಿ ಆಲೋಚಿಸುತ್ತದೆ. ಅಂದರೆ, ಸೃಷ್ಟಿಕ್ರಿಯೆಗೆ ಸಂಬಂಧಿಸಿದ ಸಿದ್ಧಾಂತವು ಜಾಗತಿಕ ಮಟ್ಟದಲ್ಲಿ ಅನಂತತೆಯನ್ನು ಪಡೆದುಕೊಂಡಿದೆ. ಜೊತೆಗೆ ಚಕ್ರೀಯ ಸಿದ್ಧಾಂತವು (Cyclic time) ಜಾಗತಿಕ ಕ್ಯಾಲೆಂಡರನ್ನು ರೂಪಿಸಲು ಸಹಕಾರಿಯಾಗಿದೆ. ಈ ಕ್ಯಾಲೆಂಡರುಗಳನನು ರೂಪಿಸುವವರು ಸಾಮಾನ್ಯವಾಗಿ ಜ್ಯೋತಿಷಿಗಳ ಪಾಲಿಗೆ ಲಾಭದಾಯಕ ವ್ಯಕ್ತಿಗಳಾಗಿರುತ್ತಾರೆ.

ಸೃಷ್ಟಿವಿದ್ಯೆಯ ವಿಚಾರಗಳಿಗೆ ಸಂಬಂಧಿಸಿದಂತೆ 'ರೇಖಾತ್ಮಕ' ಮತ್ತು 'ಚಕ್ರಾತ್ಮಕ' ಕಾಲಗಳೆರಡೂ ಹೊಂದಿಕೆಯಾಗುವುದಿಲ್ಲ. ಇದಕ್ಕೆ ಕಾರಣ ವಿಶ್ವದಲ್ಲಿಯ ಒಂದೇ ರೀತಿಯ ವಿಚಾರಗಳು. ಈ ಸೃಷ್ಟಿವಿದ್ಯೆಯ 'ಕಾಲ'ವು ಹಲವಾರು ಕಾಲಚಕ್ರಗಳನ್ನು ಹೊಂದಿದೆ, ವಿಶ್ವದಾದ್ಯಂತ ಇದೆ, ಮತ್ತು ಇದು ಅನಂತವಾದುದು ಎಂದೂ ಹೇಳಬಹುದು. ಕ್ಯಾಲೆಂಡರ್ ರಚನೆಯಲ್ಲಿ ತುಂಬಾ ಮಹತ್ವವನ್ನು ಪಡೆದುಕೊಂಡಿದೆ. ಕಾಲದ ಲೆಕ್ಕಾಚಾರದಲ್ಲಿ ಕ್ಯಾಲೆಂಡರ್ ತಯಾರಕರು ಅದನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುತ್ತಾರೆ. ಈ ಕ್ಯಾಲೆಂಡರುಗಳು 'ಕಾಲ'ವನ್ನು ಅಳೆಯುವ ಬಹುದೊಡ್ಡ ಸಾಧನಗಳು, ಇವುಗಳ ತಯಾರಕರು ಜ್ಯೋತಿಷ್ಯಾಸ್ತ್ರದಲ್ಲಿ 'ವೃತ್ತಿಪರ'ರಾಗಿರುತ್ತಾರೆ. ಸಾಮಾನ್ಯವಾಗಿ ಕೆಲವೊಮ್ಮೆ ಈ ಸಮಯದ ಪರಿಕಲ್ಪನೆ ಮತ್ತು ಜ್ಯೋತಿಷ್ಯ ಸಿದ್ಧಾಂತಗಳು ಸಮಾನಾಂತರದಲ್ಲಿ ಚಲಿಸುತ್ತಿರುತ್ತವೆಯಾದರೂ ಅವು ಪರಸ್ಪರ ಅವಲಂಬನೆಯಾಗಿರುವುದಿಲ್ಲ. ಜ್ಯೋತಿಷಿಗಳು ಸಮುಯವನ್ನು ಲೆಕ್ಕಾಚಾರ ಮಾಡಿ, ಅದನ್ನು ಭಾವನಾತ್ಮಕಗೊಳಿಸುತ್ತಾರೆ. ಮುಂದೆ ಇದು ಹಲವಾರು ರೂಪಗಳಲ್ಲಿ ವಿಸ್ತಾರತೆಯನ್ನು ಪಡೆಯುತ್ತದೆ. ಇದು ತಾರಾ ಮಂಡಲಕ್ಕೆ ಹತ್ತಿರವೆನ್ನುವಂತೆ ಚಿತ್ರಿಸಿ ಅದಕ್ಕೊಂದು ಅಂದಾಜನ್ನು ಸೃಷ್ಟಿಸುತ್ತಾರೆ. ಅಂದರೆ, ಅವುಗಳ ಕಕ್ಷೆ, ನಕ್ಷತ್ರ ಪುಂಜ, ಗ್ರಹಣ, ಹೀಗೆ ಹಲವಾರು ವರ್ಷಗಳಿಂದ ಚಾಲ್ತಿಯಲ್ಲಿರುವ ಈ ಸಂಗ್ರಹಿತ ಜ್ಞಾನವು ಆಕಾಶ ಕಾಯ ಮತ್ತು ನೆರಳು-ಬೆಳಕಿನಾಟಗಳಿಗೆ ಸಂಬಂಧಿಸಿದ್ದಾಗಿದೆ. ಕಾಲದ ಈ ಎಲ್ಲಾ ಮಾದರಿಗಳ ಸೃಷ್ಟಿಕ್ರಿಯೆಗೆ ಸಂಬಂಧಿಸಿದವುಗಳಾಗಿವೆ. ಈ ಸೃಷ್ಟಿಕ್ರಿಯೆಯ ಕಾಲ ಘಟ್ಟವನ್ನು ತಿಳಿದುಕೊಳ್ಳಲು ನಮಗೆ 'ಕಲ್ಪನೆ' ಅಥವಾ 'ಅಂತರ್ಜ್ಞಾನ'ದ ಅವಶ್ಯಕತೆಯಿಲ್ಲ.

ಭಾರತೀಯ ಆರಂಭಿಕ ಸಾಹಿತ್ಯದಲ್ಲಿ ಕಾಲದ ಪ್ರಜ್ಞೆಯನ್ನು ನಿರ್ಧರಿಸುವಾಗ ಅಥವಾ ಗುರುತಿಸುವಾಗ ನಮಗೆ ಆಚರಣೆಗಳ ಅದರಲ್ಲೂ ತ್ಯಾಗ, ಬಲಿದಾನದಂಥ ಆಚರಣೆಗಳ ಅವಶ್ಯಕತೆಯಿರುವುದಿಲ್ಲ. 'ರೇಖಾತ್ಮಕ' ಮತ್ತು 'ಚಕ್ರಾತ್ಮಕ' ಎಂಬೆರಡು ಪ್ರಕಾರಗಳನ್ನೊಳಗೊಂಡಂತೆ ಕಾಲವು ಐದು ಚಕ್ರಗಳನ್ನು ಕುರಿತು ಹೇಳುತ್ತದೆ. ಇದರಲ್ಲಿ ಐದು ವರ್ಷಗಳ 'ಸೂರ್ಯಮಾನ' ಮತ್ತು 'ಚಂದ್ರಮಾನ'ಯುಗಗಳೆಂಬ ಎರಡು ಪ್ರಕಾರಗಳನ್ನು ಸೇರಿಸಲಾಗಿದೆ. ಇದನ್ನು ಕ್ಯಾಲೆಂಡರ್‌ಗಳೆಂದೂ ಕರೆಯಲಾಗುತ್ತದೆ. ಈ ಎರಡೂ ಪ್ರಕಾರಗಳು ನಕ್ಷತ್ರದ ಆಧಾರದ ಮೇಲೆ ಪರಿಗಣಿತವಾಗುತ್ತವೆ. ಆರಂಭಿಕ ಭಾರತದ ಜ್ಯೋತಿಷ್ಯಾಸ್ತ್ರದಲ್ಲಿ 'ನಕ್ಷತ್ರ'ವು ಬಹುಮುಖ್ಯ ಚಟುವಟಿಕೆಯನ್ನು ಹೊಂದಿದೆ. 'ಸೂರ್ಯ', 'ಚಂದ್ರ'ರ ಹಾದಿಯನ್ನು ಈ 'ನಕ್ಷತ್ರ' ಪುಂಜಗಳ ಸಹಾಯದಿಂದಲೇ ಗುರುತಿಸಲಾಗುತ್ತದೆ. ಸಾಮಾನ್ಯವಾಗಿ ಐದು ವರ್ಷಗಳ ಅವಧಿಯ ಚಕ್ರವನ್ನು 'ಯುಗ' ವೆಂದು ಗುರುತಿಸಿ, ಮುಂದೆ ಇದರ ಅವಧಿಯನ್ನು ಐದು ವರ್ಷಕ್ಕಿಂತ ಹೆಚ್ಚಿನ ದಿನಗಳಿಗೆ ವಿಸ್ತರಿಸಲಾಯಿತು. ಈ ಯುಗವೆಂಬುದು 'ದಾಸ್ಯತ್ವ'ವನ್ನು ಸೂಚಿಸುತ್ತದೆ. 'ಯುಗ', 'ದಾಸ್ಯತ್ವ'ವನ್ನು ಸೂಚಿಸಿದರೆ ಇದು ಅಸ್ತಿತ್ವದ ಪ್ರಶ್ನೆಯಾಗಿ ನಮ್ಮನ್ನು ಕಾಡುತ್ತದೆ. ಅಸ್ತಿತ್ವದ ಜೊತೆಗೆ ಬಂಧಿಸಲ್ಪಟ್ಟಿರುತ್ತದೆ. ಗ್ರಹಗಳ ಜೊತೆಗೆ ಸಂಬಂಧ ಹೊಂದಿರುವುದರಿಂದ ಒಂದು ನಿರ್ದಿಷ್ಟ ಕಾಲಾವಧಿಯವರೆಗೆ ಅಂದರೆ ಆರಂಭ ಮತ್ತು ಅಂತ್ಯದವರೆಗೂ ಇರುತ್ತದೆ. ಆರಂಭಿಕ ಜ್ಯೋತಿಷ್ಯಾಸ್ತ್ರದಲ್ಲಿ ಚಂದ್ರ ಮತ್ತು ಸೂರ್ಯರನ್ನು ಗ್ರಹಗಳೆಂದೇ ಗುರುತಿಸಲಾಗಿತ್ತು. ಐದು ವರ್ಷಗಳ ಅವಧಿಗಿಂತ ಮುಂಚೆ ಅಲ್ಪಕಾಲದಲ್ಲಿಯೇ ನಕ್ಷತ್ರ ಪುಂಜಗಳು ವಿಸ್ತಾರತೆಯ ಜೊತೆಗೆ ಪ್ರಾಮುಖ್ಯತೆಯನ್ನೂ ಪಡೆದುಕೊಂಡಿವೆ ಈ ಜ್ಯೋತಿಷ್ಯಾಸ್ತ್ರದಲ್ಲಿ. ಈ ಯುಗವು ಕೇವಲ ಗ್ರಹಕೂಟಕ್ಕೆ ಸಂಬಂಧಿಸಿದ ವಿಚಾರವನ್ನು ಮಾತ್ರ ಹೊತ್ತೊಯ್ಯುವುದಿಲ್ಲ, ಜೊತೆಗೆ 'ಕಾಲಚಕ್ರ' ಮತ್ತು 'ಗ್ರಹಕೂಟ'ಗಳ ನಡುವಿನ ಸಾಮರಸ್ಯವನ್ನೂ ಕೊಂಡೊಯ್ಯುತ್ತದೆ. ಅಲ್ಲದೆ ಅವುಗಳು 'ಉಪದ್ರವ'ಗಳೆಂದೂ ಕರೆಯಲ್ಪಡುತ್ತವೆ. ಉದಾಹರಣೆಗೆ ಒಳ್ಳೆಯ, ಕೆಟ್ಟ, ದೇವರು ಮತ್ತು ಮಾನವರು, ಬದುಕು ಮತ್ತು ಸಾವು, ಹೀಗೆ ಇವೆಲ್ಲಾ ಸೇರಿ ಒಂದು ಗ್ರಹಕೂಟವನ್ನು ನಿರ್ಧರಿಸುತ್ತವೆ, ಈ ಗ್ರಹಕೂಟವು ಮುಂದೆ 'ಯುಗ'ವನ್ನು ಸೇರುತ್ತದೆ.

ಜ್ಯೋತಿಷ್ಯಾಸ್ತ್ರದಲ್ಲಿ ಸಮಯ ಪರಿಪಾಲನೆಗೆ ಮುಖ್ಯವಾಗಿ ಬೇಕಾಗುವ 'ಕಾಲ'ದ ಪ್ರಜ್ಞೆಯು ಪುನಃ ನಮ್ಮನ್ನು ಆರಂಭಿಕ ಕ್ರಿಶ್ಚಿಯನ್ 'ಯುಗ'ಕ್ಕೆ ಕರೆದುಕೊಂಡು ಹೋಗುತ್ತದೆ. ಇದರ ಪೀಠಿಕೆ ಆರಂಭ ಕಾಲದಿಂದ (ಕ್ರಿ.ಶ.ಕದ ಆರಂಭ ಕಾಲ) ಶುರುವಾಗುತ್ತದೆ. ಗ್ರೀಕರಿಂದ ಬಂದ ಕೆಲವು ಆಲೋಚನೆಗಳೂ ಕೂಡ ಜಾತಕ ವಿದ್ಯೆಗೆ ಹೊಂದಿಕೊಳ್ಳುತ್ತವೆ. ಅವುಗಳನ್ನು ಗ್ರೀಕೋ-ರೋಮನ್ ಆಲೋಚನೆಗಳೆಂದು ಕರೆಯಲಾಗಿದೆ, ಇವುಗಳು ಕೂಡ ಕಾಲದ ಚರ್ಚೆಯಲ್ಲಿ ತುಂಬಾ ಸಹಕಾರಿಯಾಗಿವೆ.

ಕ್ರಿ.ಪೂ. ೫ನೇ ಶತಮಾನದಲ್ಲಿ ಭಾರತೀಯರ ಆಸಕ್ತಿಗಳಿದ್ದುದೇ 'ಕಾಲ'ದ ಪಠ್ಯ ಪ್ರಕಟಣೆಯಲ್ಲಿ, ನಂತರ ಅದು ಜ್ಯೋತಿಷ್ಯ ಶಾಸ್ತ್ರವಾಗಿ ಪರಿವರ್ತನೆಯಾಯಿತು. ಈ ಜ್ಯೋತಿಷ್ಯಾಸ್ತ್ರದ ಅಧ್ಯಯನದ ಸಂದರ್ಭದಲ್ಲಿ 'ಕಾಲ'ಗಣನೆಯು ಬಹುಮುಖ್ಯ ಸಂಗತಿಯಾಗಿತ್ತು. ಗ್ರೀಕ್ ಜ್ಯೋತಿಷ್ಯಾಸ್ತ್ರವು ಬ್ಯಾಬಿಲೋನಿಯಾದ ಆಲೋಚನೆಗಳನ್ನಿಟ್ಟುಕೊಂಡು ಅಭಿವೃದ್ಧಿ ಪಡಿಸಿದ ಜ್ಯೋತಿಷ್ಯಾಸ್ತ್ರವನ್ನು ಪಶ್ಚಿಮ

ವಿಷ್ಯಾವು ಪರಿಚಯಿಸಿತು, ಅದು ಮುಖ್ಯವಾಗಿ ಚಕ್ರೀಯ ಕಾಲವನ್ನು ಕುರಿತಾದುದು; ಇದು ಮುಂದೆ ಸಮುದ್ರ ಮತ್ತು ಭೂ-ಭಾಗದ ಮೇಲಿನ ವಾಣಿಜ್ಯ (ವ್ಯಾಪಾರ)ದ ಸಂಬಂಧಗಳನ್ನು ಭಾರತದ ಉತ್ತರ ಹಾಗೂ ಪಶ್ಚಿಮ ಭಾಗಗಳ ಜೊತೆಗೆ ಬೆಸೆಯಿತು. ಬಹಳಷ್ಟು ಕಡೆಗಳಿಂದ ಬಂದ ಯವನರು, ರೈತರು, ವ್ಯಾಪಾರಸ್ಥರು, ಭಾರತದಲ್ಲಿಯೇ ಬಹಳಷ್ಟು ವರ್ಷಗಳ ಕಾಲ ಉಳಿದ ಪರಿಣಾಮ ಇಲ್ಲಿ ಈ ತರಹದ ಒಂದು ಆಲೋಚನಾ ಕ್ರಮವನ್ನು ಹುಟ್ಟು ಹಾಕಿರಬೇಕು. ಭಾರತೀಯರಲ್ಲಿ ಸೇರಿಕೊಂಡ ಈ ಬ್ಯಾಬಿಲೋನಿಯನ್ ಗ್ರೀಕ್ ಆಲೋಚನಾಕ್ರಮವು ಗಣಿತದ ಹುಟ್ಟಿಗೆ ಕಾರಣವಾಗಿದೆ.(ರೋಮಿಲಾ ಥಾಪರ್, Time as a Metopher of History ಪು:೧೨) ಮುಂದೆ ಇದು ವಿಸ್ತೃತ ಗಣಿತೀಯ ಲೆಕ್ಕಾಚಾರಕ್ಕೂ ದಾರಿ ಮಾಡಿಕೊಟ್ಟಿತು; ಅಂದರೆ, ಗ್ರಹ ಮಂಡಲ, ನಕ್ಷತ್ರಗಳು, ಸೂರ್ಯಮಾನ ಕಾಲ, ಚಂದ್ರಮಾನ ಕಾಲ, ಇವುಗಳನ್ನು ಕುರಿತಾಗಿ ಜ್ಯೋತಿಷಿಗಳು ತಮ್ಮದೇ ಶೈಲಿಯಲ್ಲಿ ಆಲೋಚನೆಗಳನ್ನು ಮಾಡತೊಡಗಿದರು. ನಂತರ ಇದು ಮೂಲದಿಂದಲೇ ಬದಲಾವಣೆಗೊಳಪಟ್ಟಿದ್ದೊಂದು ವಿಶೇಷವೆನಿಸುತ್ತದೆ. ಈ ಸಂದರ್ಭದಲ್ಲಿಯೇ (ಕ್ರಿ.ಶ ೬ನೇ ಶತಮಾನ) "ಸಿದ್ಧಾಂತ ಜ್ಯೋತಿಷ್ಯ"ವನ್ನು "ವೇದಾಂಗ ಜ್ಯೋತಿಷ್ಯ"ವನ್ನಾಗಿ ಮಾರ್ಪಡಿಸಲಾಯಿತು. ಆದರೆ ಇಂದು ತಾರಾಮಂಡಲ ಮತ್ತು ಗ್ರಹಗಳ ಚಲನೆಯನ್ನು ನೋಡಿಕೊಂಡೇ 'ಕಾಲ'ವನ್ನು ನಿಗದಿ ಪಡಿಸಲಾಗುತ್ತದೆ.

ಕೇವಲ ಈ ಜ್ಯೋತಿಷ್ಯಾಸ್ತ್ರವಷ್ಟೇ ಅಲ್ಲದೇ ಪುರಾಣಗಳೂ ಕೂಡ ನಮಗೆ ಕಾಲದ ಬಗೆಗಿನ ಚರ್ಚೆಗೆ ವಸ್ತುವನ್ನು ದೊರಕಿಸುತ್ತವೆ. ಪುರಾಣಗಳು ಸೃಷ್ಟಿಯ ಮೂಲವನ್ನು ಕುರಿತಾಗಿ ಮಾತಾಡುತ್ತವೆಯಾದರೂ ಅಲ್ಲಿ 'ಕಾಲ'ದ ಕುರಿತ ಚರ್ಚೆ ಮೂಲಕ್ಕಿಂತ ಭಿನ್ನ. "ಅದು 'ದಿನ' ಬಳಕೆಯ ಕಾಲಕ್ಕಿಂತ ಭಿನ್ನ ಅಂದರೆ ಕಡಿಮೆ ಮಟ್ಟದಲ್ಲಿದೆ ಎನಿಸುತ್ತದೆ. ಅದು ಮೂಲದಿಂದ ಭ್ರಷ್ಟಗೊಂಡಿದೆ ಎಂದೆನಿಸುತ್ತದೆ. ಆದ್ದರಿಂದ ಪುರಾಣಗಳ ನಿರೂಪಣೆಯಲ್ಲಿ ಈ ಭ್ರಷ್ಟಗೊಂಡ ಕಾಲವು ಚರ್ಚೆಯಾಗುವುದಿಲ್ಲ. ಇದು ಇಲ್ಲಿ ನಿಷಿದ್ಧಗೊಂಡ ಕಾಲದ ರೂಪದಲ್ಲಿರುತ್ತದೆ. ಭ್ರಷ್ಟಗೊಂಡ ಕಾಲ ಎಂದರೆ ಇಲ್ಲಿ ಪುರಾಣಗಳಲ್ಲಿ ಚರ್ಚೆಗೊಳಪಡದ, ಕಾವ್ಯಗಳಲ್ಲಿ ಚರ್ಚೆಗೊಳಪಡದ ಎಂದರ್ಥ. ವೇದ ಅಥವಾ ಮಹಾಕಾವ್ಯಗಳ ದೃಷ್ಟಿಕೋನಕ್ಕಿಂತ ಅಥವಾ ಅವುಗಳ ರೀತಿ-ನೀತಿಗಳಿಗನುಸಾರವಾಗಿಲ್ಲದ ಎಂದೂ ಅರ್ಥೈಸಬಹುದು. ಈ ಪೌರಾಣಿಕ ಕಾಲವು ಗತವನ್ನು ನಿರೂಪಿಸುವಲ್ಲಿ ಕ್ರಮಬದ್ಧಕಾಲ ಅಥವಾ ವೈಜ್ಞಾನಿಕ ಕಾಲವನ್ನೂ ವಿಭಾಗಿಸುತ್ತದೆಯೇ ಎಂಬ ಪ್ರಶ್ನೆ ಏಳುತ್ತದೆ. ವೈಜ್ಞಾನಿಕ ಕಾಲ ಕೆಲಮಟ್ಟಿಗೆ ಖಚಿತ ಎನ್ನುವ ಸಮಾಧಾನದ ಮಾಹಿತಿಯನ್ನು ಒದಗಿಸುತ್ತದೆಯಾದರೂ ಜನಪದರಿಗೆ ಇದರ ಅರಿವು ಇರುವುದಿಲ್ಲ. ಮತ್ತೆ ಅವರಿಗೆ ಪುರಾಣಗಳು, ಕಾವ್ಯಗಳೇ ಅಧಿಕೃತ ಕಾಲದ ವಕ್ತಾರರಾಗಿ ಕಾಣಿಸಿಕೊಳ್ಳುತ್ತವೆ.

ಇತಿಹಾಸಕಾರರ ದೃಷ್ಟಿಕೋನ ಇದಕ್ಕೆ ತದ್ವಿರುದ್ಧ ನೆಲೆಯಲ್ಲಿ ಇರುತ್ತದೆ. ಪುರಾಣಗಳಲ್ಲಿ ಸಿಗುವ ಕಾಲದ ಕಲ್ಪನೆಯನ್ನು ಇತಿಹಾಸಕಾರರು ನಿರಾಕರಿಸಿ ಖಚಿತ ಎಂದುಕೊಂಡಿರುವ ವೈಜ್ಞಾನಿಕ ಕಾಲದ ಕುರಿತಾಗಿ ಚರ್ಚೆ ಮಾಡುತ್ತಾರೆ. ಇದಕ್ಕೆ ಅವರು ಕೊಡುವ ಬಹುಮುಖ್ಯ ಕಾರಣವೆಂದರೆ, ಪುರಾಣಗಳಲ್ಲಿ ಸಮಾಜದ ಸ್ಥಿತಿಗತಿಗಳಿಗಿಂತ ನಿಖರವಾಗಿ 'ಕಾಲ'ಕ್ಕೆ ಸಂಬಂಧಿಸಿದ ಮಾಹಿತಿಯ ಲಭ್ಯತೆ ಇಲ್ಲದಿರುವಿಕೆ. ಇನ್ನೊಂದು

ಮುಖ್ಯವಾದ ಸಂಗತಿ ಅವರ ಗಮನಕ್ಕೆ ಬಾರದಿರುವುದು ಅದು 'ಸೃಷ್ಟಿವಿದ್ಯೆ'ಗೆ ಸಂಬಂಧಿಸಿದಂತೆ ಕಾಲದ ಬೇರೆ ಬೇರೆ ಪ್ರಕಾರಗಳನ್ನು ಗಮನಿಸುವುದು. ಇಲ್ಲಿ Cosmological Time, Cyclic time, linear timeಗಳ ಕುರಿತಾಗಿ ರೋಮಿಲಾ ಥಾಪರ್ ಈ ರೀತಿಯಲ್ಲಿ ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ. "Both cylic and linear time are at one level linked with ideas of cosmology-the theory of the universe as an ordered whole and of the possible laws which govern it. Cosmological time, there fore, relates to the universe, is almost infinite, and where it is cyclic, consists in constructions of many cycles of time, setting out as it were, a calendar for the universe."(ಅದೇ, ಪು:೯) ಕ್ಯಾಲೆಂಡರ್‌ಗಳು ಸಮಯ ಅಥವಾ ಕಾಲವನ್ನು ಪರಿಗಣಿಸುವ ಬಹುದೊಡ್ಡ ಸಾಧನಗಳೆಂದು ವಿಶ್ವದಲ್ಲಿಯೇ ಪರಿಗಣಿತವಾಗಿವೆ. ಇವುಗಳ ತಯಾರಕರು ಜ್ಯೋತಿಷ್ಯಾಸ್ತ್ರದಲ್ಲಿ ಲಾಭದಾಯಕ ವ್ಯಕ್ತಿಗಳು.

ಜ್ಯೋತಿಷ್ಯಾಸ್ತ್ರ ಮತ್ತು ಇತಿಹಾಸದ ಕಾಲಕ್ಕೆ ಸಂಬಂಧಿಸಿದಂತೆ ಹೊಸ ಹೊಸ ಪದ್ಧತಿಗಳು ವಿಶೇಷತೆಗಳೊಂದಿಗೆ ಭಿನ್ನ ನೆಲೆಯಲ್ಲಿ ಪಂಡಿತರಿಂದ ಜಾರಿಗೆ ಬಂದವು. ಈ ಸಂದರ್ಭದಲ್ಲಿ ಕಲಿಯುಗದ ಚರ್ಚೆಯು ಆರಂಭಗೊಳ್ಳುತ್ತದೆ. ಕಲಿಯುಗದ ಚರ್ಚೆಯ ಆರಂಭದೊಂದಿಗೇ ಈ 'ಇತಿಹಾಸ ಕಾಲದ' ಆರಂಭವಾಗುತ್ತದೆ. ಇದರ ಕುರಿತಾದ ಆರಂಭದ ಚರ್ಚೆಗಳು ಭಾರತದ ಸಂದರ್ಭಕ್ಕಂತೂ ತುಂಬಾ ಕುತೂಹಲಕಾರಿಯಾಗಿದ್ದವು, ಅಷ್ಟೇ ಪರಿಣಾಮಕಾರಿಯಾದ ರೀತಿಯಲ್ಲಿ ಪ್ರತಿಪಾದಿಸಲ್ಪಟ್ಟಿದೆ. ರೇಖಾತ್ಮಕ ಕಾಲ ಮಾನವು ಕ್ರಿಶ್ಚಿಯನ್ ಶಕೆಯ ಆರಂಭದ ನಂತರಕ್ಕೆ ತುಂಬಾ ವ್ಯಾಪಕ ರೀತಿಯಲ್ಲಿ ಜಾರಿಗೆ ಬಂತು, ಅದು ತುಂಬಾ ಭಿನ್ನ ಭಿನ್ನ ನೆಲೆಗಳಲ್ಲಿ. ಈ (ಸಂದರ್ಭ) ಹಂತದಿಂದ ರಾಜಮನೆತನಗಳ ಪಟ್ಟಿ ಪ್ರಕಟಗೊಳ್ಳುತ್ತಾ ಹೋಯಿತು. ಇದರ ಪರಿಣಾಮವಾಗಿ ಹಲವಾರು ರಾಜಮನೆತನಗಳ ರಾಜರುಗಳ ಆತ್ಮ ಚರಿತ್ರೆ (ಆಡಳಿತ ವೈಖರಿಗಳು) ಬರೆಯಲ್ಪಟ್ಟವು, ಅವರ ಚಟುವಟಿಕೆಗಳ ಕುರಿತಾದ ಬರಹಗಳು ಚಾಲ್ತಿಗೆ ಬಂದವು. ಅದು ಶಾಸನ, ಕಡತ, ನಾಣ್ಯ, ಮುಂತಾದ ಹಲವಾರು 'ಅಧಿಕೃತ'ವೆಂದು ಕರೆಯಲ್ಪಡುವ ಬರಹ ರೂಪಗಳಲ್ಲಿ ಕಾಣಿಸಿಕೊಳ್ಳತೊಡಗಿತು. ಈ ಇತಿಹಾಸ 'ಶಕೆ'ಯ ಒಂದು ಬಹು ಮುಖ್ಯ ಲಾಭವೆಂದರೆ ಇತಿಹಾಸಕಾರರಿಗೆ ಕ್ಷಿಪ್ರವಾಗಿ 'ಕಾಲ ಖಚಿತ'ವಾಗಿ ಅವರ ಆಡಳಿತದ ಕುರಿತ ದಾಖಲೆಗಳ ಲಭ್ಯತೆ. ಈ ಬರೆಹದ ಪರಂಪರೆಯಲ್ಲಿ (ಕಾಲಗಣನೆಯ ಪರಂಪರೆ) ಒಂದು ಘಟನೆ ಅಥವಾ ಒಬ್ಬ ವ್ಯಕ್ತಿ ಒಂದು ಖಚಿತ ಕಾಲ ಘಟ್ಟದ ಕೇಂದ್ರಬಿಂದುವಾಗಿದ್ದನ್ನು ಇಲ್ಲಿ ಗಮನಿಸಬಹುದು. ಈ ಶಕೆಯ ಪರಿಣಾಮವೆಂದರೆ ಬರೆಹ ರೂಪದ ದಾಖಲೆಗಳಿಗೆ ಇತಿಹಾಸವನ್ನು ಗಮನಿಸುವಾಗ, ಕಾಲಗಣನೆಯಲ್ಲಿ ಅತಿಹೆಚ್ಚು, ಅಧಿಕೃತವೆನ್ನುವಷ್ಟರ ಮಟ್ಟಿಗೆ ಪ್ರಾಶಸ್ತ್ಯ ಸಿಕ್ಕಿರುವುದು. ಕೆಲವು ವಿದ್ವಾಂಸರು ಈ ಶಕೆಯ ಬೆಳವಣಿಗೆಯು ಜ್ಯೋತಿಷ್ಯಾಸ್ತ್ರದಲ್ಲಿ ಕಾಲವನ್ನು ಮೀರಿ ಬೆಳೆಯಿತು ಎಂದು ಅಭಿಪ್ರಾಯ ಪಡುತ್ತಾರೆ. ಇದು ಅಧಿಕೃತ ದಿನಾಂಕ ನಿಗಧಿ ಪಡಿಸುವಿಕೆಗೆ ಸಹಾಯವಾಯಿತು. ಇವುಗಳಲ್ಲಿ ಶಾಸನಗಳು ಮಾತ್ರ ಇಂಡಿಯಾದ ಇತಿಹಾಸ ರಚನೆಗೆ ಪೂರಕವಾದ ದಿನಾಂಕಗಳನ್ನು ಗುರುತಿಸುವಲ್ಲಿ ತುಂಬಾ ಸಹಕಾರಿಯಾಗಿದೆ. ಜೊತೆಗೆ ಇತರ ಲಿಖಿತ ಸಾಮಾಗ್ರಿಗಳೂ ಸಹಕಾರಿಯಾಗಿವೆ. ಶಾಸನ, ಪತ್ರಗಳು ಗತ ಇತಿಹಾಸವನ್ನು ಹೇಳುತ್ತವೆ; ಅವು

ರಾಜವಂಶಗಳ 'ಮುನ್ನುಡಿ'ಯನ್ನು ತಕ್ಷಣಕ್ಕೆ ಹೇಳಲು ಆರಂಭಿಸುತ್ತವೆ. ಆದರೆ ಮೂಲ ಪಠ್ಯ, (ಪುರಾಣ ಕಾಲ) ಮನುವಿನ ಕಾಲಘಟ್ಟಕ್ಕೆ ಹೋಗುತ್ತವೆ, ಇದು ಕ್ಯಾಲೆಂಡರ್ ರಹಿತ ಕಾಲ ಗುರುತಿಸುವಿಕೆಯ ಹಂತ. ಇದನ್ನು ರೋಮಿಲಾ ಥಾಪರ್ "Generational Time" ಇದು ವಂಶಾವಳಿಗಳಿಗೆ ನ್ಯಾಯ ಸಮ್ಮತವಾದ ಹೇಳಿಕೆ ಎಂದು ಕರೆಯುತ್ತಾರೆ. ಐತಿಹಾಸಿಕ ಬದಲಾವಣೆಗಳಿಗೆ ಸಂಬಂಧಿಸಿದಂತೆ ರಾಜ ವಂಶಗಳ ಮೂಲದ ಕುರಿತಾದ ಚರ್ಚೆಯು ನಮ್ಮ ಮುಖ್ಯ ಗ್ರಹಿಕೆಗಳಿಗೆ ಸಂಬಂಧಿಸಿದಂತೆ ಖಚಿತವಾದ ಮಾಹಿತಿಯನ್ನು ಒದಗಿಸುತ್ತವೆ.

ನಂತರದ ಕಥನಗಳು ರಾಜರ ಕುರಿತಾಗಿಯೇ ಬಹುಮುಖ್ಯವಾದ ಅಂಶಗಳನ್ನು ಚರ್ಚಿಸುವಲ್ಲಿ ಸಹಕಾರಿಯಾಗಿವೆ. ಅಂದರೆ ಅವರ ಚಟುವಟಿಕೆಗಳು, ಆಗುಹೋಗುಗಳು, ಅವರ ಸ್ಥಾನ, ರಾಜಧಾನಿಯ ಬದಲಾವಣೆಗಳು; ಇದು ದಶಕಗಳವರೆಗಿನ ಬದಲಾವಣೆ, ಮತ್ತು ಆಡಳಿತ ವೈಖರಿ, ಆಡಳಿತದ ಮೇಲಿನ ಹಿಡಿತ, ಕೆಲಸಕಾರ್ಯಗಳ ಅನುಮೋದನೆಗಳು, ಧರ್ಮದ ಪ್ರಚಾರ ಇತ್ಯಾದಿಗಳು. ಕಾಲದ ಪ್ರಕಾರಗಳು ವ್ಯವಸ್ಥಿತವಾದ ರೀತಿಯಲ್ಲಿ ಆರಂಭದ ಕಥೆಗಳನ್ನು ಹೇಳುವುದನ್ನು ನಂತರದ ಕಥನಗಳು, ನಿರೂಪಿಸುತ್ತವೆ. ಈ ಕಥನಗಳು 'ತಾತ್ಕಾಲಿಕ ದೂರವನ್ನು ಗ್ರಹಿಸುವ ಸಾಧನ'ಗಳಾಗಿ ಗತ ಇತಿಹಾಸವನ್ನು ಗ್ರಹಿಸುವಲ್ಲಿ ನೆರವಾಗುತ್ತವೆ.

ಚರಿತ್ರೆ ರಚನೆಯ ಸಂದರ್ಭದಲ್ಲಿ ಮೌಖಿಕ ದಾಖಲೆಗಳನ್ನು ಅದರ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಇತರ ಸಮಕಾಲೀನ ದಾಖಲೆ, ಆಧಾರಗಳೊಂದಿಗೆ ಹೋಲಿಸಿ ನೋಡಲಾಗುತ್ತದೆ. ಇದನ್ನು ಇತಿಹಾಸಕಾರರು ನಿರಾಕರಿಸುತ್ತಾರೆಯಾದರು ಮೌಖಿಕ ಪರಂಪರೆಯಲ್ಲಿ ಯಾವುದೇ ಒಂದು ಘಟನೆಗಿಂತ ಅದರ ಆಶಯ ಮುಖ್ಯವಾಗಿರುತ್ತದೆ. ಇದಕ್ಕೆ ಕಾರಣ ಅದು ಆಶಯ ಪ್ರಧಾನವಾದುದಾಗಿರುತ್ತದೆ. "ಘಟನೆಗೆ ಸಮಾಜದ ಪ್ರತಿಕ್ರಿಯೆ, ಅಭಿಪ್ರಾಯ, ಸಂಸ್ಕೃತಿ, ಈ ಎಲ್ಲಾ ವಿಚಾರಗಳು ಗಣನೀಯವಾಗುತ್ತವೆ. ಪರಂಪರೆಯಲ್ಲಿ ಮೌಖಿಕವಾಗಿ ಸಾಗಿಬರಬೇಕಾದರೆ ಯಾವುದೇ ಮಹತ್ವವಿಲ್ಲದ ಘಟನೆಯ ಸುತ್ತ ಕಥೆ ಹುಟ್ಟಲಾರದು. ಭಾವನಾತ್ಮಕ ಅಂಶಗಳು, ತ್ಯಾಗ, ಬಲಿದಾನ, ಶೋಷಣೆ, ನೋವು, ನಲಿವುಗಳಿಗೆ ಆದ್ಯತೆ ದೊರೆಯುತ್ತದೆ. ಹಾಗೆಂದ ಮಾತ್ರಕ್ಕೆ ರಾಜಕೀಯ ವಿಚಾರಗಳನ್ನು ಚರ್ಚಿಸಿಲ್ಲವೆಂದು ಅರ್ಥವಲ್ಲ. ರಾಜಕೀಯ ವಿಚಾರಗಳು ಪುರಾಣೀಕರಣಗೊಂಡಿರುತ್ತವೆ. ಯಾವುದು ಮೌಖಿಕ ಸಂಪ್ರದಾಯದಲ್ಲಿ ಸಾಧ್ಯವಿಲ್ಲವೆಂದು ಭಾವಿಸಿರುತ್ತೇವೆಯೋ ಅಂತಹ ವಿಚಾರಗಳೂ ಪರಂಪರೆಯಲ್ಲಿ ಹರಿದು ಬರುವ ಸಾಧ್ಯತೆಯಿದೆ. ಭಾರತದಲ್ಲಿ ಮತ್ತು ಆಫ್ರಿಕದಲ್ಲಿ ವಂಶಾವಳಿಗಳನ್ನು ಹಾಡುವಂತಹ ಬುಡಕಟ್ಟುಗಳು ಕಂಡುಬರುತ್ತವೆ. ಇಲ್ಲಿ ಆಶಯಕ್ಕಿಂತ ಮಾಹಿತಿ ಮುಖ್ಯವಾಗುತ್ತದೆ. ಇದು ಅಪರೂಪದ ಸಂದರ್ಭ, ಉಳಿದಂತೆ ಮೌಖಿಕ ಪರಂಪರೆಯಲ್ಲಿ ಹರಿದು ಬಂದ ವಿಚಾರಗಳಲ್ಲಿ ಆಶಯ ಮುಖ್ಯವಾಗಿ ಮಾಹಿತಿ ಪೂರಕವಾಗಿ ಕಂಡು ಬರುತ್ತದೆ.(ಡಾ.ವಸು, ಮೌಖಿಕ ಇತಿಹಾಸ, ಪು:೭೭-೭೮) ಇದು ಜಗತ್ತಿನ ಯಾವುದೇ ಸಮುದಾಯದ ಮೌಖಿಕ ಪರಂಪರೆಯಲ್ಲಿ ಕಂಡುಬರುವಂತಹ ಸಾಮಾನ್ಯ ಅಂಶವಾಗಿದೆ. ಇದು ಆಯಾ ತಲೆಮಾರುಗಳ ಸಮಕಾಲೀನ ಸಂದರ್ಭದಲ್ಲಿ ಮೌಖಿಕವಾಗಿಯೇ ಹರಿದು ಬಂದ ಅಂಶವಾಗಿರುತ್ತದೆ. ಇದಕ್ಕೆ ಉದಾಹರಣೆ

ಜನಪದ ಸಾಹಿತ್ಯದ ಸಂಗ್ರಹಣೆ. ಇದನ್ನು ಹಲವಾರು ವಕ್ತೃಗಳಿಂದ ಸಂಗ್ರಹಿಸಬೇಕಾಗುತ್ತದೆ. ಇಲ್ಲಿ ಕೆಲವು ಪಾಠಾಂತರಗಳು ಸಿಗುತ್ತವೆಯಾದರೂ ಅದಕ್ಕೆ ಭೌಗೋಳಿಕ ವ್ಯತ್ಯಾಸ ಕಾರಣವಾಗುತ್ತದೆ. ಮೂಲದಲ್ಲಿ ಕಥೆ ಮಾತ್ರ ಒಂದೇ ಯಾಗಿರುತ್ತದೆ. ಕೆಲವೊಮ್ಮೆ ಆಶಯದಲ್ಲಿಯೂ ಸ್ವಲ್ಪ ವ್ಯತ್ಯಾಸವಾಗುವ ಸಾಧ್ಯತೆಗಳಿವೆ. ಉದಾಹರಣೆಗೆ ಮಹಾಭಾರತದ ಕಥೆ ಪ್ರಾದೇಶಿಕವಾಗಿ ವೈವಿಧ್ಯತೆಯನ್ನು ಹೊಂದಿದೆ. ಬುಡಕಟ್ಟುಗಳು ತಮಗೆ ತಮ್ಮ ಲೋಕ ದೃಷ್ಟಿಗೆ ಅನುಗುಣವಾದ ರೀತಿಯಲ್ಲಿ ಕಥೆಯನ್ನು ಕಟ್ಟಿಕೊಂಡರೆ, ಬೇರೆ ಬೇರೆ ಸಮುದಾಯಗಳು ತಮ್ಮ ಲೋಕದೃಷ್ಟಿ, ತಮ್ಮ ಅನುಭವದ ಮೂಲಕ ಕಥೆಗಳನ್ನು ಕಟ್ಟಿಕೊಳ್ಳುತ್ತವೆ. ಇದರ ಜೊತೆಗೆ ಒಂದು ಘಟನೆಗೆ ಅಥವಾ ಒಂದು ಕಾವ್ಯದ ಕುರಿತಾಗಿ ಮತ್ತು ನಾಲ್ಕು ಜನ ಕಲಾವಿದರನ್ನು ಸಂದರ್ಶಿಸಿದಾಗಲೂ ನಮಗೆ ಒಂದೇ ರೀತಿಯ ಮಾಹಿತಿ ಸಿಗುವುದಿಲ್ಲ. ಇದಕ್ಕೆ ಅವರ ಭಿನ್ನ ಅನುಭವ, ಭಿನ್ನ ಸೈದ್ಧಾಂತಿಕ ದೃಷ್ಟಿಕೋನಗಳು, ಅವರ ಸಾಮಾಜಿಕ ಹಿನ್ನೆಲೆ, ಅವರ ಭಿನ್ನ ಗ್ರಹಣ ಶಕ್ತಿಯೂ ಕಾರಣವಾಗುವುದನ್ನು ಗಮನಿಸಬೇಕು. ಇತಿಹಾಸಕಾರರು ಮೌಖಿಕ ಪರಂಪರೆಯನ್ನು ನಿರಾಕರಿಸಲು ಇವುಗಳೂ ಕೂಡ ಕಾರಣವಾಗಿವೆ. ಬರೆಹಕ್ಕೆ ಇರುವ ಮನ್ನಣೆ ಕಲಾವಿದ ನಿರೂಪಿಸುವ ಕಥನಕ್ಕೂ ಮನ್ನಣೆ ದೊರೆಯಬೇಕು. ಐತಿಹ್ಯ, ಪುರಾಣ ಕಥೆಗಳು ಹುಟ್ಟಿಕೊಳ್ಳುವುದು ಹಲವಾರು ತಲೆಮಾರುಗಳಷ್ಟು ಕಾಲವನ್ನು ತೆಗೆದುಕೊಳ್ಳುತ್ತವೆ. ಸಂಪ್ರದಾಯವಾಗಿ ಹರಿದು ಬಂದ ಇವುಗಳನ್ನು ಇತಿಹಾಸ ರಚನೆಗೆ ಬಳಸಿಕೊಳ್ಳುವ ಕ್ರಮವೇ ಬೇರೆಯಾಗಿರುತ್ತದೆ. ಇದರ ಹಿಂದೆ ರಾಜಕಾರಣವೊಂದು ಇರುವುದು ಗೊತ್ತಾಗುತ್ತದೆ. ರಾಜಕೇಂದ್ರಿತ ಇತಿಹಾಸ ರಚನೆಗೆ ಈ ಆಧಾರಗಳು ಪ್ರಮುಖವೆನಿಸುತ್ತವೆ. ಸಾಂಸ್ಕೃಕ ಇತಿಹಾಸ ರಚನೆಗೆ ಇವುಗಳ ಅವಶ್ಯಕತೆ ಇರುವುದಿಲ್ಲ. "ಕರ್ನಾಟಕದ ಸಾಂಸ್ಕೃತಿ ಚರಿತ್ರೆಯನ್ನು ಮಹಿಳೆಯರ ಕಥನ ಗೀತೆ, ಕಾವ್ಯ, ಆಚರಣೆ ಹಾಗೂ ಸಂಪ್ರದಾಯಗಳ ಮೂಲಕವೇ ರಚಿಸಿದ್ದೇ ಆದರೆ ಇತಿಹಾಸದ ಎಷ್ಟೋ ಪೂರ್ವಗ್ರಹಗಳಿಗೆ ತಕ್ಕ ಉತ್ತರವನ್ನು ನೀಡಿದಂತಾಗುತ್ತದೆ. ಪುರುಷಾಧಿ ಪತ್ಯದ ಚರಿತ್ರೆಯ ಅಪರಾಧಗಳಿಂದ ದೂರವಾದ ಕಥನಗೀತೆಗಳ ಒಳಗಿನ ಸುಪ್ತ ಇತಿಹಾಸವು ನಮ್ಮ ಅರಿವಿಗೆ ಬೇಕಾದುದು. ಜನಪದ ಸಾಹಿತ್ಯದ ಅನೇಕ ಸಂಗತಿಗಳನ್ನು ಕೇವಲ ಸಾಹಿತ್ಯದ ನೆಲೆಯಿಂದಲೇ ಗುರುತಿಸುವ ಪರಿಪಾಠ ಈಗ ಕಡಿಮೆ ಆಗಿದ್ದು, ಅವುಗಳ ಚಾರಿತ್ರಿಕ ಅಂಶಗಳನ್ನು ಪತ್ತೆಮಾಡುವುದು ವಿಶೇಷವಾಗಿದೆ. ಆರಂಭದಲ್ಲಿ ನವೋದಯ ಪ್ರಜ್ಞೆಯ ಜಾನಪದ ಅಧ್ಯಾಯನಕಾರರು ಮೌಖಿಕ ಪರಂಪರೆಯನ್ನು ಗಂಭೀರವಾಗಿ ಪರಿಗಣಿಸಿ, ಕ್ಷೇತ್ರ ನಿಷ್ಠವಾಗಿ ಸಂಗ್ರಹಿಸಿ ಇಡೀಯಾಗಿ ಜನಪದ ಸಮಾಜವನ್ನು ರಾಷ್ಟ್ರೀಯ ಭಾವೈಕ್ಯತೆಯಲ್ಲಿ ಉದಾರವಾಗಿ ವಿವರಿಸಿದ್ದಾರೆ. (ಡಾ.ಮೊಗಳ್ಳಿ ಗಣೇಶ್, ಮೌಖಿಕ ಇತಿಹಾಸದ ತಾತ್ವಿಕ ನೆಲೆ, ಪು:೧೮) ನವೋದಯ ಸಂದರ್ಭದ ಜಾನಪದ ಅಧ್ಯಯನಕಾರರು ಮೌಖಿಕ ಇತಿಹಾಸದ ಕುರಿತಾಗಿ ತಮಗೆ ಗೊತ್ತಿಲ್ಲದೆಯೇ ಸಾಕಷ್ಟು ಕೆಲಸವನ್ನು ಮಾಡಿದ್ದಾರೆ. ಈ ಕೆಲಸಗಳನ್ನು ಪುನರ್ ವ್ಯಾಖ್ಯಾನಿಸಿ ಸಮಕಾಲೀನ ಸಂದರ್ಭಕ್ಕೆ ಅನುಸಂಧಾನಗೊಳಿಸುವ ಜರೂರು ಇದೆ.

ಮೌಖಿಕ ಇತಿಹಾಸದ ವಿಷಯವು ಅಮೂರ್ತ ಸ್ವರೂಪದ್ದಾಗಿರುವುದರಿಂದ ಅದರ ಚರ್ಚೆಗಳು ತುಂಬಾ ಜಟಿಲತೆಯನ್ನು ಸೃಷ್ಟಿಸುತ್ತಾ ಹೋಗುತ್ತವೆ. 'ರಮ್ಯ' ಎನ್ನುವ ಕಲ್ಪನೆಯನ್ನು ಅದರ ಚರ್ಚೆಯು

ಪಡೆಯುತ್ತಿದೆ. ಇದಕ್ಕೆ ಕಾರಣ ಮುಖ್ಯವಾಗಿ ಮೌಖಿಕ ಸಮಾಜದ ನಿರೂಪಣೆಗಳು. ಆ ನಿರೂಪಣೆಗಳೆಲ್ಲ ಸಂಕೀರ್ಣ ನೆಲೆಯಲ್ಲಿ ವಿಸ್ತರಿಸುತ್ತಾ ಹೋಗುತ್ತವೆಯಾದ್ದರಿಂದ ಮೌಖಿಕ ಚರಿತ್ರೆಯ ಚರ್ಚೆಗಳೆಲ್ಲವೂ ಹೀಗೆಯೇ ಅಮೂರ್ತವೆನಿಸುತ್ತವೆ. ಈ ಸಂಕೀರ್ಣತೆಯನ್ನು ನಿರ್ದಿಷ್ಟಗೊಳಿಸಿದರೆ ಅದರ ಅರ್ಥ ಅಥವಾ ಕಥನಗಳ ಒಟ್ಟಾರೆ 'ಅರ್ಥ'ಗಳೆಲ್ಲವೂ ಕಳೆದು ಹೋಗುವ ಸಾಧ್ಯತೆಯೇ ಹೆಚ್ಚು. ಹಾಗಾಗಿಯೇ ಮೌಖಿಕ ಪರಂಪರೆಯ ನಿರ್ವಚನವು ತುಂಬಾ ಸಂಕೀರ್ಣತೆಯನ್ನು ಹೊಂದಿದೆ. "ಏಕ ಕಾಲಕ್ಕೆ ಮೌಖಿಕ ಕಥನಗಳು ಎರಡು ಬಗೆಯ ಇತಿಹಾಸವನ್ನು ನುಡಿಸುತ್ತಿರುತ್ತವೆ. ಮೇಲು ಮಟ್ಟದಲ್ಲಿ ತನ್ನದಲ್ಲದ ಅಲಂಕಾರಗಳನ್ನು ಧರಿಸಿಕೊಂಡಿದ್ದರೆ, ಒಳ ಮೈಯಲ್ಲಿ ಮಾತ್ರ ತಮ್ಮದೇ ಪ್ರತಿಬಿಂಬವನ್ನು ವ್ಯಕ್ತ ಪಡಿಸುವ ಕುರುಹನ್ನು ಬಿತ್ತುತ್ತವೆ. ಸರಳವಾಗಿ ಹೇಳುವುದಾದರೆ, ಹೊರ ಮೈಯಲ್ಲಿ ವ್ಯವಸ್ಥೆಯ ಪರವಾದ ಇತಿಹಾಸವನ್ನು ವೈಭವೀಕರಿಸಿ ಒಪ್ಪಿ ಅದನ್ನು ಅಭಿನಯಿಸುವುದು ಒಂದು ಕಡೆಗಿದ್ದರೆ; ಅದಕ್ಕೆ ವಿರುದ್ಧವಾಗಿ ಒಳ ಮೈಯಲ್ಲಿ ತಾನು ಹಾಡುವುದರ ವಿರುದ್ಧವಾಗಿಯೇ ಮೌನವಾಗಿ ರಮ್ಯ ಆಕ್ರಂದನದಲ್ಲಿ ದುರಂತ ಪ್ರಜ್ಞೆಯನ್ನು ವ್ಯಕ್ತಪಡಿಸುವ ಗುಣ ಮತ್ತೊಂದು ಕಡೆಗಿದೆ. ಇಂತಹ ವೈರುಧ್ಯದ ಚಾರಿತ್ರಿಕತೆಯು ಹೆಚ್ಚಾಗಿ ಮಹಿಳೆಯರ ಕಥನ ಗೀತೆಗಳಲ್ಲಿ ದಟ್ಟವಾಗಿ ಕಾಣಸಿಗುತ್ತದೆ. ಮಹಿಳೆಯರು ಪುರುಷ ಸಮಾಜದ ಯಾಜಮಾನ್ಯವನ್ನು ತಮ್ಮ ಅಭಿವ್ಯಕ್ತಿಯ ಹೊರರಚನೆಯಲ್ಲಿ ಒಪ್ಪಿ ವೈಭವಿಕರಿಸುತ್ತಲೇ ಒಳದನಿಯಲ್ಲಿ ಪಿಸುಮಾತ ಆಕ್ರಂದನದಲ್ಲಿ ದುರಂತವನ್ನು ಹಾಡುತ್ತಾ ಶಾಪಾಶಯದಲ್ಲಿ ಚರಿತ್ರೆಯ ವ್ಯಂಗವನ್ನು ಅನಾಮಧೇಯವಾಗಿ ಹೊರಡಿಸಿರುತ್ತಾರೆ. (ಅದೇ, ಪು:೧೪)ಇದು ಚರಿತ್ರೆಯ ಬಹುದೊಡ್ಡ ಹಿನ್ನಡೆಯೂ ಹೌದು. ಚರಿತ್ರೆಯಲ್ಲಿ ಕೇವಲ ಭೂತ ಅಥವಾ ಬರೀ ವರ್ತಮಾನವನ್ನು ಕಾಣಲಾಗುವುದಿಲ್ಲ. ಅದು ಯಾವತ್ತೂ ಈ ತರಹದ ಅನೇಕ ದ್ವಂದ್ವಗಳನ್ನು ತನ್ನೊಟ್ಟಿಗೆ ಒಯ್ಯುತ್ತಿರುತ್ತದೆ. ಈ ದ್ವಂದ್ವಗಳನ್ನು ಮೀರಲಾಗದೆಯೇ ಚರಿತ್ರೆ ನಮಗೆ ಭೂತ ಅಥವಾ ಗತದ ಮಾದರಿಯಾಗಿ ಕಾಣಿಸಿಕೊಳ್ಳುತ್ತದೆ. ಮೌಖಿಕ ನಿರ್ವಚನಗಳು ಮಾತ್ರ ಈ ತರಹದ ದ್ವಂದ್ವಗಳಿಂದ ಮುಕ್ತವಾಗಿವೆ. ಅವೆಲ್ಲ ಏಕ ಕಾಲಕ್ಕೆ ಒಳ ಮೈ ಮತ್ತು ಹೊರ ಮೈಯಲ್ಲಿ ಧ್ವನಿಸುತ್ತಿರುತ್ತವೆ. ಇದನ್ನು ನಾವು ನಮ್ಮ ಪ್ರಜ್ಞೆಯ ಭಾಗವಾಗಿ ನೋಡುವಂತಹದ್ದಾಗಬೇಕಿದೆ. ಮೌಖಿಕ ಪರಂಪರೆಯನ್ನು ಇತಿಹಾಸದಿಂದ ಪ್ರತ್ಯೇಕಿಸುವ ಕ್ರಮವನ್ನು ಹೊರತು ಪಡಿಸಿದರೆ ಅದು ನಮ್ಮ ಪ್ರಜ್ಞೆಯ ಭಾಗವಾಗಿಯೇ ಇರುತ್ತದೆ. ಪ್ರತಿಯೊಬ್ಬ ವೃತ್ತಿಗಾಯಕನೂ/ಳೂ ಮೌಖಿಕ ಪರಂಪರೆಯನ್ನು ತಮ್ಮ ಪ್ರಜ್ಞೆಯ ಭಾಗವಾಗಿಯೇ ಅದನ್ನು ನೋಡುತ್ತಾರೆ. ಅವರ ಎಲ್ಲಾ ಮೌಖಿಕ ನಿರ್ವಚನಗಳೂ ಕೂಡ ಅವರ ಪ್ರಜ್ಞೆಯ ಭಾಗವಾಗಿರುತ್ತವೆ. ಮೊದಲು ಅವರ ಪ್ರಜ್ಞೆ (ಮನಸ್ಸು)ಯಲ್ಲಿ ಒಂದು ಮೂರ್ತ ರೂಪವನ್ನು ಪಡೆದುಕೊಂಡು, ನಂತರ ತಮ್ಮ ಕಲೆಯನ್ನು ಪ್ರದರ್ಶಿಸುವಾಗ ಕ್ರಮಬದ್ಧ ಜೋಡಣೆಯಲ್ಲಿ ಅದನ್ನು ಅವರು ನಿರ್ವಚಿಸುತ್ತಾ ಹೋಗುತ್ತಾರೆ. ಅವರ ಎಲ್ಲಾ ನಿರ್ವಚನಗಳೂ ಚರಿತ್ರೆಯನ್ನು ಮುರಿದುಕಟ್ಟುವ ಅಥವಾ ಹೊಸದಾಗಿ ಚರಿತ್ರೆಯನ್ನು ಕಟ್ಟುವ ಕ್ರಮಕ್ಕೆ ಸಾಕ್ಷಿಯಾದಾಗ ಅವು ನಮ್ಮ ಪ್ರಜ್ಞೆಯ ಭಾಗವಾಗುವುದರಲ್ಲೂ ಯಾವ ಅನುಮಾನಗಳೂ ಇಲ್ಲ. ಪಾಶ್ಚಿಮಾತ್ಯರಿಂದ ಕಲಿತ ಚರಿತ್ರೆಯನ್ನು ಕಾಣುವ ಕ್ರಮವನ್ನು ಬಿಟ್ಟು 'ದೇಶೀ' ದೃಷ್ಟಿ ಅಥವಾ ದೇಶೀ ವಿಧಾನದ ಮೂಲಕ ಚರಿತ್ರೆಯನ್ನು

ಗ್ರಹಿಸುವ ಗುಣವಿದ್ದಾಗ ನಮ್ಮ ಜನಪದ ವೃತ್ತಿ ಗಾಯಕರ ಮೌಖಿಕ ನಿರ್ವಚನಗಳೆಲ್ಲವೂ ನಮಗೆ ನಮ್ಮ ಪ್ರಜ್ಞೆಯ ಭಾಗವಾಗಿ, ಮೌಖಿಕ ಚರಿತ್ರೆಯು ನಮ್ಮ ಪ್ರಜ್ಞೆಯ ಭಾಗವಾಗುತ್ತದೆ.

ಮೌಖಿಕ ಪರಂಪರೆಯು ಚರಿತ್ರೆಯನ್ನು ಕಟ್ಟಲು ನೇರವಾದ ಆಕರವನ್ನು ಒದಗಿಸುತ್ತದೆ ಎಂದರ್ಥವಲ್ಲ. ಬದಲಿಗೆ ಅದು ಪರೋಕ್ಷವಾದ ಆಕರಗಳನ್ನು ಒದಗಿಸುತ್ತದೆ. ಹಾಗೆ ನೋಡಿದರೆ ಎಷ್ಟೋ ವಿದ್ವಾಂಸರುಗಳು ಚರಿತ್ರೆಯನ್ನು ನೇರವಾಗಿ ಬರೆಯದಿದ್ದರೂ ಚರಿತ್ರೆಯ ಕುರಿತು ಮಾಡಿದ ಪ್ರತಿಕ್ರಿಯೆಗಳೇ ಆಗಿವೆ. "ಅಂಬೇಡ್ಕರ್ ಅವರ ಅಭಿವ್ಯಕ್ತಿಯು ದಟ್ಟವಾದ ಪ್ರತಿರೋಧದ ಮೂಲಕ ವೈಚಾರಿಕ ದಂಗೆಗೆ ಕಹಳೆ ಮೊಳಗಿಸಿದರೆ; ಮೌಖಿಕ ಪರಂಪರೆಯ ಅಭಿವ್ಯಕ್ತಿಯ ಕಥನಗಳೆಲ್ಲವೂ ಆಧ್ಯಾತ್ಮದ ರೂಪದಲ್ಲಿ, ಮಾಂತ್ರಿಕವಾದ ಭಾಷಿಕ ವಿನ್ಯಾಸದಲ್ಲಿ ಸಿದ್ಧವಾದ ಸಾಮ್ರಾಜ್ಯದ ಚರಿತ್ರೆಯ ಆಚೆಗೆ ಹಾರುವ ಸಾಹಸವನ್ನು ಮಾಡುತ್ತವೆ." (ಅದೇ, ಪು:೧೩) ಚರಿತ್ರೆ ಯಾವತ್ತೂ ಕೂಡ ಪುನರ್ ಸೃಷ್ಟಿಗೆ ಒಳಪಡುತ್ತಿರುತ್ತದೆ. ಈ ಪುನರ್ ಸೃಷ್ಟಿಯ ಕ್ರಿಯೆಯಲ್ಲಿ ಮೌಖಿಕ ನಿರ್ವಚನಗಳೆಲ್ಲವೂ ವರ್ತಮಾನದ ನಿರೂಪಣೆಯಲ್ಲಿ ತೊಡಗುತ್ತವೆಯಾದ್ದರಿಂದ ಇವುಗಳಿಗೆ. ಒಂದು ರೀತಿಯಲ್ಲಿ ಬೌದ್ಧಿಕ ನಿಕಷವನ್ನೊಡ್ಡುವುದು ಪ್ರಯಾಸದ ಕೆಲಸವೇನಲ್ಲ. ಇದು ಸಮಷ್ಟಿ ನೆಲೆಯಲ್ಲಿ ಗತವನ್ನು ಸಮಕಾಲೀತೆಯೊಂದಿಗೆ ನಿರ್ವಹಿಸುವುದರಿಂದ ಬೌದ್ಧಿಕ ನಿಕಷವನ್ನೊಡ್ಡಲು ಸಾಧ್ಯವಾಗಿದೆ. "ಇಂತಹ ಸ್ಥಿತಿಯಲ್ಲಿ ಮೌಖಿಕ ಇತಿಹಾಸವು ಸಾಮಾಜಿಕ ಸಂಬಂಧವನ್ನು ಪುರಾಣವಾಗಿಸುವ ಹಾಗೂ ಗತ ಕಾಲವನ್ನು ಸಮಕಾಲೀನ ಗೊಳಿಸುವ ಕೆಲಸವನ್ನು ಮಾಡುತ್ತಿರುತ್ತದೆ. ಇದು ಬಹಳ ವಿಶೇಷವಾದ ಸಂಗತಿ. ಚರಿತ್ರೆ ಎಂದರೆ ಗತ ಕಾಲದ ಪಾಠ ಎಂದು ಭಾವಿಸುವುದನ್ನು ಮೌಖಿಕ ನಿರೂಪಣೆಗಳು ಅಲ್ಲಗಳೆಯುತ್ತವೆ. ಚರಿತ್ರೆ ಇರುವುದು ಗತಕಾಲದಲ್ಲಲ್ಲ. ಇತಿಹಾಸವು ನಿರೂಪಿತವಾಗುವುದು ವರ್ತಮಾನದ ಗ್ರಹಿಕೆಯಿಂದಲೇ ಮತ್ತು ನಾವು ಬದುಕಿರುವ ಕಾಲದ ಒತ್ತಡಗಳಿಂದಲೇ ಎಂಬುದನ್ನು ಮೌಖಿಕ ಇತಿಹಾಸವು ಧ್ವನಿಸುತ್ತದೆ. (ಅದೇ, ಪು:೭) ಇದು ಕಾಲತೀತವಾದ ನೆಲೆಯಲ್ಲಿ ಸಮಾಜವನ್ನು ಗ್ರಹಿಸುತ್ತದೆ. ಮತ್ತು ಅದರ ಬಹುತೇಕ ನಿರ್ವಚನಗಳೆಲ್ಲವೂ ಅದೇ ನೆಲೆಯಲ್ಲಿಯೇ ಇರುತ್ತವೆ. "ಚರಿತ್ರೆ ಹೀಗೆ ಗತದಿಂದ ವರ್ತಮಾನಕ್ಕೆ ಬರುವ ಪ್ರಕ್ರಿಯೆಯು ಮೌಖಿಕ ನಿರೂಪಣೆಯಲ್ಲಿ ಬಹಳ ಸಹಜ. ಇದು ಚರಿತ್ರೆಯನ್ನು ಜೀವಂತಗೊಳಿಸುವ ವಿಧಾನ" (ಅದೇ, ಪು:೮) ಚರಿತ್ರೆಯನ್ನು ಮತ್ತೆ ಮತ್ತೆ ಪುನರ್‌ಸೃಷ್ಟಿಸುವ ಕ್ರಿಯೆಯಲ್ಲಿಯೇ ಈ ಮೌಖಿಕ ನಿರೂಪಣೆಗಳು ತೊಡಗಿರುತ್ತವೆ.

ಸಾಮಾನ್ಯವಾಗಿ ಇತಿಹಾಸ ರಚನೆಗೆ ಆಕರ ಸಾಮಾಗ್ರಿಗಳು ಎಲ್ಲೋ ಇದ್ದರೂ ಅವು ಇತಿಹಾಸ ರಚನೆಗೆ ಬಳಸಲ್ಪಡುತ್ತವೆ. ಈ ಲಭ್ಯ ಸಾಮಾಗ್ರಿಯ ಸಂಪೂರ್ಣ ಉಪಯೋಗ ಪಡೆದ ವ್ಯಕ್ತಿ ಅಥವಾ ವಿದ್ವಾಂಸನೊಬ್ಬ ಇಲ್ಲಿ ಇತಿಹಾಸಕಾರ ಅನ್ನಿಸಿಕೊಳ್ಳುತ್ತಾನೆ. ಆದರೆ ನಿಜವಾಗಿಯೂ ಜಾನಪದ ಅಥವಾ ಮೌಖಿಕ ಆಕರಗಳ ಇರುವಿಕೆ ಗೊತ್ತಾಗುವುದು ಅವುಗಳ ನಿರೂಪಣೆಯಲ್ಲಿ ಮಾತ್ರ. ನಿರೂಪಿಸಲ್ಪಟ್ಟ ಸಂಪೂರ್ಣ ಮಾಹಿತಿಯು ಚರಿತ್ರೆ ರಚನೆಯಲ್ಲಿ ಸಹಾಯಕವಾಗಬಲ್ಲದು. ಆದರೆ ಈ ನಿರೂಪಣೆಗಳು ನಿರೂಪಕನ ಮನಸ್ಸಿನಲ್ಲಿ ಉಳಿಯಬಹುದಾದ್ದರಿಂದ ಅವುಗಳ ಬಗೆಗೆ ಸಂಪೂರ್ಣವಾಗಿ ಏನನ್ನೂ

ಹೇಳಲಾಗುವುದಿಲ್ಲ. ಅವುಗಳು ಸಂದರ್ಭಾನುಸಾರ ಅಭಿವ್ಯಕ್ತಿ ಪಡೆಯುವುದರಿಂದ ಅವುಗಳ ಕುರಿತು ಹೇಳುವುದು ಅಸಾಧ್ಯ. ಹಲವಾರು ಬಾರಿ ಈ ಸಂದರ್ಭವೇ ನಿರೂಪಿತ ಪಠ್ಯದ ಆಕೃತಿಯನ್ನು ನಿರ್ಧರಿಸುತ್ತದೆ. ಆದ್ದರಿಂದ ಪಠ್ಯಗಳನ್ನು ಆಯಾ ಸಂದರ್ಭದಲ್ಲಿಯೇ ಸಂಗ್ರಹಿಸಬೇಕಾಗುತ್ತದೆ. ಮತ್ತೆ ಈ ಪಠ್ಯದ ಕುರಿತ ಚರ್ಚೆ ಸಂಪೂರ್ಣವಾಗಿ ಮೌಖಿಕ ಪರಂಪರೆಯ ಕುರಿತೇ ಮಾಹಿತಿಯನ್ನು ಒದಗಿಸುತ್ತದೆ. ಈ ಕಾರಣಕ್ಕಾಗಿಯೇ ಮೌಖಿಕ ಸಾಮಗ್ರಿಗಳನ್ನು ಕೇವಲ ಇತಿಹಾಸಕ್ಕೇ ಸೀಮಿತಗೊಳಿಸುವ ಹಾಗಿಲ್ಲ. ಅವುಗಳ ಸಾಂಸ್ಕೃತಿಕ ಅಂಶಗಳನ್ನು ಪರಿಗಣಿಸಿ, ಅವು ಹೇಗೆ ಈ ನಾಡಿನ ಸಂಸ್ಕೃತಿಯನ್ನು ಬೆಳೆಸುವಲ್ಲಿ ಸಹಾಯಕವಾಗುತ್ತವೆ ಎಂಬುದನ್ನು ನೋಡುವುದು ಅಗತ್ಯವಾಗಿದೆ. “ಸಾಂಪ್ರದಾಯಿಕ ಇತಿಹಾಸಕಾರರು ಇತಿಹಾಸವನ್ನು ಹೇಗೆ ನಿರ್ವಚಿಸಿಕೊಳ್ಳುತ್ತಾರೋ ಹಾಗೆಯೇ ಜನಪದರೂ ತಮ್ಮ ಇತಿಹಾಸವನ್ನು ತಮ್ಮದೇ ರೀತಿಯಲ್ಲಿ ನಿರ್ವಚಿಸಿ ಕೊಂಡಿರುತ್ತಾರೆ. (ಡಾ.ಚಲುವರಾಜು, ಪುರುಷೋತ್ತಮ ಬಿಳಿಮಲೆ, ಹಂಪಿ ಜಾನಪದ, ಪು:೧೫) ಎಂಬುದಕ್ಕೆ ಹಲವಾರು ಚಾರಿತ್ರಿಕ ವ್ಯಕ್ತಿಗಳ ಕುರಿತಾಗಿ ಇರುವ ಲಾವಣಿ, ಗೀತೆ, ಕಥೆಗಳನ್ನು ನೋಡಬಹುದು. ಇತಿಹಾಸದ ನಿರೂಪಕರು ಲಿಖಿತ ದಾಖಲೆಗಳನ್ನು ಆಧರಿಸಿಕೊಂಡು ಒಂದು ಕಾಲದಲ್ಲಿ ನಡೆದ ಸತ್ಯ ಸಂಗತಿಯನ್ನು ತಾವು ಕಂಡಂತೆ ನಿರೂಪಿಸಿದರೆ, ಐತಿಹ್ಯದ ನಿರೂಪಕರೂ ಮೌಖಿಕ ಪರಂಪರೆಯ ದಾಖಲೆಗಳನ್ನು ಆಧರಿಸಿಕೊಂಡು ಒಂದು ಕಾಲದಲ್ಲಿ ನಡೆದ ಸತ್ಯ ಸಂಗತಿಗಳನ್ನು ತಾವು ಕಂಡಂತೆ ನಿರೂಪಿಸುತ್ತಾರೆ. “ಒಂದು ಲಿಖಿತ ದಾಖಲೆಗಳನ್ನು ಲಿಖಿತ ರೂಪದಲ್ಲಿ ಮರು ಮಂಡನೆ ಮಾಡಿದರೆ, ಇನ್ನೊಂದು ಕಂಠಸ್ಥ ದಾಖಲೆಗಳನ್ನು ಕಂಠಸ್ಥರೂಪದಲ್ಲಿ ಅಥವಾ ಮೌಖಿಕ ರೂಪದಲ್ಲಿ ಮಂಡಿಸುತ್ತಾರೆ. ಆಧಾರವಿಲ್ಲದೆ ಎರಡೂ ಬಗೆಯ ನಿರೂಪಣೆಗಳು ಸೃಷ್ಟಿಯಾಗಲಾರವು. ಮೌಖಿಕ ಆಕರಗಳ ಮೂಲಕ ಇತಿಹಾಸವನ್ನು ಪುನಾರಚನೆ ಮಾಡುವವನು ಮೌಖಿಕ ಮಾಧ್ಯಮದಿಂದ ಅಕ್ಷರ ಮಾಧ್ಯಮಕ್ಕೆ ವಿಷಯಗಳನ್ನು ದಾಟಿಸಬೇಕಾಗುತ್ತದೆ. ಹೀಗೆ ಮಾಡಿದಾಗ ಮೌಖಿಕ ನಿರೂಪಣೆ ಬರಹದ ಮೂಲಕ ಸ್ಥಾವರಗೊಂಡು ಒಂದು ಪಠ್ಯವಾಗಿ ಉಳಿಯುತ್ತದೆ.”(ಅದೇ, ಪು:೧೬) ಆಗ ಇದು ಇತಿಹಾಸದ ಭಾಗವಾಗಿ ಉಳಿಯುತ್ತದೆ. ಕೇವಲ ಇತಿಹಾಸ ಬದ್ಧತೆಯನ್ನು ನಾವು ಮೌಖಿಕ ಸಾಮಗ್ರಿಗಳಿಂದ ನಿರೀಕ್ಷಿಸಬಾರದು. ಮೌಖಿಕ ನಿರೂಪಣೆಯ ಸಂದರ್ಭದಲ್ಲಿ ಇತಿಹಾಸ ಮತ್ತು ವರ್ತಮಾನದ ನಡುವಿನ ಅಂತರ ಇಲ್ಲವಾಗುವ ಸಾಧ್ಯತೆಯೇ ಹೆಚ್ಚು. ಇದು ಹೇಗೆ ನಮ್ಮ ಇತಿಹಾಸದ ರಚನೆಯಲ್ಲಿ ಬಳಕೆಯಾಗುತ್ತದೆ ಎಂಬುದು ಬಹಳ ಮುಖ್ಯವಾದ ವಿಚಾರ. ಯಾಕೆಂದರೆ ಸಂಸ್ಕೃತಿ, ಸಮಾಜ, ರಾಜಕಾರಣ, ಹೀಗೆ ಅನೇಕ ವಿಚಾರಗಳು ಅದರಲ್ಲಿ ಸಂಕೀರ್ಣ ರೂಪದಲ್ಲಿ ಅಡಕವಾಗಿರುತ್ತವೆಯಾದ್ದರಿಂದ ಅವುಗಳ ಬಳಕೆಯಲ್ಲಿ ಎಚ್ಚರಿಕೆ ವಹಿಸುವುದು ಸೂಕ್ತವೆನಿಸುತ್ತದೆ. ಆದರೆ ಮೌಖಿಕ ನಿರೂಪಣೆಗಳು ಯಾವತ್ತೂ ತಮ್ಮಷ್ಟಕ್ಕೆ ತಾವೇ ಇತಿಹಾಸವಾಗಲಾರವು, ಅವುಗಳು ಇತಿಹಾಸ ರಚನೆಯಲ್ಲಿ ಬಳಸಿಕೊಂಡಾಗ ಮಾತ್ರ ಈ ಮೌಖಿಕ ನಿರೂಪಣೆಗಳು ಇತಿಹಾಸವಾಗುತ್ತವೆ ಮತ್ತು ಇವಕ್ಕೊಂದು ಹೊಸ ಅರ್ಥ ಬರುತ್ತದೆ.

ಆದರೆ ಕೆಲವು ವೇಳೆ ಚರಿತ್ರೆಯ ಕೆಲವು ಘಟನೆಗಳು ಮೌಖಿಕವಾಗುವ ಸಾಧ್ಯತೆಯೂ ಇದೆ. ಉದಾಹರಣೆಗೆ ಕುಮಾರ ರಾಮನಂತಹ ಚಾರಿತ್ರಿಕ ವ್ಯಕ್ತಿಯನ್ನು ಸಮುದಾಯಗಳು ಹಾಡಿ ಹೊಗಳಿ

ಅವನನ್ನು ವೈಭವೀಕರಿಸಿ ಸಮುದಾಯದ ಸಾಂಸ್ಕೃತಿಕ ನಾಯಕನ ಪಟ್ಟವನ್ನು ಕಟ್ಟಿ ಬಿಡುತ್ತವೆ. ಇದು ಸಮುದಾಯಗಳ ವೈಯಕ್ತಿಕ ಆಯ್ಕೆಯಿದ್ದಾಗ ಮಾತ್ರ ನಡೆಯುವಂತಹ ಕ್ರಿಯೆ ಅಥವಾ ವಿಧಾನಗಳಾಗಿವೆ. ಹಾಗಾಗಿಯೇ "ಚರಿತ್ರೆಯ ಘಟನೆಗಳೆಲ್ಲಾ ಜಾನಪದವಾಗುತ್ತದೆಂದು ಹೇಳಲಾಗುವುದಿಲ್ಲ. ಅನೇಕ ವೇಳೆ ಸಮರ್ಥರಾದ ರಾಜರುಗಳೇ ಜನಪದದಲ್ಲಿ ಉಳಿಯುವುದಿಲ್ಲ. ಆದರೆ ಜನ ಜೀವನ ಕಲಕಿದ ವಿಶೇಷ ಸಂದರ್ಭಗಳು, ಧಾರ್ಮಿಕ ಘರ್ಷಣೆಗಳು, ಜನವಿರೋಧಿ ನಿರಂಕುಶ ರಾಜರ ಕಥೆಗಳು, ಹೀಗೆ ಕೆಲವು ಮಾತ್ರ ಜನಮನದಲ್ಲಿ ಉಳಿಯುತ್ತವೆ. ಇವುಗಳೂ ಸಹ ಸೂತ್ರ ರೂಪದಲ್ಲಿ ಇರುತ್ತವೆ. ಅನೇಕ ವೇಳೆ ಮಾರ್ಪಾಡಾಗಿರುತ್ತವೆ ಇಲ್ಲವೇ ವಿರೂಪಗೊಂಡಿರುತ್ತವೆ. ಇವೆಲ್ಲಾ ಕಂಠಸ್ಥವಾಗಿ ಹರಿಯುವುದರಿಂದ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಸಮಕಾಲೀನ ಬದುಕಿನ ಅಂತಹ ಘಟನೆಗಳನ್ನು ಸಮೀಕರಿಸಿಕೊಳ್ಳುತ್ತಾ ಮುಂದುವರಿಯುತ್ತವೆ.(ಹ.ಕ.ರಾಜೇಗೌಡ, ಜಾನಪದ ಶೋಧ, ಪು:೯೫) ಈ ಹಿನ್ನೆಲೆಯಲ್ಲಿ ಮೌಖಿಕ ಪರಂಪರೆ ಮತ್ತು ಇತಿಹಾಸದ ಕುರಿತಾದ ಸಂಬಂಧಗಳು ತುಂಬಾ ಮಹತ್ವವನ್ನು ಪಡೆದುಕೊಳ್ಳುತ್ತವೆ. ಆದರೆ ಆಳುವ ವರ್ಗಕ್ಕೆ ಅಥವಾ ಪ್ರಭುತ್ವಕ್ಕೆ ಈ ಚರಿತ್ರೆ ಮತ್ತು ಮೌಖಿಕತೆಯ ಬಗೆಗೆ ತನ್ನದೇ ಆದ ನಿಲುವುಗಳಿರುತ್ತವೆ. ಅದು ತನ್ನ ನಿಲುವುಗಳನ್ನು ಹೇರುತ್ತಲೇ ಹೋಗುತ್ತದೆ. ಅಲ್ಲದೆ ಅವುಗಳನ್ನೇ ಅಂತಿಮಗೊಳಿಸಿ ಅಧಿಕೃತಗಳನ್ನಾಗಿಸುತ್ತದೆ. ಆದರೆ ಮೌಖಿಕತೆ ಇಂತಹವುಗಳ ಬಗೆಗೆ ಒಂದು ರೀತಿಯ ಸ್ಥಿಮಿತತೆಯನ್ನು ಕಾಯ್ದುಕೊಂಡಿರುತ್ತದೆ. ಆಳುವ ಪ್ರಭುತ್ವದ ಈ ಅಧಿಕೃತವಾದವುಗಳನ್ನು ಮೌಖಿಕತೆಯು ತನ್ನ ಮೌಖಿಕ ಮಾಧ್ಯಮದ ಮೂಲಕ ಪ್ರಶ್ನಿಸುತ್ತಾ, ನಿಕಷಕ್ಕೊಡ್ಡುತ್ತಾ ಹೋಗುತ್ತದೆ. ಹಲವಾರು ಬಾರಿ ಈ ಎರಡೂ ಪ್ರವೃತ್ತಿಗಳು ಪರಸ್ಪರ ವಿರೋಧಿ ನೆಲೆಗಳಲ್ಲಿರುತ್ತವೆ. ಒಂದು ಅಕ್ಷರ ಅಥವಾ ಲಿಖಿತ ಮಾಧ್ಯಮದಲ್ಲಿ ಉಳಿದರೆ, ಇನ್ನೊಂದು ಮೌಖಿಕ ಮಾಧ್ಯಮದಲ್ಲಿ ಜನರ ನಡುವೆ ಪ್ರಚಲಿತದಲ್ಲಿದ್ದು ಪರಂಪರೆಯಿಂದ ಪರಂಪರೆಗೆ ಬಾಯಿ ಮಾತಿನ ಮೂಲಕ ಹರಿದು ಬಂದು ಎಲ್ಲದನ್ನೂ ವಿಮರ್ಶೆಗೆ ಗುರಿಪಡಿಸುತ್ತದೆ. ಈ ಮುಖಾಂತರ ಮೌಖಿಕತೆಯು ಸಮಾಜದ ಬದಲಾವಣೆಯೊಂದಿಗೆ ತನ್ನನ್ನು ಗುರುತಿಸಿಕೊಳ್ಳುತ್ತಾ ಹೆಚ್ಚು ಹೆಚ್ಚು ಸಮಕಾಲೀನವಾಗುತ್ತಾ ಹೋಗುತ್ತದೆ, ಮತ್ತು ಕ್ರಿಯಾಶೀಲವಾಗುಳಿಯುತ್ತದೆ.

ಜಗತ್ತಿನ ಎಲ್ಲಾ ದೇಶಗಳೂ ತಮ್ಮದೇ ಆದ ಚರಿತ್ರೆ ಮತ್ತು ಪುರಾಣಗಳನ್ನು ಹೊಂದಿವೆ. ಆದರೆ ಯಾವ ದೇಶದಲ್ಲಿಯೂ ಎಲ್ಲ ಬಗೆಯ ಚರಿತ್ರೆ ಮತ್ತು ಪುರಾಣಗಳು ಸಮಸ್ಥಾನದಲ್ಲಿ ನಿಂತಿಲ್ಲ. ಆಳುವ ವರ್ಗ ತನ್ನ ಆಳ್ವಿಕೆ ಮತ್ತು ರಾಜಕೀಯ ಧೋರಣೆಗಳಿಗೆ ಅನುಗುಣವಾದ ಚರಿತ್ರೆ ಪುರಾಣಗಳನ್ನು ಸೃಜಿಸಿ ಅದಕ್ಕೆ ರಾಜಕೀಯ ಮನ್ನಣೆ ನೀಡಿ, ಅದನ್ನು ಕಾನೂನು ಬದ್ಧಗೊಳಿಸಿಬಿಡುತ್ತದೆ. ಹೀಗೆ ಆಳುವ ವರ್ಗದ ಬೆಂಬಲ ಪಡೆದ ಪುರಾಣ ಚರಿತ್ರೆಗಳೇ ರಾಷ್ಟ್ರೀಯ ಮನ್ನಣೆ ಪಡೆಯುತ್ತವೆ. ಅಂಥವುಗಳಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯೂ ಲಭಿಸಿ ಬಿಡುತ್ತದೆ. ವಿದ್ವಾಂಸರ ಚರ್ಚೆಗಳಿಗೆ ಸುಲಭವಾಗಿ ಲಭ್ಯವಾಗುವ ಸಾಮಗ್ರಿಗಳೂ ಇವೇ. ಇಂಥ ಸಂದರ್ಭದಲ್ಲಿ ಜಾನಪದವು ಮೂಲೆಗೆ ತಳ್ಳಲ್ಪಡುತ್ತದೆ. ಅಕ್ಷರ ರಾಜಕೀಯವು ಮೌಖಿಕ ಸಾಮಗ್ರಿಗಳನ್ನು ಮನ್ನಿಸುವುದಿಲ್ಲ. ಹೀಗಾಗಿ ಜನಪದ ಪುರಾಣ ಜನಪದರ ಚರಿತ್ರೆ ವಿದ್ವತ್ ವಲಯಗಳಲ್ಲಿ

ಗಂಭೀರವಾದ ಚರ್ಚೆಗೆ ಒಳಗಾಗಲೇ ಇಲ್ಲ. ಚರ್ಚೆಯ ಇಂಥ ಗೈರುಹಾಜರಿಯನ್ನೇ ನಾವು ಒಂದು ಬಗೆಯ 'ಮೌಲ್ಯೀಕರಣ' ಎಂದು ಕರೆಯಬಹುದಾದರೆ, ಆ ಮೂಲಕ ಕೆಲವು ನಿರ್ಣಯಗಳಿಗೆ ಬರುವುದು ಸಾಧ್ಯವಾಗತ್ತದೆ. ಮುಖ್ಯವಾಗಿ ಜಗತ್ತಿನ ಬಹುತೇಕ ರಾಷ್ಟ್ರಗಳು ಬಹು ಜನಪರವಾದ ಸಂಸ್ಕೃತಿಯನ್ನು ನಿರಾಕರಿಸುತ್ತಲೇ ಬಂದಿವೆ. ಭಾರತದಲ್ಲಂತೂ (ಡಾ.ಪುರುಷೋತ್ತಮ ಬಿಲಿಮಲೆ, ಕೂಡುಕಟ್ಟು, ಪು:೯೦) ಇದು ಎದ್ದು ಕಾಣುತ್ತದೆ. ಪಶ್ಚಿಮದ ಆಲೋಚನಾ ದಿಕ್ಕನ್ನೇ ಅನುಸರಿಸುತ್ತಿರುವುದರಿಂದ ಪರಂಪರೆಯ ಚರ್ಚೆಗಳಲ್ಲಿ ಮೌಖಿಕ ನಿರೂಪಣೆಗಳು ಗೈರಾಗಿರುವುದನ್ನು, ಗೈರಾಗುತ್ತಿರುವುದನ್ನು ಕಾಣಬಹುದಾಗಿದೆ. ಆ ಕಾರಣಕ್ಕಾಗಿಯೇ ಮೌಖಿಕ ನಿರೂಪಣೆಗಳನ್ನು, ಮೌಖಿಕ ಸಾಮಗ್ರಿಯನ್ನು ಚರಿತ್ರೆ ರಚನೆಯಲ್ಲಿ ಪೂರಕ ಅಥವಾ ಆಕರ ಸಾಮಗ್ರಿಯಾಗಿ ಬಳಸಲ್ಪಡುತ್ತಿಲ್ಲ. ಹಲವಾರು ವಿದ್ವಾಂಸರುಗಳು ಈ ಕುರಿತು ಮಾತಾಡುತ್ತಿದ್ದರಾದರೂ ಇದನ್ನು ಜಾನಪದದ ನೆಲೆಯಲ್ಲಿಯೇ ನೋಡುತ್ತಾರೆ. ಇದಕ್ಕೆ ಭಾವುಕತೆ, ಕಾಲದ ಪ್ರಜ್ಞೆ ಇಲ್ಲದಿರುವುದು, ಅತೀಯಾದ ರಂಜನೀಯತೆ, ವೈಭವೀಕರಣ ಮುಂತಾದ ಗುಣಗಳಿರುತ್ತವೆ ಎಂಬುದು ಅವರ ನಂಬಿಕೆ. ಈ ಗುಣಗಳೆಲ್ಲ ಜಾನಪದಕ್ಕಿರುತ್ತವೆಯಾದರೂ ಅದರಾಚೆಗೆ ಯಾವುದೋ ಒಂದು ಸತ್ಯವನ್ನು ಮೌಖಿಕತೆ ಒಳಗೊಂಡಿರುತ್ತದೆ. ಆ ಸತ್ಯ ಯಾವುದು ಎಂಬುದನ್ನು ಹುಡುಕುವ ಕೆಲಸ ಚರಿತ್ರೆಕಾರರಿಂದ ಆಗಬೇಕಿದೆ. ಹಾಗೆ ಮಾಡಬೇಕಾದರೆ ಮತ್ತೆ ಪುನಃ ಅವರು ಮೌಖಿಕ ಆಕರಗಳನ್ನು ಕೆದಕಲೇ ಬೇಕು.

"ಚರಿತ್ರೆ ಸಮಕಾಲೀನ ಸಮಾಜದಲ್ಲಿ ಒಂದು ಪ್ರಾಂಜಲ ಬೌದ್ಧಿಕ ಪರಿಸರವನ್ನು ನಿರ್ಮಾಣ ಮಾಡುವ ಗೋಜಿಗೆ ಹೋದಂತೆ ಕಾಣುವುದಿಲ್ಲ. ಏಕೆಂದರೆ ಅದು ನಂಬಿ ಹೊರಟಿರುವ ಭೌತಿಕ ಆಕರಗಳಲ್ಲಿ (Source) ನಮ್ಮ ಪರಂಪರೆಯ ಆಳದ ಯಾವ ವೈಚಾರಿಕ ಧಾರೆಯೂ ದಾಖಲೆಗೊಂಡಿಲ್ಲ. (ಎ.ಎಸ್.ಪ್ರಭಾಕರ, ಮ್ಯಾಸಬೇಡರ ಕಥನಗಳು, ಪು:೧೯) ಆದರೆ "ಜನಪದ ಅನುಭಾವಿ ತತ್ವ ಪ್ರತಿಮಾ ಮಾರ್ಗವನ್ನು ಬೆನ್ನಟ್ಟಿ ಹೋಗುವುದರಿಂದಲೇ ಎತ್ತರದ ಬೌದ್ಧಿಕ ಮುಗ್ಧತೆಯ ಮಟ್ಟವನ್ನು ತಲುಪುತ್ತಾನೆ. ಆ ಬೌದ್ಧಿಕ ಮುಗ್ಧತೆಯ ನಿರೂಪಕ ದೃಷ್ಟಿಯಿಂದಲೇ ಲೋಕದ ಸಮಸ್ತವನ್ನು ಮಾತಾಡಿಸುತ್ತಾನೆ, ಅರ್ಥಕಟ್ಟುತ್ತಾನೆ. ಪದಾರ್ಥಗಳು ವಾಸ್ತವದಲ್ಲಿ ಯಾವ ಬಗೆಯ ಸ್ಥಾನ ಪಡೆದಿವೆ, ಅವುಗಳ ಕೆಲಸವೇನು ಎಂಬುದನ್ನು ಸಾಮಾಜಿಕನ ಹಾಗೆಯೇ ಗಮನಿಸಿ ಆ ಮೇಲೆ ಅವುಗಳಿಗೆ ಇತಿಹಾಸವನ್ನು ಸೃಷ್ಟಿಸುತ್ತಾನೆ. (ಡಾ.ಡಿ.ಆರ್.ನಾಗರಾಜ್, ಅಲ್ಲಮ ಪ್ರಭು ಮತ್ತು ಶೈವಪ್ರತಿಭೆ, ಪು:೧೬೨) ಹೀಗೆ ಸೃಷ್ಟಿಸಲ್ಪಟ್ಟ ಇತಿಹಾಸವು ಸಾಂಸ್ಕೃತಿಕ ಇತಿಹಾಸವಾಗಿ ರೂಪು ಪಡೆಯುತ್ತದೆ. ಇದಕ್ಕೆ ಯಾವುದೇ ರೀತಿಯ ಲಿಖಿತ ದಾಖಲೆಗಳು ಸಿಗಲಾರವು. ಈ ಸಾಂಸ್ಕೃತಿಕ ಇತಿಹಾಸ ಆಚರಣೆಗಳ ಮೂಲಕ ಅಧಿಕೃತವಾಗಿ ನಾವು ಗಮನಿಸಬಹುದು. ಪ್ರತಿಯೊಂದು ಸಮುದಾಯವೂ ತನ್ನದೇ ಆದ ರೀತಿಯಲ್ಲಿ ಆಚರಣೆಗಳನ್ನು ಜಾರಿಗೆ ತಂದಿರುತ್ತದೆ. ಆ ಪ್ರತಿಯೊಂದು ಆಚರಣೆಯೂ ಒಂದೊಂದು ಹಿನ್ನೆಲೆಯನ್ನು ಹೊಂದಿರುತ್ತದೆ. ಆ ಮುಖಾಂತರ ಅವುಗಳು ಒಂದು ಚರಿತ್ರೆಯನ್ನು ಕಟ್ಟಿಕೊಡುತ್ತವೆ. ಈ ನಿಟ್ಟಿನಲ್ಲಿ ಸಾಂಸ್ಕೃತಿಕ ಇತಿಹಾಸವು ರೂಪು ಪಡೆಯುತ್ತಾ ಹೋಗುತ್ತದೆ. ಹೀಗೆ ರೂಪು ಪಡೆದ ಸಾಂಸ್ಕೃತಿಕ ಇತಿಹಾಸವು ಸಮುದಾಯಗಳ ಆತ್ಮಕಥನವಾಗಿ, ಆಯಾ

ಸಮುದಾಯಗಳು ಒಬ್ಬೊಬ್ಬ ಸಾಂಸ್ಕೃತಿಕ ನಾಯಕನನ್ನು ತಂತಮ್ಮ ಸಮುದಾಯಗಳ ಅಧಿದೇವತೆಗಳನ್ನಾಗಿ ಆರಿಸಿಕೊಳ್ಳುತ್ತವೆ. ಆತನನ್ನು ಕುರಿತು ಕಾವ್ಯ ಕಟ್ಟಿ ಹಾಡಿ ಹೊಗಳುತ್ತವೆ. ಹೀಗೆ ಹಾಡಿ ಹೊಗಳಿದ ಕಾವ್ಯಗಳೇ ಮುಂದೆ, ಚರಿತ್ರೆ ರಚನೆಗೆ ಆಕರ ಸಾಮಗ್ರಿಯಾಗಿ ಬಳಸಲ್ಪಡುತ್ತವೆ. ಇದೊಂದು ರೀತಿಯಲ್ಲಿ 'ಪ್ರಕ್ರಿಯಾತ್ಮಕ' ಚಲನೆಯಾಗಿ ಮುಂದುವರಿಯುತ್ತದೆ. ಅಂದರೆ, ಒಬ್ಬ ಗಾಯಕ ಆಯಾ ಸಂದರ್ಭಾನುಸಾರವಾಗಿ ಕಾವ್ಯ ಸೃಜಿಸಿ, ಹಾಡುತ್ತಾ ಬೇಡವಾದದ್ದನ್ನು ಸಂಕಲಿಸುತ್ತಾ ಹೋಗತ್ತಾನೆ. ಇದೇ ಮುಂದೆ ಸಾಂದರ್ಭಿಕ ಸಿದ್ಧಾಂತದ ಹುಟ್ಟಿಗೂ ಕಾರಣವಾಗಿದೆ.

ಅದರ ಮುಂದುವರಿದ ಭಾಗವಾಗಿ ಮೌಖಿಕ ಸೂತ್ರಾತ್ಮಕ ಸಿದ್ಧಾಂತವನ್ನು ರೂಪಿಸಿದ್ದಾರೆ ವಿದ್ವಾಂಸರು. ಈ ಎರಡೂ ಸಿದ್ಧಾಂತಗಳು ಮೌಖಿಕ ಕಾವ್ಯ ಸಂಯೋಜನೆಯ ಪ್ರಕ್ರಿಯೆಯನ್ನೇ ಅವಲಂಭಿಸಿರುವುದು ವಿಶೇಷವಾದ ಸಂಗತಿ. ಒಬ್ಬ ಗಾಯಕ ತನ್ನ ಮಾನಸಿಕ ಪಠ್ಯದ ಮೂಲಕ ಕಾವ್ಯವನ್ನು ಸಂಯೋಜಿಸುತ್ತಾ ಹೋಗುತ್ತಿರುತ್ತಾನೆ. ಅದು ಒಂದು ಸಂದಭನವನ್ನು ನೋಡಿಕೊಂಡು ಆ ಕಾವ್ಯವನ್ನು ಸೃಜಿಸುತ್ತಾ, ನಿರೂಪಿಸುತ್ತಾ ಸಾಗುತ್ತಾನೆ. ಅದರ ಮಾಧ್ಯಮ ಮೌಖಿಕತೆ, ಮೌಖಿಕ ಮಾಧ್ಯಮದ ಮೂಲಕ ಇದೇ ಚರಿತ್ರೆಯನ್ನು ಆತ ಕಟ್ಟಿಕೊಡುತ್ತಾನೆ. ಹೀಗೆ ಮೌಖಿಕ ಮಾಧ್ಯಮದದಲ್ಲಿ ಸಾಗಿದ ಸಂಯೋಜನೆಗಳು, ಆಕರಗಳು ಮುಂದೆ ಚರಿತ್ರೆ ರಚನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿ ಮೌಖಿಕ ಚರಿತ್ರೆ ಎನಿಸಿಕೊಳ್ಳುತ್ತವೆ.

ಆಧುನಿಕೋತ್ತರ ಚಿಂತನೆಗಳೆಲ್ಲವೂ ಭಿನ್ನ ದೃಷ್ಟಿಕೋನಗಳನ್ನು ತಾಳಿವೆ. "ಹಾಗೆ ನೋಡಿದರೆ ಶಾಶ್ವತವಾದ ವ್ಯಾಖ್ಯಾನವೆನ್ನುವುದು ಬಹುಶಃ ಯಾವುದೂ ಇರಲಾರದು, ಮತ್ತು ಇರಬಾರದು. ಹೀಗಾಗಿ ತೋಂಡಿ ಪರಂಪರೆಯೆಂದರೆ ಆಧುನಿಕತೆಯ ಗ್ರಹಣಶಕ್ತಿಯ ಆಚೆಗಿರುವಂಥದ್ದು ಎಂದು ವ್ಯಾಖ್ಯಾನಿಸಬಹುದು. ಅದು ನನ್ನ ಪ್ರಕಾರ ತೋಂಡಿ ಪರಂಪರೆಯ ವ್ಯಾಖ್ಯೆಗೆ ಮೂಲಭೂತವಾದ ಒಂದು ಸ್ಥಿತಿ" (ಡಾ.ಡಿ.ಆರ್.ನಾಗರಾಜ್, ಸಾಹಿತ್ಯಕಥನ, ಪು-೨೧೧) ಆಧುನಿಕತೆಯೆಂದರೆ ತುಂಬಾ ಸಂಕೀರ್ಣ ಸ್ಥಿತಿ. ಈ ಸಂಕೀರ್ಣತೆಯ ಪರಿಣಾಮವಾಗಿ ನಾವು ಇಂದು ಯಾವುದನ್ನೂ ಸರಿಯಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿಲ್ಲ. "ಆದರೆ ಇದರ ಅರ್ಥ ಆಧುನಿಕ ಜಗತ್ತಿನಲ್ಲಿ ತೋಂಡಿ ಸಂಪ್ರದಾಯ ಸಂಪೂರ್ಣವಾಗಿ ಕಣ್ಮರೆಯಾಗುತ್ತದೆ ಎಂದಲ್ಲ. ಆದರೆ ಆಧುನಿಕತೆ ಮತ್ತು ತೋಂಡಿ ಸಂಪ್ರದಾಯ ಮುಖಾ ಮುಖಿಯಾದಾಗ ತೋಂಡಿ ಸಂಪ್ರದಾಯ ತನ್ನ ತೋಂಡಿತನವನ್ನು ಬಿಟ್ಟು ಪೇಲವವಾಗಿರುತ್ತದೆ. ಅದು ಮೂಲದ ಒಂದು ದುರ್ಬಲ ನಕಲಾಗಿ ಅಥವಾ ಸೌಂದರ್ಯಾತ್ಮಕ ನಕಲಾಗಿ ಮಾತ್ರ ಕಾಣುತ್ತಿರುತ್ತದೆ. ಆಧುನಿಕತೆಯನ್ನು ತೋಂಡಿ ಸಂಪ್ರದಾಯದ ಕಣ್ಮರೆ ಎಂದು ವ್ಯಾಖ್ಯಾನ ಮಾಡುವುದಾದರೆ ಆಧುನಿಕತೆಯ ಸಂದರ್ಭದಲ್ಲಿ ಹುಟ್ಟುವ ಅಥವಾ ಮರಳಿ ಕಾಣುವ ತೋಂಡಿ ಸಂಪ್ರದಾಯ ತನ್ನ ಮೂಲದ ದುರ್ಬಲ ನಕಲು ಮಾತ್ರವಾಗಿರುತ್ತದೆ. (ಡಾ.ಡಿ.ಆರ್.ನಾಗರಾಜ್, ಸಾಹಿತ್ಯ ಕಥನ, ಪು-೨೧೪) ಯಾವುದೇ ಸಂದರ್ಭವಾಗಲೀ ಅಥವಾ ಯಾವುದೇ ಬದಲಾವಣೆಗಳಾದರೂ ಅದರ ಮೂಲ ಮಾತ್ರ ಬದಲಾವಣೆಗೊಳ್ಳುವುದಿಲ್ಲ.

ಹಾಗಾಗಿಯೇ ಯಾವುದೇ ಸಂಸ್ಕೃತಿಯು ಮೌಖಿಕ ಪರಂಪರೆಯ ಭಾಷಿಕ ವಿನ್ಯಾಸಗಳಿಂದ ಬಹುರೂಪಿ ಲಿಖಿತ ವ್ಯವಸ್ಥೆಯನ್ನು ವಿಸ್ತರಿಸಿಕೊಳ್ಳುತ್ತಿರುತ್ತದೆ. ಹಳೆಯ ಸಾಂಸ್ಕೃತಿಕ ಲೋಕದ ಭಾವನೆಗಳನ್ನು ಮೌಖಿಕ ಪರಂಪರೆಯು ವರ್ತಮಾನದ ಜೊತೆಗೆ ಬೆಸುಗೆ ಮಾಡುತ್ತಿರುತ್ತದೆ. ಭಾರತದಂತಹ ಬಹು ಭಾಷೆಯ ಪರಿಸರದಲ್ಲಿ ಮೌಖಿಕತೆಯೆ ಅಂಚಿನ ಭಾಷೆಗಳಿಗೆ ಅಸ್ತಿತ್ವವನ್ನು ರೂಪಿಸಿರುವುದು. ಲಿಖಿತಾಕೃತಿಗೆ ಹೊಂದಿಕೊಳ್ಳದಿದ್ದ ಭಾಷೆಗಳಿಗೆಲ್ಲ ಮೌಖಿಕ ಪರಂಪರೆಯೆ ಪರಮಾಭಿ ವ್ಯಕ್ತಿಯ ಸ್ವಾತಂತ್ರ್ಯವನ್ನು ತಂದುಕೊಟ್ಟಿತ್ತು. ಮಹಿಳೆಯರು ಗಾಢವಾಗಿ ಮೌಖಿಕ ಪರಂಪರೆಯ ಮೂಲಕ ಕನ್ನಡ ಭಾಷೆಯ ಬಹುವಿನ್ಯಾಸಗಳನ್ನು ರೂಪಿಸಿದ್ದರೂ, ಜನಪದ ಮಹಾಕಾವ್ಯಗಳ ಸಂದರ್ಭದಲ್ಲಿ ವಿಶೇಷವಾಗಿ ಪುರುಷ ಗಾಯಕರು ಕೂಡ ಮೌಖಿಕ ಪರಂಪರೆಯಲ್ಲಿ ಬರುವ ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದಂತೆ ಆನೇಕ ಕಾವ್ಯಗಳನ್ನು ಕಟ್ಟಿ, ಹಾಡಿ, ಜನಪದ ಸಮಾಜದ ಆಧ್ಯಾತ್ಮವನ್ನು ಬೇರೊಂದು ಆಯಾಮದಲ್ಲಿ ತೋರಿದ್ದಾರೆ. (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು-೧೪) ಹೀಗೆ ಮೌಖಿಕತೆಯು ಆಧುನಿಕೋತ್ತರ ಸಂದರ್ಭದಲ್ಲಿ ನಿರ್ವಚನಗೊಳ್ಳುತ್ತಿರುವುದರ ಉದಾಹರಣೆಯಿಂದು ಅದು ಆಧ್ಯಾತ್ಮ ಸಮಾಜ, ಚರಿತ್ರೆ ಸಂಸ್ಕೃತಿ ಭಾಷೆ ಹೀಗೆ ಹಲವಾರು ಆಯಾಮಗಳಲ್ಲಿ ಚರ್ಚೆಗೊಳಗಾಗುತ್ತಿದೆ. ಮೌಖಿಕ ಪರಂಪರೆಯನ್ನು ಸೃಜನಶೀಲ ನೆಲೆಯನ್ನು ಡಾ.ಮೊಗಳ್ಳಿ ಗಣೇಶ್ ಅವರು ಭಿನ್ನವಾಗಿ ಅಂದರೆ, ಮಾಂತ್ರಿಕ ಸೃಜನ ಶೀಲತೆ, ಸಮಷ್ಠಿ ಸೃಜನಶೀಲತೆ, ನಾದ ನಿಷ್ಠ ಸೃಜನಶೀಲತೆ, ಪುನರ್ ಅವಕಾಶ ನಿಷ್ಠ ಸೃಜನಶೀಲತೆ, ಮಾತೃನಿಷ್ಠ ಸೃಜನ ಶೀಲತೆ (ಅದೇ, ಪು:೧೪) ಎಂದು ಗುರುತಿಸುತ್ತಾರೆ. ಈ ಎಲ್ಲಾ ಭಿನ್ನ ಭಿನ್ನ ಆಯಾಮಗಳು ಪ್ರಕ್ರಿಯಾತ್ಮಕ ನೆಲೆಯಲ್ಲಿ ಜರುಗುತ್ತವೆ ಎಂಬುದನ್ನು ವಿಶೇಷವಾಗಿ ಗಮನಿಸಬೇಕು. ಮೌಖಿಕತೆಯು ಸದಾ ಪ್ರಕ್ರಿಯಾತ್ಮಕವಾಗಿಯೇ ಇರುತ್ತದೆ. ತಲೆ ಮಾರಿನಿಂದ ತಲೆಮಾರಿಗೆ, ಪರಂಪರೆಯಲ್ಲಿ ಸಾಗಿ ಬರುವುದೇ ಇದಕ್ಕೆ ಬಹುದೊಡ್ಡ ಉದಾಹರಣೆ, ಅಂದರೆ, ಒಬ್ಬ ವೃತ್ತಿ ಗಾಯಕ ತನ್ನ ಚಿಕ್ಕಂದಿನಲ್ಲಿ ತನ್ನವರಿಂದ ಮೊದಲು ಕಲಿಯುತ್ತಾನೆ. ತಾನು ಬೆಳೆದ ನಂತರ ತನ್ನ ಕಿರಿಯ ಕಲಾವಿದನನ್ನು ಕಲಿಸುತ್ತಾನೆ. ಹೀಗೆ ಕಲಿಯುವ ಮತ್ತು ಕಲಿಸುವ ಕ್ರಿಯೆಯು ಪ್ರಕ್ರಿಯೆಯ ಸ್ವರೂಪವನ್ನು ಪಡೆಯುತ್ತಾ ಹೋಗುತ್ತದೆ. ಹಾಗಾಗಿಯೇ ಮೌಖಿಕ ಪರಂಪರೆಗೆ ಕ್ರಿಯೆ ಮತ್ತು ಪ್ರಕ್ರಿಯೆಗಳೆರಡೂ ಮುಖ್ಯವಾಗುತ್ತವೆ. ಜೊತೆಗೆ ಈ ಮೌಖಿಕ ಪರಂಪರೆ ಎನ್ನುವುದು ಪ್ರಕ್ರಿಯೆ ಮತ್ತು ಒಂದು ಉತ್ಪನ್ನವೆಂದೂ ಗ್ರಹಿಸಬಹುದು. ಉತ್ಪನ್ನವೆಂದರೆ ಇಲ್ಲಿ ಪ್ರಕ್ರಿಯಾತ್ಮಕ ಪರಂಪರೆ ಎಂದರ್ಥ. ಹೀಗೆ ಉತ್ಪಾದಿಸಲ್ಪಟ್ಟ ಮೌಖಿಕ ಕಥನಗಳು, ವಸ್ತು ವಿಷಯಗಳೆಲ್ಲವೂ ಕನಿಷ್ಠಪಕ್ಷ ಒಂದು ತಲೆಮಾರಿನವಷ್ಟು ಹಳೆಯದಾಗಿರುತ್ತವೆ. ಹೀಗೆ ತಲೆಮಾರಿನಿಂದ ಬಂದ ವಿಷಯಗಳೆಲ್ಲವೂ ಕೂಡ ಬಾಯಿಂದ ಬಾಯಿಗೆ ಮೌಖಿಕವಾಗಿಯೇ ಹರಿದು ಬರುವುದರಿಂದ ಅವುಗಳೆಲ್ಲವೂ ಅಗೋಚರಸತ್ಯ ಎನಿಸಿಕೊಳ್ಳುತ್ತವೆ. ಈ ತಲೆಮಾರಿನಿಂದ ತಲೆಮಾರಿಗೆ ಹರಿದು ಬರುವ ಪ್ರಕ್ರಿಯೆಯಲ್ಲಿ ಇವು ಮೂಲವನ್ನು ಉಳಿಸಿಕೊಂಡೇ ತಲೆಮಾರಿನಿಂದ ತಲೆಮಾರಿಗೆ ಹರಿದು ಬರುತ್ತವೆ.

ಜೊತೆಗೆ ಇವುಗಳು ಮೂಲಾರ್ಥಕ್ಕೆ ಸಂಪರ್ಕವನ್ನು ಬೆಸೆಯುತ್ತವೆ. ಒಟ್ಟಾರೆಯಾಗಿ ಈ ಪ್ರಕ್ರಿಯೆಯಲ್ಲಿ ಅದರ ಸ್ಥಾನಕ್ಕನುಗುಣವಾಗಿ ಇವು ಭಿನ್ನತೆಯನ್ನು ಉಳಿಸಿಕೊಂಡೇ ಇರುತ್ತವೆ. ಇದಕ್ಕೆ ಮೂಲ ಕಾರಣ ತಲೆಮಾರಿನ ಸಂದೇಶಗಳು, ಯಾವುದೇ ಸಂದರ್ಭದಲ್ಲಾಗಲೀ ಜನರು ಮಾತಾಡುವ ಅಂಶಗಳಲ್ಲಿ ಕೆಲವು ಪುನರಾವರ್ತಯಾಗುತ್ತವೆ, ಈ ಪುನರಾವರ್ತನೆಯ ಸಂದರ್ಭದಿಂದಲೇ ವರ್ಗಾಯಿಸುವಿಕೆಯ ಪ್ರಕ್ರಿಯೆ ಆರಂಭವಾಗುತ್ತದೆ. ಇದರ ಪರಿಸ್ಥಿತಿಯಲ್ಲಿ ಹಲವಾರು ವ್ಯತ್ಯಾಸಗಳನ್ನು ನಾವು ಗುರುತಿಸಬಹುದಾದರೂ ಕೂಡ ವರ್ಗೀಕರಣದ ಸಂದರ್ಭವನ್ನೇ ಅವು ಕಡಿಮೆ ಮಾಡುತ್ತವೆ. ಅಲ್ಲದೆ ಆ ತಲೆಮಾರಿನ ಸಂದೇಶಗಳೆಲ್ಲವೂ ಪುನರಾವರ್ತಿತವಾದವುಗಳೆಂದು ಇತಿಹಾಸಕಾರರು ಗುರ್ತಿಸುತ್ತಾರೆ. ಅವುಗಳಲ್ಲಿ ಮುಖ್ಯವಾಗಿ ಅವರು ಎರಡು ಗುಂಪುಗಳನ್ನಾಗಿ ವಿಂಗಡಿಸುತ್ತಾರೆ. ಅವುಗಳಲ್ಲಿ ಸಂಪರ್ಕ ಕಲ್ಪಿಸುವ ಸುದ್ದಿ ಮತ್ತು ಸಂಪರ್ಕವನ್ನು ಪ್ರತಿನಿಧಿಸುವ ಅಸ್ತಿತ್ವದ ಕುರಿತಾದ "ವ್ಯಾಖ್ಯಾನ"ಗಳು ಮುಖ್ಯವಾದವುಗಳಾಗಿವೆ. ಕೆಲವೊಂದರ ಮಾಹಿತಿ ಪಡೆಯುವಲ್ಲಿ ಮತ್ತು ಮಾಹಿತಿ ನೀಡುವಲ್ಲಿ ಸುದ್ದಿಯ ಅವಶ್ಯಕತೆಯಿದೆ. ಕೆಲವೊಮ್ಮೆ ಅದು ದೀರ್ಘವಾಗಲ್ಲದಿದ್ದರೂ ಚುಟುಕಾಗಿಯೂ ಇರುತ್ತದೆ. ಬಹಳ ಮುಖ್ಯವಾದ ವಿಚಾರವೆಂದರೆ ಸಂಪರ್ಕಸುದ್ದಿಗಳಾವುವೂ 'ಗತ'ಕ್ಕೆ ಸಂಬಂಧಿಸಿರುವುದಿಲ್ಲ, ಬದಲಿಗೆ ವರ್ತಮಾನಕ್ಕೆ ಸಂಬಂಧಿಸಿರುತ್ತವೆ, ಮತ್ತು ಭವಿಷ್ಯವನ್ನು ನಿರ್ಧರಿಸುತ್ತವೆ. ಈ ತರಹದ ಮಾಹಿತಿಗಳೆಲ್ಲವೂ ಪ್ರತ್ಯಕ್ಷ ದರ್ಶಿತ್ವದಿಂದ ದೊರಕುತ್ತವೆ. ಇವುಗಳಿಂದ ಪರಂಪರೆಗೆ ಯಾವ ಪ್ರಯೋಜನವೂ ಆಗಲಾರದು. ಮತ್ತು ಇತಿಹಾಸದ ಆಕರಗಳಾಗಿ ಬಳಕೆಯಾಗುವ ಸಾಧ್ಯತೆಗಳೂ ತೀರಾ ಕಡಿಮೆ, ಹಾಗಾಗಿಯೇ "ನವ ಮೌಖಿಕತೆಯಲ್ಲಿ ಈ ಪುನರಾವರ್ತನೆ ಎನ್ನುವ ಪ್ರಕ್ರಿಯೆ ತನ್ನ ಹಳೆಯ ಸೃಜನ ಶೀಲತೆಯನ್ನು ಕಳೆದುಕೊಂಡು ಹೊಸ ರೀತಿಯ ರೋಗಗಳನ್ನು ಕಾವ್ಯ ನಿರ್ಮಿತಿಯ ವಾತಾವರಣದಲ್ಲಿ ಹಬ್ಬಿಸುತ್ತಾ ಬರುತ್ತದೆ. ಈ ರೀತಿಯ ರೋಗಗಳಲ್ಲಿ ತುಂಬಾ ಮುಖ್ಯವಾದದ್ದು. ಭಾಷಾ ಬಳಕೆ ಶೀಘ್ರುಸ್ಖಲನದ ಒಂದು ರೂಪ ಆಗುವುದು. ಈ ನಿರ್ದಿಷ್ಟ ಅಂಶ ನಮ್ಮನ್ನು ಒಟ್ಟು ನವ ಮೌಖಿಕ ಮಾಧ್ಯಮ ಮತ್ತು ಆಧುನಿಕ ನಾಗರೀಕತೆಗಳ ನಡುವಣ ಸಂಬಂಧದ ಸ್ವರೂಪದ ಬಗ್ಗೆ ಚಿಂತಿಸುವಂತೆ ಮಾಡುತ್ತದೆ. ಆಧುನಿಕ ನಾಗರೀಕತೆಯ ಮೂಲ ಮಂತ್ರ ಎಂದರೆ ವೇಗ. ಎಲ್ಲವೂ ಇಲ್ಲಿ ವೇಗ ವರ್ಧಕಗಳೇ ಎಲ್ಲವೂ ಇನ್‌ಸ್ಟಂಟ್ ಆಗಬೇಕು. ತಕ್ಷಣಕ್ಕೆ ಕರಗಿ ಸುರಿದುಹೋಗಿ ಬಿಡಬೇಕು (ಡಾ.ಡಿ.ಆರ್.ನಾಗರಾಜ್, ಸಾಹಿತ್ಯ ಕಥನ, ಪು-೨೨೧:೨೨೨) ನವ ಮೌಖಿಕತೆಯು ಅಷ್ಟೊಂದು ಸಂಕೀರ್ಣತೆಯನ್ನು ನಿರ್ಮಿಸಿ ಬಿಟ್ಟಿದೆ. ಆಧುನಿಕತೆಯ ಮನೋಧೋರಣೆಯೆ ಹಾಗಿದೆ. ಇಲ್ಲಿ ಎಲ್ಲವೂ ಸಂಕೀರ್ಣ, ಎಲ್ಲವೂ ಗೋಜಲು ಗೋಜಲು, ಇದರ ಪರಿಣಾಮವಾಗಿ ಮೌಖಿಕತೆಯ ವ್ಯಾಖ್ಯಾನ ನವ ಮೌಖಿಕತೆಗೆ ಹೊರಳಿದೆ. ಈ ನವಮೌಖಿಕತೆಯ ಮುಖ್ಯ ಲಕ್ಷಣವೆಂದರೆ ಏಕೀಕೃತವಾಗುವದು. ಅಥವಾ ಏಕಕಾರಿಯಾಗುವುದು. ಅಂದರೆ ಬಹುಕೃತವಾದ ಜನತೆಯ ಸಂಸ್ಕೃತಿಯನ್ನು ವಿರೋಧಿಸಿದಂತೆ.

# ಅಧ್ಯಾಯ - ೩

## ಪರಂಪರೆ ಮತ್ತು ಚಾರಿತ್ರಿಕ ಪ್ರಜ್ಞೆ

೧. ಮೌಖಿಕ ಪರಂಪರೆ ಮತ್ತು ಲಿಖಿತ ಪರಂಪರೆ

೨. ಸ್ಥಳೀಯ ಕಥನ ಪರಂಪರೆ ಮತ್ತು ವಿಶ್ವಾತ್ಮಕ ಕಥನ ಪರಂಪರೆ

## ಅಧ್ಯಾಯ ೩

# ಪರಂಪರೆ ಮತ್ತು ಚಾರಿತ್ರಿಕ ಪ್ರಜ್ಞೆ

ಮೌಖಿಕ ಚರಿತ್ರೆಯನ್ನು ಬರೆಯುವಾಗ ಸಮಕಾಲೀನ ಬದುಕಿಗೆ ಅರ್ಥಪೂರ್ಣವಾಗಬಲ್ಲ ಒಂದು ಖಚಿತವಾದ ನಿಲುವನ್ನು ತಾಳುವುದು ಅವಶ್ಯಕವಾಗಿದೆ. ಸಂಸ್ಕೃತಿಯ ವಸ್ತುನಿಷ್ಠ ಅಧ್ಯಯನದಲ್ಲಿ ಸಂಸ್ಕೃತಿಯ ಬಗ್ಗೆ ನಾವು ಯಾವ ಪರಿಕಲ್ಪನೆಯನ್ನು ಇಟ್ಟುಕೊಳ್ಳುತ್ತೇವೆಯೊ ಅದು ನಾವು ಇಂದಿನ ಬದುಕಿನ ಜತೆಗೆ ಗುರುತಿಸಿಕೊಳ್ಳುವ ಸಂಬಂಧವನ್ನು ಅವಲಂಬಿಸಿರುತ್ತದೆ. ಒಂದು ಖಚಿತವಾದ ನಿಲುವಿಗೆ ಬದ್ಧರಾಗುವುದರಿಂದ ಸಂಸ್ಕೃತಿಯ ಅಧ್ಯಯನದ ವಸ್ತುನಿಷ್ಠತೆಗೆ ಕುಂದು ಬರುತ್ತದೆ ಎನ್ನುವುದು ಸರಿಯಲ್ಲ. ಬದುಕಿನಲ್ಲಿ ನಮ್ಮ ಪ್ರಜ್ಞೆಯ ಮೇಲೆ ನಿರಂತರವಾಗಿ ಎರಗುವ ಅನುಭವಗಳನ್ನು ಅರ್ಥಮಾಡಿಕೊಳ್ಳಲು, ಅವುಗಳ ಬಗ್ಗೆ ಒಂದು ಖಚಿತವಾದ ಗ್ರಹಿಕೆಯನ್ನು ತಾಳಬೇಕಾಗುತ್ತದೆ. ಹಾಗೆಯೇ ಅಭ್ಯಾಸದ ಶಿಸ್ತಿನಲ್ಲಿ ಒಂದು ಗ್ರಹಿಕೆಯ ಬೆಂಬಲದಿಂದ ಸಾಮಗ್ರಿಯ ಅವ್ಯವಸ್ಥೆಯ ಮಧ್ಯೆ ಒಂದು ವ್ಯವಸ್ಥೆಯನ್ನು ಗುರುತಿಸಬೇಕಾಗುತ್ತದೆ. ಖಚಿತವಾದ ನಿಲುವಿನಿಂದ ಹೊರಟು ಸಾಮಗ್ರಿಯ ಸಂಕೀರ್ಣತೆಯ ಎದುರಿಗೆ ನಮ್ರವಾಗಿ ಆ ನಿಲುವನ್ನು ಸೂಕ್ಷ್ಮಗೊಳಿಸುತ್ತ ಹೋಗುವುದು ಹೆಚ್ಚು ಸಮರ್ಪಕ. ಅಷ್ಟಾಗಿಯೂ ನಮ್ಮಲ್ಲಿ ಬದ್ಧವಲ್ಲದ ಸಾಹಿತ್ಯವಾಗಲಿ, ಬದ್ಧವಲ್ಲದ ಶಾಸ್ತ್ರೀಯ ಅಧ್ಯಯನಗಳಾಗಲಿ ಎಂದೂ ಇರಲಿಲ್ಲ. ಉದಾಹರಣೆಗೆ ಇತಿಹಾಸದ ಬರಹವನ್ನು ತೆಗೆದುಕೊಳ್ಳಿ, ಯಜಮಾನ ಸಂಸ್ಕೃತಿಯನ್ನು ಸಮರ್ಥಿಸುವವರು ಸಂಸ್ಕೃತಿಯ ಜೀವಂತ ಒಳಸುಳಿಗಳನ್ನು ಮರೆಮಾಚಿ ಯಜಮಾನ ಸಂಸ್ಕೃತಿಯ ಏಕಾಕೃತಿಯನ್ನು ನಮ್ಮ ಮೇಲೆ ಹೇರಲು ಇತಿಹಾಸ ಬರೆಯುತ್ತಾರೆ. ಹಿಂದೂ ರಾಷ್ಟ್ರದ ಪರಿಕಲ್ಪನೆಯನ್ನು ಬೆಳೆಸಲು ಬಯಸುವ ವೀರ ಸನಾತನಿಗಳು ಫ್ಯಾಸಿಸ್ಟ್ ನಿಲುವಿಗೆ ಬದ್ಧರಾಗಿ ಇತಿಹಾಸವನ್ನು ತಿರುಚಿ ಬರೆಯುತ್ತಾರೆ. ಬದ್ಧರಾಗುವುದು ಅನಿವಾರ್ಯವಾದ್ದರಿಂದ ವೈಜ್ಞಾನಿಕ ನಿಲುವಿಗೆ ಬದ್ಧರಾಗುವುದು ಹೆಚ್ಚು ಸೂಕ್ತ. (ರಾಜೇಂದ್ರ ಚೆನ್ನಿ, ಅಮೂರ್ತತೆ ಮತ್ತು ಪರಿಸರ, ಪು: ೨೦೩) ಮೌಖಿಕ ಚರಿತ್ರೆಯನ್ನು ಬರೆಯುವಾಗ ವೈಜ್ಞಾನಿಕ ನಿಲುವನ್ನು ತಾಳುವುದು ಇತ್ತೀಚಿನವರೆಗೆ ಅಸಾಧ್ಯವಾಗಿದ್ದಕ್ಕೆ ನಮ್ಮ ಬೌದ್ಧಿಕ ಪರಿಸರ ಕಾರಣವಾಗಿದೆ ಎಂಬುದು

ಸತ್ಯ. ಹಾಗಾಗಿಯೇ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯ ಬಗ್ಗೆ ಅತಿ ಭಾವುಕವಾದ, ಆದರ್ಶಮಯ ನಿಲುವು ಹುಟ್ಟಿಕೊಂಡಿತು. ಭಾರತೀಯವಾದುದ್ದೆಲ್ಲವನ್ನೂ ವೈಭವೀಕರಿಸುವ ಓರಿಯಂಟಲಿಸ್ಟ್ ಚಿಂತನೆ ವಸಾಹತುಶಾಹಿಯ ಕೊಡುಗೆಯಾಗಿದೆ. ಅಲ್ಲದೆ ವಸಾಹತುಶಾಹಿ ಪರಿಣಾಮದ ಇನ್ನೊಂದು ಮಾನಸಿಕ ಹಿಂಜರಿತವಾದ ಮರುಹಂಬಲದ ಧೋರಣೆಯೂ ಕೂಡ ಪ್ರಭಾವಶಾಲಿಯಾಗಿದೆ. ಈ ಕಾರಣಕ್ಕಾಗಿ ನಮ್ಮಲ್ಲಿ ವಸ್ತುನಿಷ್ಠತೆ ಅಸಾಧ್ಯವಾಗಿದೆ. ಸ್ವಾತಂತ್ರ್ಯದ ನಂತರ ಭ್ರಮನಿರಸನ ಮತ್ತು ಸಾಮಾಜಿಕ ಕರ್ಷಣಗಳಿಂದಾಗಿ ನಮ್ಮ ಚಿಂತನೆಯಲ್ಲಿ ಇನ್ನೊಂದು ಹಿಂಜರಿತ ಹುಟ್ಟಿಕೊಂಡಿತು. ಅದೇನೆಂದರೆ ಪರಂಪರೆಯನ್ನು ಸಾರಾಸಗಟಾಗಿ ತಿರಸ್ಕರಿಸುವ ಮತ್ತು ಸಮಷ್ಟಿಯ ಎಲ್ಲ ಅನುಭವವನ್ನು ಅಮಾನ್ಯ ಮಾಡುವ ಧೋರಣೆ. ಈ ಧೋರಣೆಯ ಪ್ರಭಾವವನ್ನು ನಾವು ನಮ್ಮ ಶಿಷ್ಟ ಪರಂಪರೆಯಲ್ಲೂ ಕಾಣುತ್ತೇವೆ.

ಮಾನವನನ್ನು ನಿರಂತರವಾಗಿ ಅತ್ಯಂತ ಕ್ರೂರ ಸ್ಥಿತಿಯಲ್ಲಿ ಇಡಬಯಸುವ ಸಮಾಜವೊಂದರಲ್ಲಿ ಬದುಕುವ ಪ್ರಜ್ಞಾವಂತರಿಗೆ ತಮ್ಮ ಸಂಸ್ಕೃತಿಯೊಂದಿಗಿನ ಎಲ್ಲ ಭಾವನಾತ್ಮಕ ಸಂಬಂಧಗಳನ್ನು ಕಡಿದುಕೊಳ್ಳಬೇಕೆನ್ನುವ ಪ್ರವೃತ್ತಿ ಸಹಜವಾಗಿರುತ್ತದೆ. ಈ ಎಲ್ಲ ಕಾರಣಗಳಿಂದಾಗಿ ಸಮಷ್ಟಿ ನೆಲೆಯ ಬದುಕನ್ನು ಯಾವಾಗಲೂ ಅನುಮಾನದಿಂದ ನೋಡುವ ಮನೋಭಾವನೆ ಬೆಳೆದು ವ್ಯಕ್ತಿನಿಷ್ಠ ಚಿಂತನೆ ಹೆಚ್ಚು ಕೇಂದ್ರೀಕೃತವಾಗುತ್ತಾ ಹೋಗುತ್ತದೆ." ಆದರೆ ವ್ಯಕ್ತಿನಿಷ್ಠತೆಯ ನಿರ್ವಾತದಲ್ಲಿ ನಿಜವಾದ ಚಿಂತನೆ ಅಥವಾ ಸಾಹಿತ್ಯ ಸೃಷ್ಟಿ ಅಸಾಧ್ಯ. ಅದೇ ಹೊತ್ತಿಗೆ ವ್ಯಕ್ತಿನಿಷ್ಠತೆಯಿಂದ ಆಚೆ ಬಂದು ಸಮಷ್ಟಿಯ ಬದುಕಿನ ಜತೆಗೆ ಸಂಬಂಧ ಜೋಡಿಸಿಕೊಳ್ಳುವುದೆಂದರೆ ಸಂಪ್ರದಾಯದೊಂದಿಗೆ ಸಮಜಾಯಿಶಿ ಮಾಡಿಕೊಳ್ಳಬೇಕೆಂದು ಅರ್ಥವಲ್ಲ. ಪರಂಪರೆಯಲ್ಲಿ ಮನುಷ್ಯನ ಬದುಕಿನ ಪರವಾಗಿರುವ ಎಳೆಗಳನ್ನು ಶೋಧಿಸಿ ಅವುಗಳೊಂದಿಗೆ ಮನುಷ್ಯನ ಇಂದಿನ ಬದುಕನ್ನು ಮೇಳವಿಸಿ ನೋಡುವುದು ಸಮಷ್ಟಿಯ ಬದುಕಿನಲ್ಲಿ ಈ ಎಳೆಗಳನ್ನು ಗುರುತಿಸುವುದು ಅವಶ್ಯಕವೆ? ಇಂದಿನ ಬದುಕಿಗೆ ನಿಷ್ಠರಾದರೆ ಸಾಲದೆ ಎನ್ನುವ ಪ್ರಶ್ನೆಯೂ ಏಳುತ್ತದೆ. ಆದರೆ ಸಾಹಿತ್ಯದಲ್ಲಿ ಅದರ ಅವಶ್ಯಕತೆ ಸ್ಪಷ್ಟವಾಗಿ ಕಾಣತ್ತದೆ. ವ್ಯವಸ್ಥೆಯ ವಿರುದ್ಧ ಬಂಡೇಳುವುದು ಆರೋಗ್ಯವಂತಿಕೆಯ ಲಕ್ಷಣವೆನ್ನುವುದು ನಿಜ. ಈ ಬಂಡಾಯ ಒಂದು ಹಂತದಲ್ಲಿ Corrective measure ಆಗಿ ಪ್ರಸ್ತುತವೆ ಹೊರತು ಅದಕ್ಕೆ ತನ್ನದೇ ಆದ ತಾಳಿಕೆಯ ಗುಣವಿರುವುದಿಲ್ಲ. ಬಹುಶಃ ಈ ಕಾರಣದಿಂದ ಬಂಡೇಳುವ ಧೋರಣೆಯಿಂದ ಸಾಹಿತ್ಯಸೃಷ್ಟಿ ಶುರುಮಾಡದ ನವ್ಯಸಾಹಿತ್ಯದ ಹರಿಕಾರರು ಮುಂದೆ ಸಂಪ್ರದಾಯದತ್ತ ವಾಲುವಂತಾಯಿತು. ಪ್ರಸ್ತುತ ಸಮಸ್ಯೆಯೆಂದರೆ ವೈಯಕ್ತಿಕತೆಯನ್ನು ತೊರೆದು ಸಮಷ್ಟಿಯ ಬದುಕಿನ ಜತೆಗೆ ಸಂಬಂಧಗಳನ್ನು ಕುದುರಿಸಿಕೊಳ್ಳುವುದು; ಅದೇ ಹೊತ್ತಿಗೆ ಸಂಪ್ರದಾಯವನ್ನು ಅದರ ಇಂದಿನ ಸ್ಥಿತಿಯಲ್ಲಿ ಸ್ವೀಕರಿಸದೆ ಅದರ ಒಳಸುಳಿಯಾಗಿ ಉಳಿದು ಬಂದ ಬದುಕಿನ ಪರವಾದ ಎಳೆಗಳನ್ನು ಕಂಡುಕೊಳ್ಳುವುದು. ಸ್ಥೂಲವಾಗಿ ಹೇಳುವುದಾದರೆ ಸಂಸ್ಕೃತಿಯ ನಿಜವಾದ ಪರಂಪರೆಯನ್ನು ಪುನಃ ಸೃಷ್ಟಿಸಿಕೊಳ್ಳುವುದು. ಸಂಸ್ಕೃತಿಯ ಮೂರ್ತ ಹಾಗೂ

ವೈಜ್ಞಾನಿಕ ಅಧ್ಯಯನದಿಂದ ಮಾತ್ರ ಇದು ಸಾಧ್ಯವಾಗಬಲ್ಲದು." (ರಾಜೇಂದ್ರ ಚೆನ್ನಿ, ಅಮೂರ್ತತೆ ಮತ್ತು ಪರಿಸರ, ಪು: ೨೦೪)

ಆದರೆ ಹಲವಾರು ರೀತಿಯ ಒಳನೋಟಗಳ ಪ್ರಕಾರ ಸಮಾಜವೊಂದರಲ್ಲಿ ಚಾಲ್ತಿಯಲ್ಲಿರುವ ಯಾವುದೇ ತತ್ವಕ್ಕೂ ತನ್ನದೇ ಆದ ಸ್ವತಂತ್ರವಾದ ಅಸ್ತಿತ್ವವಾಗಲಿ 'ಇತಿಹಾಸ'ವಾಗಲಿ ಇರಲು ಸಾಧ್ಯವಿಲ್ಲ. ಮೂರ್ತವಾದ ಒಂದು ಚಾರಿತ್ರಿಕ ಸನ್ನಿವೇಶದಲ್ಲಿ ಅಂದಿನ ವ್ಯವಸ್ಥೆಯ ಪ್ರತಿಫಲನವಾಗಿ ಒಂದು ತತ್ವ ಹುಟ್ಟಿಕೊಳ್ಳುತ್ತದೆ. ಆ ತತ್ವದ ತಳಹದಿಯಾಗಿರುವ ವ್ಯವಸ್ಥೆ ಬದಲಾದಂತೆ ಆ ತತ್ವವೂ ಬದಲಾಗುತ್ತದೆ. ಒಂದು ವೇಳೆ ಹಾಗೇನಾದರೂ ಆ ತತ್ವ ಉಳಿದುಕೊಂಡು ಬಂದಿದ್ದರೆ ಅದರ ತಳಹದಿಯಾಗಿದ್ದ ಆ ವ್ಯವಸ್ಥೆಯ ಒಂದು ಅಂಶ ಉಳಿದುಕೊಂಡು ಬಂದಿದೆ ಎಂದರ್ಥ. ಈ ಒಳನೋಟಗಳು ಮೌಖಿಕ ಸಂಸ್ಕೃತಿಯ ಅಧ್ಯಯನದಲ್ಲಿ ಮಹತ್ವಪೂರ್ಣವಾದುದು. ಸಾಮಾನ್ಯವಾಗಿ ಪರಂಪರೆ ಎಂಬುದು ಹಾಗೇ ಉಳಿದುಕೊಂಡು ಬರುವುದರಿಂದ ಅದು ನಿರಂತರ ಶಾಶ್ವತ ಎನ್ನುವ ಭಾವನೆ ನಮ್ಮಲ್ಲಿ ಬಲವಾಗಿ ಬೇರೂರಿರುತ್ತದೆ. ಈ ಹಂತದಲ್ಲಿ ನಡೆಯುವ ಬದಲಾವಣೆಗಳು ಸ್ವತಂತ್ರವಾಗಿಯೇ ನಡೆಯುತ್ತವೆ ಎಂಬ ಭಾವನೆಯೂ ಸಹ ನಮ್ಮಲ್ಲಿದೆ. ಇವುಗಳನ್ನು ಅಭ್ಯಸಿಸುವ ಅಧ್ಯಯನಗಳು ವ್ಯವಸ್ಥೆಯ ಮೇಲ್ ರಚನೆಯ ಅಧ್ಯಯನಗಳಾಗಿಬಿಡುತ್ತವೆ. ಆದರೆ ಈ ಪರಿಕರಗಳ ವಿರುದ್ಧದ ಪ್ರತಿಭಟನೆ ಹುಸಿ ನಿರೀಕ್ಷೆಯಾಗುತ್ತದೆ. ಮಾರ್ಕ್ಸ್‌ವಾದಿ ಚಿಂತನೆಯ ಪ್ರಕಾರ ನಮ್ಮ ಗಮನವನ್ನು ತತ್ವದ ಬದಲಾಗಿ ಅದರ ತಳಹದಿಯಾದ ವ್ಯವಸ್ಥೆಯ ಮೇಲೆ ಕುದುರಿಸಿದರೆ ನಮ್ಮ ಚಿಂತನೆ ಹೆಚ್ಚು ಅರ್ಥಪೂರ್ಣವಾಗುತ್ತದೆ. ಅಲ್ಲದೆ ಯಜಮಾನ ಸಂಸ್ಕೃತಿಯ ಆಧಾರಗಳಾದ ಈ ಪರಿಕರಗಳು ಶಾಶ್ವತವಲ್ಲವೆನ್ನುವ ಸ್ಥೈರ್ಯವೂ ಇರುತ್ತದೆ. ಆದರೆ ಇದು ಒಂದು ಹಂತದಲ್ಲಿ ಹೇಗೆ ಅಸ್ತಿತ್ವಕ್ಕೆ ಬಂದಿತೋ ಹಾಗೆಯೇ ಅನಿವಾರ್ಯವಾಗಿ ನಾಶ ಹೊಂದುತ್ತದೆ.

ನಮ್ಮ ಪರಂಪರೆಯಲ್ಲಿ ಯಾವಾಗಲೂ ಜಾತಿವ್ಯವಸ್ಥೆ ಶೋಷಣೆಯ ಪರವಾಗಿದೆ. ಆದರೆ ಮೌಖಿಕ ಪರಂಪರೆ ಮನುಷ್ಯನ ಇಲ್ಲಿಯ ಬದುಕಿನ ಪರವಾಗಿತ್ತು. ಭೌತವಾದದ ಎಳೆಗಳನ್ನು ಗುರುತಿಸುವುದೆಂದರೆ ಬದುಕಿನ ಪರವಾಗಿದ್ದ ಪರಂಪರೆಯ ಅಂಶಗಳನ್ನು ಗುರುತಿಸುವುದು. ಹಾಗಾಗಿಯೇ ಪರಂಪರೆಯ ಜೀವಂತ ಅಂಶಗಳನ್ನು ಪುನಃ ಸೃಷ್ಟಿಸುವುದು ಮರುಹಂಬಲದ ತವಕದಿಂದಲ್ಲ, ವೈಜ್ಞಾನಿಕ ಅಧ್ಯಯನದ ಆಧಾರದಿಂದ. ಯಜಮಾನ ಸಂಸ್ಕೃತಿಯ ವಕ್ತಾರರ ನಿರಂತರ ಪ್ರಯತ್ನದಿಂದಾಗಿ ಭಾರತೀಯ ಪರಂಪರೆಯಲ್ಲಿ ಕೆಲವು ಮೂಲಭೂತ ಕಲ್ಪನೆಗಳು ಈಗಲೂ ಪ್ರಭಾವಶಾಲಿಯಾಗಿವೆ. ಭಾರತದಲ್ಲಿದ್ದ ಏಕೈಕ ಚಿಂತನಾ ಪರಂಪರೆಯೆಂದರೆ ಮೌಖಿಕ ಮತ್ತು ಲಿಖಿತ ಪರಂಪರೆಯೆನ್ನುವುದು ಬಹಳ ಜನರಿಗೆ ಗೊತ್ತಿರುವ ವಿಷಯವೇ ಆಗಿದೆ. ಇದು ಉಳಿದುಕೊಂಡುಬಂದಿರಲು ಮುಖ್ಯ ಕಾರಣಗಳೆಂದರೆ ಸಮುದಾಯಗಳ ಚಲನಶೀಲ ಸ್ಥಿತಿ. ಪರಂಪರೆಯ ಎಲ್ಲ ದಾಖಲೆಗಳನ್ನು ನಾಶ ಮಾಡಿದ್ದು ಮತ್ತು ಮಾನ್ಯತೆ ಪಡೆದ ಎಲ್ಲ ದಾಖಲೆಗಳಲ್ಲಿ

ಮೌಖಿಕ ಪರಂಪರೆಯ ಬಗ್ಗೆ ವ್ಯವಸ್ಥಿತವಾದ ಅಪಪ್ರಚಾರವನ್ನು ಮಾಡಿದ್ದು, ಇದೆಲ್ಲದರ ಮಧ್ಯೆಯೂ ಉಳಿದುಕೊಂಡಿರುವ ಎಳೆಗಳನ್ನು ಹಿಡಿದುಕೊಂಡು ಮೌಖಿಕ ಚಿಂತನಾ ಪರಂಪರೆಯನ್ನು ಪುನಃಸೃಷ್ಟಿಸಿ ಅಭ್ಯಾಸ ಮಾಡವುದು ಹೇಗೆ ಸಾಧ್ಯ ಎನ್ನುವುದನ್ನು ಹಲವಾರು ಜನ ವಿದ್ವಾಂಸರು ಮಾಡಿದ್ದಾರೆ. ಅವರಲ್ಲಿ ಡಿ.ಡಿ.ಕೋಸಾಂಬಿ, ಹೆಚ್.ಡಿ.ಸಂಕಾಲಿಯಾ ಪ್ರಮುಖರು, ಭಾರತೀಯ ತಾತ್ವಿಕರು ಯಾವುದೇ ಒಂದು ವಾದವನ್ನು ಖಂಡನೆ ಮಾಡುವ ಮೊದಲು ಆ ವಾದವನ್ನು ಮಂಡಿಸುವುದು ಒಂದು ಪರಿಪಾಠ. ಆದ್ದರಿಂದ ಪರಂಪರೆಯೆಂದರೆ "ಮನುಷ್ಯ ಜ್ಞಾನವನ್ನು ಪಡೆಯುವ ಎಲ್ಲ ಬಗೆಗಳನ್ನು ತಿರಸ್ಕರಿಸುವ ವಿತಂಡವಾದ ಐಂದ್ರಿಯಕ ಸುಖಗಳಲ್ಲಿ ಲೋಲುಪನಾಗಬೇಕೆಂದು ಬೋಧಿಸುವ ಅನೀತಿಪರವಾದ ಮತ್ತು ಅನುಭವದ ಸತ್ಯವನ್ನು ತಿರಸ್ಕರಿಸುವ ಕುತರ್ಕವೆನ್ನುವ ಧೋರಣೆ ಸಾಮಾನ್ಯವಾಗಿ ಬಿಟ್ಟಿತು. ಇಂಥ ಪರಿಸ್ಥಿತಿ ಹುಟ್ಟಿಕೊಳ್ಳುವುದು ಚಿಂತನೆಯ ಎಲ್ಲ ಮಾಧ್ಯಮಗಳು ಕೆಲವು ವರ್ಗಶಕ್ತಿಗಳ ಕೈಯಲ್ಲಿರುವಾಗ ಮತ್ತು ಸಂಸ್ಕೃತಿಯ ಮೇಲ್‌ರಚನೆಗಳಾದ ತತ್ವ, ವಿಚಾರ ಇವುಗಳ ಬುಡದಲ್ಲಿರುವ ವ್ಯವಸ್ಥೆಯನ್ನು ವಿಶ್ಲೇಷಿಸಬೇಕು ಎನ್ನುವ ಪ್ರಾಥಮಿಕ ತಿಳುವಳಿಕೆ ವಿಶ್ಲೇಷಕರಲ್ಲಿ ಇಲ್ಲದೆ ಇರುವಾಗ." (ಅದೇ, ಪು:೨೦೬) ನಿಜವಾದ ಸ್ವರೂಪದ ಬಗ್ಗೆ ಕೆಲವು ತೀರ್ಮಾನಗಳನ್ನು ಮಾಡುತ್ತಾರೆ. ಪದದಲ್ಲಿಯೆ ಅದರ ನಿಜಸ್ವರೂಪದ ಬಗ್ಗೆ ಹೊಳಹುಗಳು ಸಿಕ್ಕುತ್ತವೆ. ಯಜಮಾನ ಸಂಸ್ಕೃತಿಯ ವಕ್ತಾರರು ಪರಂಪರೆಯ ಬಗ್ಗೆ ತೋರುವ ತೀವ್ರ ಈ ನಿಷ್ಠ ರೀತಿಯ ಧೋರಣೆಯಿಂದಲೆ ಜನಸಾಮಾನ್ಯರಲ್ಲಿ ಸಾಮಾನ್ಯವಾಗಿದ್ದ ಜೀವನದೃಷ್ಟಿಯೊಂದಕ್ಕೆ ಸಂಬಂಧಿಸಿದ್ದು ಎನ್ನುವುದು ಸ್ಪಷ್ಟವಾಗುತ್ತದೆ. ಅಂದರೆ ಅದು ಸಂಸ್ಕೃತಿಯ ಒಳಸುಳಿಯಾದ ಒಂದು ಮುಖ್ಯ ಅಂಶವಾಗಿರಬೇಕು. ಅಲ್ಲದೆ ಈ ಪದ ಸೂಚಿಸುವಂತೆ ಈ ಜೀವನದೃಷ್ಟಿಯ ಒತ್ತು ಈ ಲೋಕದಲ್ಲಿಯ ಮನುಷ್ಯನ ಬದುಕಿನ ಮೇಲೆ ಇತ್ತು ಎನ್ನುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಜನಪದ ಸಂಸ್ಕೃತಿಯ ಬದುಕಿನಲ್ಲಿ. ಈ ರೀತಿಯ ಸಂಸ್ಕೃತಿಯ ಉಗಮ ಅನಿವಾರ್ಯವೇ ಆಗಿದೆ. ಒಂದು ಉಜ್ವಲವಾದ ತಾತ್ವಿಕ ಪರಂಪರೆ ನಮ್ಮಲ್ಲಿತ್ತು ಎಂದು ಹೇಳುವುದರ ಮನುಷ್ಯನ ಇಲ್ಲಿಯ ಬದುಕಿಗೆ ಬದ್ಧವಾಗಿದ್ದ ಸಂಸ್ಕೃತಿಯ ಅಂಶಗಳೂ ಇಲ್ಲಿದ್ದವು ಎಂದು ಹೇಳಬೇಕಿದೆ. ಈ ಜನಸಂಸ್ಕೃತಿಯ ಚಿಂತನೆಯ ಮೂಲಗಳನ್ನು ಒಂದು ವಿಶಿಷ್ಟವಾದ ಸಮಾಜ ವ್ಯವಸ್ಥೆಯಲ್ಲಿ ಕಾಣಬೇಕಿದೆ. ಶ್ರೇಣೀಕೃತವಾದ ವರ್ಗ ವ್ಯವಸ್ಥೆ ಸಮಾಜದಲ್ಲಿ ಹುಟ್ಟಿಕೊಂಡು ಅದರ ಫಲವಾಗಿ ದೈಹಿಕ ಶ್ರಮ ಮತ್ತು ಬೌದ್ಧಿಕ ಕೆಲಸ ಇವೆರಡೂ ಬೇರ್ಪಟ್ಟು ದೈಹಿಕ ಶ್ರಮದ ಬಗ್ಗೆ ಕೀಳರಿಮೆ ಶುರುವಾದಾಗ ಮನಸ್ಸು ಅಥವಾ ಆತ್ಮವೇ ಜಗತ್ತಿನ ಅಂತಿಮ ಸತ್ಯವೆನ್ನುವ ಆದರ್ಶವಾದ ಹುಟ್ಟಿಕೊಳ್ಳುತ್ತದೆ. ಹಾಗೆಯೇ ವಿಘಟನೆಯಾಗದ ಸಾಂಘಿಕ ಜೀವನದಲ್ಲಿ, ಅಂದರೆ ಉತ್ಪಾದನಾ ಶಕ್ತಿಗಳು ಸೀಮಿತವಾಗಿರುವುದರಿಂದ ಎಲ್ಲರೂ ಸಮವಾಗಿ ಉತ್ಪಾದನೆ ಕ್ರಿಯೆಯಲ್ಲಿ ತೊಡಗಿರುವ ಹಂತದಲ್ಲಿ ಜನಸಂಸ್ಕೃತಿ ಚಿಂತನೆ ಬೆಳೆಯುತ್ತದೆ. ಆದರೆ ಮನುಷ್ಯ ನಿಸರ್ಗದೊಂದಿಗೆ ಹತ್ತಿರದಲ್ಲಿದ್ದು ದುಡಿಯುತ್ತಿರುವಾಗ 'ಭೌತಿಕ' ಜಗತ್ತಿನ ಸತತ ಒತ್ತಡ ಅವನ

ಪ್ರಜ್ಞೆಯ ಮೇಲೆ ಬಿದ್ದು ಅವನ ಚಿಂತನೆ ಭೌತಿಕ ಜಗತ್ತಿನ ವಾಸ್ತವಗಳಿಂದ ವಿಮುಖವಾಗುವುದಿಲ್ಲ. ಆದರೆ ವರ್ಗವ್ಯವಸ್ಥೆ ಜಾರಿಗೆ ಬಂದ ನಂತರ ಬುದ್ಧಿಯಿಂದಲೆ ಬದುಕುವ ಅತಿ ಚಿಕ್ಕ ವರ್ಗವೊಂದು ಹುಟ್ಟಿಕೊಂಡ ಮೇಲೆ ಭೌತಜಗತ್ತಿನ ಸಾಮೀಪ್ಯದಿಂದ ಮನುಷ್ಯ ಹುಟ್ಟುತಾನೆ. ಆಗ ಅವನು ತನ್ನ ಪ್ರಜ್ಞೆ ಅಥವಾ ಮನುಸ್ಸು ಕೊನೆಗೆ ಆತ್ಮ ಜಗತ್ತಿನ ಆತ್ಯಂತಿಕ ಸತ್ಯವೆನ್ನುವ ಭ್ರಮೆಯನ್ನು ಒಪ್ಪಿಕೊಳ್ಳುತ್ತಾನೆ. ಹಾಗಾಗಿಯೇ ಪರಂಪರೆ ಇಂಥ ವರ್ಗೀಕೃತ ಸಮಾಜದ ಅಧಿಕೃತ ತತ್ವವಾಗುತ್ತದೆ. ಈ ಪರಂಪರೆ ಎಂಬುದು ಬದುಕಿನ ಪರವಾಗಿರುವ ಧೋರಣೆಯ ಒಂದು ಜನಾಂಗದ ವಿಶಿಷ್ಟ ರೀತಿಗೆ ಸಂಬಂಧಿಸಿದ್ದಲ್ಲ ಅಥವಾ ಕೆಲವೇ ಸಮುದಾಯಗಳ ಕೊಡುಗೆಯೂ ಅಲ್ಲ. ಪ್ರತಿಯೊಂದು ಸಮಾಜವೂ ಚಾರಿತ್ರಿಕವಾಗಿಬೆಳವಣಿಗೆಯ ಹಲವಾರು ಹಂತಗಳಲ್ಲಿ ಹಾಯ್ದು ಬರಬೇಕಾದದ್ದು ಅನಿವಾರ್ಯವಾದ್ದರಿಂದ ಪ್ರತಿಯೊಂದು ಹಂತದಲ್ಲಿನ ವಿಶಿಷ್ಟ ವ್ಯವಸ್ಥೆಗೆ ತಕ್ಕುದಾದ ತತ್ವಗಳೂ ಎಲ್ಲ ಸಮಾಜಗಳಲ್ಲಿ ಹುಟ್ಟುವುದು ಅನಿವಾರ್ಯವಾಗಿದೆ. ಹಾಗೆ ನೋಡಿದರೆ ಉತ್ಪಾದನಾ ಶಕ್ತಿಗಳು ವಿರಳವಾಗಿರುವ ಮೊದಲ ಹಂತದಲ್ಲಿ ಸಂಘಜೀವನ ಅನಿವಾರ್ಯವಾಗಿತ್ತು. ಆ ಹಂತದಲ್ಲಿ ಸಮಾಜ ಆಹಾರ ಹೆಕ್ಕುವ ಘಟ್ಟದಲ್ಲಿರಲಿ ಅಥವಾ ಅಲೆಮಾರಿ ಘಟ್ಟದಲ್ಲಿರಲಿ ಹೆಚ್ಚುವರಿ ಉತ್ಪಾದನೆ ಸಾಧ್ಯವಾಗುವವರೆಗೆ ಖಾಸಗೀ ಆಸ್ತಿ ಅಥವಾ ವರ್ಗ ವ್ಯವಸ್ಥೆಯ ಪದ್ಧತಿಗಳಿಗೆ ಅವಕಾಶವಿದ್ದಿಲ್ಲ. ಈ ಹಂತದ ಸಮಾಜದ ಧರ್ಮ ಹಾಗೂ ತತ್ವ ಕೂಡ ಸಾಮುದಾಯಿಕ ಒಲವುಗಳನ್ನು ಒಂದು ಬಗೆಯ ಆದಿ-ಸಮತಾವಾದದ ನಿಲುವುಗಳನ್ನು ಬಿಂಬಿಸುತ್ತವೆ ಮತ್ತು ಜನಪದದ ಜೀವನದೃಷ್ಟಿ ಈ ನೆಲದ ಬದುಕಿನಲ್ಲಿ ಬೇರೂರಿರುತ್ತದೆ. ಶ್ರಮವಿಭಜನೆ, ಖಾಸಗೀ ಆಸ್ತಿ ಮತ್ತು ದೈಹಿಕ ಶ್ರಮದ ಬಗ್ಗೆ ಕೀಳರಿಮೆಗಳು ಶುರುವಾದೊಡನೆ ಆದರ್ಶವಾದ ಸಮಾಜದ ಮುಖ್ಯ ತತ್ವವಾಗುತ್ತದೆ. (ಅದೇ, ಪು:೨೦೮) ಇದು ಮುಂದೆ ಕ್ರಮೇಣ ಚಾರಿತ್ರಿಕ ಕಾಲಘಟ್ಟದಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುತ್ತಾ ಹೋಗುವುದರ ಜೊತೆಗೆ ಸಮುದಾಯಗಳಿಗೆ ಪ್ರಜ್ಞೆಯ ಭಾಗವಾಗಿ ರೂಪುಗೊಂಡಿತು. ಅಂದರೆ ಅದು ಸ್ಥಳೀಯ, ವಿಶ್ವಾತ್ಮಕ, ಲಿಖಿತ, ಮೌಖಿಕ, ಹೀಗೆ ಹಲವಾರು ಅಂಶಗಳನ್ನೊಳಗೊಂಡ ಒಂದು ಬೃಹತ್ ಪಠ್ಯವಾಗಿ ರೂಪುಗೊಂಡಿರುವುದನ್ನು ಕಾಣುತ್ತೇವೆ.

### ೩.೧. ಮೌಖಿಕ ಪರಂಪರೆ ಮತ್ತು ಲಿಖಿತ ಪರಂಪರೆ

ನಿರ್ದಿಷ್ಟವಾದ ಸಮುದಾಯವೊಂದು ತನ್ನ ಸ್ಮರಣೆ ಮತ್ತು ನಡವಳಿಕೆಗಳ ಮೂಲಕ ಜೀವಂತವಾಗಿರಿಸಿಕೊಂಡು ಬಂದು ಬದುಕಿನ ವಿಧಾನಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಮತ್ತು ಅದರಿಂದ ಬಳಕೆಗೊಳ್ಳುವ ವಸ್ತು ವಿಶೇಷಗಳನ್ನು ಒಳಗೊಂಡಂತೆ ಸಮಗ್ರವನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಇದು ಪ್ರಜ್ಞಾಪೂರ್ವಕವಾಗಿ ಉಳಿಸಿಕೊಂಡು ಬಂದುದಾಗಿರುತ್ತದೆ ನಾಡಿನ ಪ್ರಸಿದ್ಧ ಸಂಸ್ಕೃತಿ ಚಿಂತಕರಾದ, ಶಂಬಾ ಜೋಷಿಯವರು ಸಂಸ್ಕೃತಿಯು ಅಂತರಂಗ ಭಾವಬುದ್ಧಿಗೆ ಸಂಬಂಧಿಸಿದೆ; ಇದೇ ಮೇರೆಗೆ ಈ ಸುಸಂಸ್ಕೃತ ಭಾವಬುದ್ಧಿಯಿಂದ ನಿರ್ಮಿತ ವಸ್ತುವಿಷಯಗಳಿಗೂ

ಸಂಬಂಧಿಸಿದೆ ಎಂದು ಹೇಳುತ್ತಾರೆ. ಅಂದರೆ ಸಂಸ್ಕೃತಿ ಎಂಬುದು ಅಂತರಂಗದ ಆಲೋಚನೆ ಮತ್ತು ಬಹಿರಂಗದ ನಡವಳಿಕೆ. ಈ ಎರಡನ್ನು ಒಳಗೊಳ್ಳುತ್ತದೆ ಎಂಬುದು ಇಲ್ಲಿ ವಿದಿತವಾಗುತ್ತದೆ. ಇಲ್ಲಿ ಸುಸಂಸ್ಕೃತ ಎಂಬ ಪದವೇ ಮತ್ತೇ ಹಲವು ಚರ್ಚೆಗಳಿಗೆ ಆಸ್ಪದ ಮಾಡಿಕೊಡುತ್ತದೆ. ಕಾರಣ ಒಬ್ಬರಿಗೆ ಸುಸಂಸ್ಕೃತ ಎನಿಸಿದ್ದು ಮತ್ತೊಂದು ನೆಲೆಯಲ್ಲಿರುವವರಿಗೆ ಬರ್ಬರ, ಕಿರಾತಕ, ಎನಿಸಬಹುದಲ್ಲವೇ? ಒಟ್ಟು ಸಮುದಾಯವೊಂದರ ಅಂತರಂಗಿಕ ಆಲೋಚನೆಗಳ ಫಲಶೃತಿಯೇ ಕಾರಣವಾಗಿ ರೂಪುಗೊಂಡ ಒಟ್ಟು ವಿಧಿ, ವಿಧಾನಗಳನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಬಹುದೆನಿಸುತ್ತದೆ. ಹಲವು ವಿವರಗಳಿಂದ ಕೂಡದ ಬದುಕನ್ನು ವ್ಯವಹಾರಿಕವಾಗಿ ನೋಡಹೊರಟಾಗ ಈ ವ್ಯವಹಾರಿಕತೆ ಎಂಬುದು ಇಲ್ಲಿ ಆ ಸಮುದಾಯದ ಅನ್ನದ ಅವಶ್ಯಕತೆಯೂ ಆಗಿರುತ್ತದೆ. ಬೇಟೆ ಮೂಲ ವಿಧಾನವಾಗಿದ್ದು ಅಲ್ಲಿಂದ ನಂತರದಲ್ಲಿ ಬೇರೆ ಬೇರೆ ವಿಧಾನಗಳನ್ನು ರೂಢಿಸಿಕೊಂಡು ಬಂದಿರುವಾಗ ಈ ವಿಧಾನವೂ ಸಂಸ್ಕೃತಿಯ ಒಂದು ಭಾಗವಾಗಿರುತ್ತದೆ. ಇದೇ ಸಂಸ್ಕೃತಿಯು, ಬೇಟೆ ಸಂಸ್ಕೃತಿ, ಪಶುಪಾಲಕ ಸಂಸ್ಕೃತಿ ಕೃಷಿ ಸಂಸ್ಕೃತಿ ಎಂದು ಮುಂತಾಗಿ ಕರೆಯಲ್ಪಡುತ್ತದೆ. ಪ್ರಧಾನವಾಗಿ ಅಂದರೆ ವೃತ್ತಿಯ ಮೂಲಕ ಸಂಬಂಧಿಸಿದ ಸಮುದಾಯದ ಸಂಸ್ಕೃತಿಯನ್ನು ಗುರುತಿಸುವ ಒಂದು ವಿಧಾನವಿದು. A Study of Archeology ಎಂಬ ಕೃತಿಯಲ್ಲಿ "ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯಗಳಿಸಿಕೊಂಡ ಜ್ಞಾನ ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ ಎಂದು ಟೈಲರ್ ಸಂಸ್ಕೃತಿಯ ಅರ್ಥವನ್ನು ವ್ಯಾಖ್ಯಾನಿಸುತ್ತಾನೆ. ಈ ಮೂಲಕವಾಗಿಯೂ ಇದು ಒಂದು ಸಾಮೂಹಿಕ ಪ್ರಕ್ರಿಯೆಯಾಗಿರುತ್ತದೆ ಮತ್ತು ಅಂತರಂಗದ ಆಲೋಚನೆ ಮತ್ತು ಬಹಿರ್ಮುಖದ ನಡವಳಿಕೆ ಎರಡಕ್ಕೂ ಸಂಬಂಧಿಸಿದ್ದಾಗಿರುತ್ತದೆ. ಸಮುದಾಯದ ಅನನ್ಯತೆಯ ದರ್ಶನವಾಗುತ್ತದೆ. ಬೇಟೆ ಮತ್ತು ಪಶುಪಾಲನೆಗಳು ಒಟ್ಟು ಬದುಕನ್ನು ಹೇಗೆ ರೂಪಿಸಿವೆ. ಆಚರಣೆ, ನಂಬಿಕೆಗಳ ಮೇಲೆ ಪ್ರಭಾವ ಬೀರಿವೆ ಎಂಬುದನ್ನು ಸಂಬಂಧಿಸಿದ ವಿವರಗಳ ಮೂಲಕ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಕಳೆದ ಮೂರು ದಶಕಗಳಲ್ಲಿ ಭಾರತೀಯ ಗತದ ಬಗ್ಗೆ ಭಿನ್ನ ಭಿನ್ನ ರೀತಿಯಲ್ಲಿ ಹಲವಾರು ನಂಬಿಕೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿಯ ಕೆಲವು ನಂಬಿಕೆಗಳು ಒಪ್ಪಿತವಾಗಿ, ದೇಶದ ಸಾಂಸ್ಕೃತಿಕ ಪರಂಪರೆಯ ಭಾಗವಾಗಿಯೂ ಅಸ್ತಿತ್ವ ಪಡೆದುಕೊಂಡಿವೆ. ಇದರಿಂದಾಗಿ ಪರಂಪರೆಯ ಹೆಗ್ಗುರುತನ್ನು ತಂದು ಕೊಟ್ಟಿದೆ. ಇದು ಸಮಾಜದ ಅಸ್ಮಿತೆಯ ಭಾಗವಾದಗ ಇತಿಹಾಸಕಾರರು ಹುಡುಕುತ್ತ ತೊಡಗುತ್ತಾರೆ, ವಿಶೇಷವಾಗಿ ಸಾಂಸ್ಕೃತಿಕ ಇತಿಹಾಸಕಾರರು ಇದೊಂದು ಸಿದ್ಧಾಂತವೆಂಬಂತೆ ಒಪ್ಪಿಕೊಳ್ಳುತ್ತಾರೆ. ಇತಿಹಾಸಕಾರರಿಗೂ ಇದು ಅತ್ಯವಶ್ಯಕವಾಗಿ ಕಾಣುವುದರಲ್ಲಿ ಅನುಮಾನವಿಲ್ಲ ಕಾರಣ ಪರಂಪರೆಯ ಹರಿವು, ಒಪ್ಪಿಕೊಂಡಿರುವಿಕೆ, ಮುಂತಾದ ವಿಷಯಗಳು. ಇದರಿಂದಾಗಿ 'ಕಾಲದ'ಕುರಿತಾದ ಸಮಸ್ಯೆಯು ಕೊಂಚ ಮಟ್ಟಿಗೆ ಬಗೆಹರಿದಂತೆ ಕಾಣುತ್ತದೆ. ಇದರಿಂದಾಗಿ ಗತದ ಬಗೆಗಿನ ಮಾಹಿತಿಯನ್ನು ಅಷೇ ಅಲ್ಲದೇ ಗತದಲ್ಲಾದ ಬದಲಾವಣೆಗಳನ್ನು

ಕೂಡ ಗಮನಿಸಬಹುದು, ಜೊತೆಗೆ ಗತದ ಬಗ್ಗೆ ಹೊಸ ಮಾಹಿತಿಯನ್ನು ನೀಡುವುದರೊಂದಿಗೆ ಗತದ ಬಗ್ಗೆ ಪುನರ್ ಪರಿಶೀಲಿಸಬಹುದು.

'ಸಂಸ್ಕೃತಿಯ' ಚರ್ಚೆಯ ಸಂದರ್ಭದಲ್ಲಿ ಈ 'ಸಾಂಸ್ಕೃತಿಕ ಇತಿಹಾಸದ'ಚರ್ಚೆಯು ವ್ಯಾಪಕತೆಯನ್ನು ಪಡೆದುಕೊಂಡಿರುವುದು ಇತ್ತೀಚಿನ ದಶಕಗಳಲ್ಲಿ. ಇದರ ಜೊತೆಗೆ 'ಪರಂಪರೆ'ಯ ಚರ್ಚೆಯು ಶುರುವಾಯಿತ್ತಾದರೂ ಇದರ ಕುರಿತಾದ ಹೊಸ ಹೊಸ ನಿರ್ವಚನೆಗಳು ಕೂಡ ಶುರುವಾದವು. 'ಸಂಸ್ಕೃತಿ' ಮತ್ತು'ಪರಂಪರೆ'ಗಳು ಎರಡೂ ಒಂದೇ ಎಂಬ ಅಭಿಪ್ರಾಯಕ್ಕೆ ಬರಲಾಯಿತು.

'ಸಂಸ್ಕೃತಿ' ಎಂಬ ಶಬ್ದವು ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಇದರ ಪ್ರಾಥಮಿಕ ತಿಳುವಳಿಕೆ ಎಂದರೆ .'ಕೃಷಿ'ಮಾಡುವುದಾಗಿದೆ. ಇದು culture ಶಬ್ದದಿಂದ ಬಂದಿದೆ. ಇದು kulture ಎಂಬ ಜರ್ಮನ್ ಪದದಿಂದ ಬಂದಿದೆ. culture-cultivate- ಅಂದರೆ ಕೃಷಿ ಎಂದರ್ಥ ಇತ್ತಿಚೀನ ದಿನಗಳಲ್ಲಿ ಮಾನವನ ಮನಸ್ಸನ್ನು ಕೃಷಿ ಮಾಡುವುದು ಎಂದೂ ಅರ್ಥ ಪಡೆದುಕೊಂಡಿದೆ. ೧೮ ಮತ್ತು ೧೯ನೇ ಶತಮಾನದ ಇತಿಹಾಸಕಾರರಲ್ಲಿ 'ಸಂಸ್ಕೃತಿ' ಮತ್ತು 'ನಾಗರೀಕತೆ'ಗಳೆರಡೂ ಪರ್ಯಾಯ ಪದಗಳಾಗಿದ್ದವು. ಅಂದರೆ, ಸಂಸ್ಕೃತಿ ಎಂಬುದು ಸಮಾಜದಲ್ಲಿನ ಉನ್ನತ ಗುಂಪುಗಳ ಸಂಘ ಸಂಗಮವಾಗಿತ್ತು, ಎಂಬುದು ಗೊತ್ತಾಗುತ್ತದೆ. ಇದರ 'ಕೊರತೆ'ಯುಳ್ಳ ಮಿತಿಯು ಹೇಗೆ ಇದನ್ನು ಮರು ವ್ಯಾಖ್ಯಾನಿಸಲು ಮತ್ತು ಜೀವನದ ನಡೆತೆಯ ಪ್ರತಿ ವಿನ್ಯಾಸದಲ್ಲೂ ಸಹಕಾರಿಯಾಗುತ್ತದೆ ಎಂಬುದು ಮುಖ್ಯ. ಆದ್ದರಿಂದ ಸಂಸ್ಕೃತಿ ಎಂಬುದು ನಡೆತೆಯ ವಿನ್ಯಾಸವನ್ನು ಮತ್ತು ಸಾಮಾಜಿಕವಾಗಿ ಆವರಿಸಿಕೊಂಡಿರುವ, ಸಾಮಾಜಿಕ ವಾಗಿ ವರ್ಗಾವಣೆಗೊಂಡಿರುವ "ಚಿಹ್ನೆ"ಯಾಗಿದೆ. ಇದು ಭಾಷೆ, ಪರಂಪರೆ, ಆಚಾರ ವಿಚಾರ, ಸಾಮಾಜಿಕ ಸಂಸ್ಥೆಗಳನ್ನು ಒಳಗೊಂಡಿದೆ. ಈ ಕಾರಣಕ್ಕಾಗಿಯಾದರೂ ಇದನ್ನು ವಿಶಾಲಾರ್ಥದಲ್ಲಿ ಬಳಸಬಹುದು. ಮುಂದೆ ಸಂಸ್ಕೃತಿಯು ಪರಂಪರೆಯೊಂದಿಗಿನ ಸಂದರ್ಭದಲ್ಲಿ ಗತವನ್ನು ವರ್ತಮಾನದೊಂದಿಗೆ ಬೆಸೆಯುತ್ತದೆ. ಹಾಗಾಗಿ ಇದು ಗಮನಾರ್ಹವಾದ ಸಾಂಸ್ಕೃತಿಕ ರೂಪಗಳೊಂದಿಗೆ ಚಾರಿತ್ರಿಕ ಸಂದರ್ಭ ಹೊಂದಿದೆ.

ಚಾರಿತ್ರಿಕ 'ಪ್ರಕ್ರಿಯೆ'ಯು ಸಂಸ್ಕೃತಿಯ ವ್ಯಾಖ್ಯಾನದಲ್ಲಿ ನಿರ್ಣಾಯಕವಾದುದು, ಈ ಕ್ರಮದಲ್ಲಿ ಭಾರತೀಯ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಸ್ವಲ್ಪ ಕಷ್ಟವೆನ್ನಿಸುತ್ತದೆ. ಸಂಸ್ಕೃತಿಯ ವ್ಯಾಖ್ಯಾನದ ಚಾರಿತ್ರಿಕ ಪ್ರಕ್ರಿಯೆಯು ತುಂಬಾ ತಂತ್ರಗಾರಿಕೆಯಿಂದ ಕೂಡಿದ್ದು ಮತ್ತು ಉಳಿದದ್ದು ವ್ಯಾಪಕವಾಗಿ ಕಳೆದ ಶತಕದಿಂದಲೂ ಬದಲಾವಣೆ ಗೊಳಪಡಲಾರದ್ದು, ಅಥವಾ ಅಸಂಸ್ಕೃತಿಯು ಒಂದು ಕಾಲದ ಘಟನೆ ಅದು ಉಳಿದದ್ದರ ಗೋಜಿಗೆ ಹೋಗದೆ ಗತದ ಜೊತೆಗಿನ ವರ್ತಮಾನದ ಸಂಬಂಧವನ್ನು ಹೊಂದಿರುವಂತಹದ್ದು ಎಂಬುದು ಒಂದು ಊಹೆ ಹೇಳುತ್ತದೆ. ಚಾರಿತ್ರಿಕ ಸಂಗತಿಗಳ ಆಧಾರದ ಮೇಲೆ ಪತ್ರಿಕೆಯ ಸಂಪಾದಕರಿಂದ ಪ್ರಧಾನ ಮಂತ್ರಿಯವರೆಗೆ ತಮ್ಮದೇ ಶೈಲಿಯಲ್ಲಿ ಸಂಸ್ಕೃತಿಯನ್ನು ಕುರಿತು ಮಾತಾಡುತ್ತಾರೆ. ಆದರೆ ಇಂದು ಕೆಲವೇ ಕೆಲವು ಜನ ಇತಿಹಾಸಕಾರರು ಈ ಸಾಂಸ್ಕೃತಿಕ ರೂಪಗಳು ಮತ್ತು

ಸಾಂಸ್ಕೃತಿಕ ಸಂಸ್ಥೆಗಳ ಕುರಿತು ಮಾತಾಡುತ್ತಿದ್ದಾರೆ, ವ್ಯಾಖ್ಯಾನಿಸುತ್ತಾ ಅವುಗಳನ್ನು ವಿಸ್ತರಿಸುತ್ತಿದ್ದಾರೆ. ಸಾಂಸ್ಕೃತಿಕ ಇತಿಹಾಸ ಮತ್ತು ಅದರ ವ್ಯಾಖ್ಯಾನಗಳನ್ನು ಅವುಗಳ ಸೃಷ್ಟಿ ಕರ್ತರು ಅಕ್ಕ-ಪಕ್ಕದಲ್ಲಿಟ್ಟು ಅವುಗಳ ಸಾಮಾಜಿಕ ಸಂಕೇತಗಳೆಂಬಂತೆ ನೋಡುತ್ತಿದ್ದಾರೆ.

ಸಾಂಸ್ಕೃತಿಕ ಮುಂದುವರಿಕೆಯು ಸಾಮಾನ್ಯವಾಗಿ ಪರಂಪರೆಯೊಂದಿಗೆ ಸಂಬಂಧ ಹೊಂದಿರುತ್ತದೆ. ಇದು ಸಾಂಸ್ಕೃತಿಕ ರೂಪಗಳಿಗೆ ಕಾರಣವಾಗುತ್ತದೆ ಪರಂಪರೆಯನ್ನು ಜ್ಞಾನದ ವರ್ಗಾವಣೆ, ಅಥವಾ ದತ್ತು, ಸ್ವೀಕೃತಗಳ ಕಳೆದು ಹೋಗುವಿಕೆಯ ತಂತ್ರ ಎಂದು ಕರೆಯಲಾಗಿದೆ. ಸಾಂಸ್ಕೃತಿಕ ಇತಿಹಾಸ ಎಂದರೆ ಪರಂಪರೆಯ ವ್ಯಾಖ್ಯಾನ ಮತ್ತು ಇತಿಹಾಸಜ್ಞರು ಪರಂಪರೆಯ ಕುರಿತು ಏನನ್ನು ಹೇಳುತ್ತಾರೆ ಎಂಬುದೇ ಆಗಿದೆ. ಇನ್ನೊಂದು ಮುಖ್ಯ ವಿಚಾರವೆಂದರೆ ಪರಂಪರೆ ಎಂಬುದು ವರ್ಗಾವಣೆಗೊಂಡು, ರೂಪಾಂತರಗೊಳ್ಳದ ಸಂಪ್ರದಾಯವಾಗಿದೆ. ಅದು ಅದರ ಮೂಲ ರೂಪವು ಆಗಿದೆ. ಹೇಗೆಂದರೆ, ಕೇವಲ ಪರಂಪರೆಯ ಸಾಂಪ್ರದಾಯಿಕ ಬದಲಾವಣೆಯು ಪ್ರತಿಯೊಂದು ಜ್ಞಾಪಕತೆಯ ಜೊತೆಗೆ ಅತೀಸೂಕ್ಷ್ಮವಾಗಿ ಅಂತರ್ ಧೃವೀಕರಣಗೊಂಡಿರುತ್ತದೆ. ಈ ಹಂತದಲ್ಲಿ ಇದು ಅದರ ಬೇರೆ ಬೇರೆ ಸಾಧನಗಳನ್ನು ಬಳಸಿಕೊಂಡಿರುತ್ತದೆ, ಆ ಸಾಧನಗಳಲ್ಲಿ 'ಬದಲಾವಣೆ' ಮುಖ್ಯ ಸಾಧನವಾಗಿದೆ. ಪರಂಪರೆಯ ಬೇರೆ ಬೇರೆ ಘಟ್ಟಗಳನ್ನು ನೋಡುವುದಾದರೆ; 'ಪರಂಪರೆಯ' ಪರಿಕಲ್ಪನೆಯು ಒಂದು ಹಂತದಲ್ಲಿ ಅದರ ಹೆಪ್ಪುಗಟ್ಟಿ ಜ್ಞಾನವನ್ನು ಸೂಚಿಸುತ್ತದೆ, ಅಲ್ಲದೆ ಅದು ಹಲವಾರು ಸಂಶೋಧನೆಗಳ ಮೇಲೂ ಪ್ರಕಟಿಸುತ್ತದೆ. ಇವತ್ತಿನ ನಂಬಿಕೆಗಳು ವಿಶಾಲವಾದ ಪರಂಪರೆಯನ್ನು ಹೊಂದಿರುವುದು ಅವುಗಳು ನಿನ್ನೆಯ ಸಂಶೋಧನೆಯ ಪ್ರತಿಫಲಗಳೇ ಆಗಿವೆ. ಬೇರೆ ಶಬ್ದಗಳಲ್ಲಿ ಹೇಳುವುದಾದರೆ ಪರಂಪರೆಯು ಸಮಕಾಲೀನ ಸಂದರ್ಭದ ಬೇಕು-ಬೇಡಗಳನ್ನು ನಿರ್ಧರಿಸುವ ಗತ ಸಂಪ್ರದಾಯವಾಗಿದೆ. ಜೊತೆಗೆ ಗತದ ಕುರಿತು ವ್ಯಾಖ್ಯಾನವೂ ಕೂಡ ಪಾರಂಪರಿಕ ಜ್ಞಾನವನ್ನು ಸೂಚಿಸುತ್ತದೆ .

ಅಂಗೀಕೃತವಾದ ಮೌಲ್ಯಗಳು ಮತ್ತು ಸಾಮಾಜಿಕ ಸತ್ಯದ ಮಧ್ಯೆ ಬೇರ್ಪಟ್ಟಿರುವ ಸಾಕ್ಷ್ಯಗಳು ಆಗ್ಗಾಗ್ಗೆ ಆಶ್ಚರ್ಯವನ್ನುಂಟು ಮಾಡುತ್ತವೆ ಅಲ್ಲದೆ, ಇವುಗಳು ಸಾಮಾಜಿಕ ಸತ್ಯದ ವಿವರಣೆಯನ್ನು ಕೊಡುತ್ತವೆ. ಆದರೆ ಬಾಹ್ಯ ಸತ್ಯದ ಸಿದ್ಧಾಂತ ಮತ್ತು ಸಾಮಾಜಿಕ ಸತ್ಯವನ್ನು ಅರಿಯಲು ಇದರ ವಿಶ್ಲೇಷಣೆ ತುಂಬಾ ಅವಶ್ಯಕ ಎನಿಸುತ್ತದೆ. ಹಾಗೆಯೇ, ಸ್ಥಳೀಯ ಸಂಸ್ಕೃತಿಯ ಒಳ ಪ್ರವಾಹಗಳನ್ನು ತಡೆಹಿಡಿಯುವುದಂತೂ ಸಾಧ್ಯವಿಲ್ಲ. ಅದು ದೇಹದ ರಕ್ತದೊಡನೆ ಬೆರೆತದ್ದು, ಹೊರಗಿನದು ಸದ್ಯದ ಪುಷ್ಟಿಗಾಗಿ ನೀಡುವ ಕೇವಲ ಗ್ಲೂಕೋಸ್‌ನಂತೆ. ಇದಕ್ಕೆ ತೀರಾ ಇತ್ತೀಚಿನ ಉದಾಹರಣೆ ವೀರಶೈವ ಧರ್ಮ, ಹನ್ನೆರಡನೆ ಶತಮಾನದ ಆದರ್ಶಕ್ಕೆ ಅನೇಕ ಕೆಳವರ್ಗಗಳು ಬೆಂಬಲ ಕೊಟ್ಟವು ನಿಜ. ಆದರೆ, ಅದೂ ಒಂದು ಸಾಂಸ್ಥಿಕ ರೂಪ ಪಡೆದು, ಆದರ್ಶಗಳ ಚೌಕಟ್ಟು ಮೀರಿ ಜಾತಿಗೆ ಪರಿವರ್ತನೆಯಾದಾಗ ಅನೇಕಾನೇಕ ಕೆಳವರ್ಗಗಳು ಅದರಿಂದ ಹಿಂದೆ ಸರಿದವು. ತಮ್ಮದಲ್ಲದ ಜೀವನ ಕ್ರಮ ಮತ್ತು ಅವರಿಗೆ

ಹಿಡಿಸಲಿಲ್ಲ. ಇದರ ಪರಿಣಾಮವೇ ಮಂಟೇಸ್ವಾಮಿ ಮತ್ತು ಮಾದೇಶ್ವರ ಸಂಪ್ರದಾಯಗಳು. ಕಲ್ಯಾಣದ ಶರಣು ಮಾಂಸ, ಮದ್ಯ ಇತ್ಯಾದಿ ಜೀವನ ಪ್ರೀತಿ ವಿಚಾರಗಳನ್ನು ತೊರೆದು. ಹಲವು ಕಟ್ಟುಪಾಡುಗಳನ್ನು ಹಾಕಿಕೊಳ್ಳುವ ಮೂಲಕ ತಮ್ಮನ್ನು ತಾವೇ ನಿಯಂತ್ರಿಸಿಕೊಂಡರು. ಒಂದು ರೀತಿಯಲ್ಲಿ ಬ್ರಾಹ್ಮಣರ ಶಿಷ್ಟ ಸಂಸ್ಕೃತಿಗಿಂತ ತಾವೇನು ಕಡಿಮೆ ಎಂಬ ರೀತಿಯಲ್ಲಿ ಎಲ್ಲವನ್ನು ವರ್ಜಿಸಿ ಇನ್ನೊಂದು ರೀತಿಯ ಶಿಷ್ಟವೇ ಆದರು. ಇಂಥ ಸಾಂಸ್ಕೃತಿಕ ಅಧಿಪತ್ಯವನ್ನು ಒಪ್ಪಿಕೊಂಡು ಹಾಗೂ ಅದನ್ನು ಮೀರದಿರುವ ಕುರುಹಿಗಾಗಿ 'ಲಿಂಗ' ಎಂಬ ಭೌತಿಕ ಸಂಕೇತವನ್ನು ಬಹಿರಂಗವಾಗಿ ಕಟ್ಟಿಕೊಂಡರು. ಈ ಎಲ್ಲ ಸಂಗತಿಗಳ ಮೂಲಕ ಒಂದು ಬಂಧನದ ಗೆರೆಗೆ ಒಳಪಟ್ಟರು. ಆದರೆ ಇಂಡಿಯಾದ ಕೆಳವರ್ಗಗಳು ಅಥವಾ ಬುಡಕಟ್ಟು ಜನರು ಮಧ್ಯ, ಮಾಂಸ, ಭಂಗಿ, ಹಾಗೂ ಮೈಥುನಗಳಂಥ ಚೈತನ್ಯದಾಯಕ ವಿಚಾರಗಳನ್ನು ಎಂದೂ ತ್ಯಜಿಸುವರಲ್ಲ. ಆದರಿಂದ್ದ ಅಂಥ ಕಟ್ಟುಪಾಡುಗಳಿಂದ ಸಿಡಿದು ಹೊರ ಬಂದು ಮತ್ತೆ ತಮ್ಮ ಪ್ರೀತಿಯ ಕಾಡುಗಳನ್ನೇ ಆಶ್ರಮಿಸಿದ ಸಂಕೇತ ಮೂರ್ತಿಗಳಾಗಿ ಇವತ್ತು ಮಲೆಮಾದೇಶ್ವರ ಮತ್ತು ಮಂಟೇಸ್ವಾಮಿ ನಮಗೆ ಕಂಡು ಬರುತ್ತಾರೆ. ನಾವೆಲ್ಲಾ ಹಿಂದೂ ಎಂಬ ಕಲ್ಪನೆ ಕೂಡ ಇಂಥದ್ದೇ ನಮ್ಮ ವಿದ್ವಾಂಸರ ಆಶಯಗಳ ಪ್ರಕಾರ ಇದೀಗ ವಿಸ್ಮೃತಿಯಿಂದ ಹೊರ ಬರುತ್ತಿರುವ ಸ್ಥಳೀಯ ಜ್ಞಾನ ಪರಂಪರೆ ಮತ್ತು ಬಹುಮುಖೀ ಸಂಸ್ಕೃತಿಗಳ ನೈಜ ತತ್ವಗಳು ಈ ಹಿಂದೂ ಎಂಬ ಭ್ರಮಾತ್ಮಕ ಕಲ್ಪನೆಯನ್ನು ಛಿದ್ರಗೊಳಿಸುವ ನಿಟ್ಟಿನಲ್ಲಿವೆ. ಅಂದಾಕ್ಷಣ ಇದು ನಾಳೆಯೇ ನಡೆದು ಹೋಗುತ್ತದೆಯಲ್ಲ. ಕಾಲ ಪಕ್ವಗೊಂಡಾಗ ಅಂಥ ಪ್ರಕ್ರಿಯೆಗಳು ತಮ್ಮಷ್ಟೇಕ್ಕೆ ತಾವೇ ನಡೆದು ಹೋಗುತ್ತವೆ. (ಹಿಚಿ.ಬೋರಲಿಂಗಯ್ಯ, ವಿಸ್ಮೃತಿ ಮತ್ತು ಸಂಸ್ಕೃತಿ, ಪು:೬೦) ಇಲ್ಲಿ ಪರಂಪರೆಯಿಂದಲೇ ಈ ಪ್ರಕ್ರಿಯೆಗಳಿಗೆ ಚಾಲನೆ ಸಿಕ್ಕಿರುತ್ತದೆ. ಜನಪದ ಸಮಾಜದಲ್ಲಿ ಪ್ರತಿಯೊಂದು ಪ್ರಕ್ರಿಯೆಯು ಪರಂಪರೆಯ ಉತ್ಪನ್ನವೇ ಆಗಿರುತ್ತದೆ. ಹಾಗಾಗಿಯೇ ಮೌಖಿಕತೆಯು ಜನಪದ ಸಮಾಜದಲ್ಲಿ ಪ್ರಕ್ರಿಯೆಯ ಬಹುದೊಡ್ಡ ಉತ್ಪನ್ನವೇ ಆಗಿರುತ್ತದೆ. ವಾಸ್ತವದಲ್ಲಿ ಅಂದರೆ ಹೊರ ಜಗತ್ತಿಗೆ ಮರೆತಂತಿರುವ ನೈಜ ತತ್ವಗಳನ್ನು ಮತ್ತೆ ಮತ್ತೆ ನೆನಪು ಮಾಡಿಕೊಡುವ ಪ್ರಕ್ರಿಯೆಯಾಗಿದೆ ಇದು. 

ಈ ಕ್ರಿಯೆ ಪ್ರಕ್ರಿಯೆಗೆ ಹಲವಾರು ಆಯಾಮಗಳಿವೆ. ಅಂದರೆ, ನೇರವಾಗಿ ಪರಂಪರೆ ಎಂಬುದು ಹಲವಾರು ಆಯಾಮಗಳನ್ನು ಒಳಗೊಂಡಿದೆ ಎಂಬಂತಾಗುತ್ತದೆ. ಆ ಎಲ್ಲಾ ಆಯಾಮಗಳಲ್ಲಿ ಸಾಮಾಜಿಕ ಆಯಾಮವೂ ಒಂದು. ಅಂದರೆ ಸಾಮಾಜಿಕ ಮೌಲ್ಯಗಳಲ್ಲಿ ಈ ಪರಂಪರೆಯ ಸಾಮಾಜಿಕ ಆಯಾಮವನ್ನು ಕಾಣುತ್ತೇವೆ. ಇಲ್ಲಿ ಸಾಮಾಜಿಕ ಮೌಲ್ಯ ಎಂದಾಕ್ಷಣ ಸಮಾಜದ ಎಲ್ಲಾ ಇತ್ಯಾತ್ಮಕ ಅಂಶಗಳೇ ಆಗಬೇಕೆಂದೇನಿಲ್ಲ. ಬದಲಿಗೆ ನೇತ್ಯಾತ್ಮಕ ಅಂಶಗಳೂ ಇರುತ್ತವೆ. ಸಮಾಜವನ್ನು ತಿದ್ದುವ ಮತ್ತು ತಪ್ಪು ದಾರಿಗೆ ಎಳೆಯುವ ಎರಡೂ ರೀತಿಯ ಕಾರ್ಯವನ್ನು ಈ ಅಂಶಗಳು ಮಾಡುತ್ತವೆ. ಸತಿ ಪದ್ಧತಿ ಸಮಾಜದಲ್ಲಿಯ ಓರೆ-ಕೋರೆಗಳನ್ನು ಪ್ರತಿನಿಧಿಸುತ್ತದೆ. ಈ ಸಲೆ ಪದ್ಧತಿಗೆ ಮೂಲ ಬೇರಾಗಿ ಬಂದಿದ್ದು ಅಸ್ತಿಯ ಕಲ್ಪನೆ. ಈ ಅಸ್ತಿಯ ಕಲ್ಪನೆಯ ಪರಿಣಾಮವಾಗಿ ನಾನು, ನನ್ನದೆಂಬ ಹಂಬಲ, ಅಹಂಕಾರ

ಸಮುದಾಯದಲ್ಲಿ ಗಟ್ಟಿಯಾಗಿ ಬೇರೂರ ತೊಡಗಿತು. ಹೀಗೆ ತನಗೆ ಸೇರಿದ್ದನ್ನು ತನ್ನ ಮುಂದಿನ ಪೀಳಿಗೆಗೆ ತೆಗೆದಿಡುವ ಪರಿಪಾಠವೂ ಬೆಳೆಯ ತೊಡಗಿತು. ತನಗೆ ಸೇರಿದ್ದು ಬೇರೆ ಯಾರಿಗೂ ದಕ್ಕಬಾರದು, ಅದು ನನ್ನ ಜೊತೆಗೆಯೇ ನಾಶ ಹೊಂದಬೇಕು. ಅದನ್ನು ನಾನು ಮಾತ್ರ ಅನುಭವಿಸಬೇಕು ಎಂಬ ಆಕಾಂಕ್ಷೆ ಮನಸ್ಸಿನಲ್ಲಿ ಮೂಡತೊಡಗಿತು. ಹೀಗೆ ಈ ಆಕಾಂಕ್ಷೆ ಕ್ರಮೇಣ ಹೆಣ್ಣು ಕೂಡ ನನ್ನ 'ಆಸ್ತಿ' ಎಂಬ ಕಲ್ಪನೆಯನ್ನು ಮೂಡಿಸಿತು ಈ 'ಆಸ್ತಿ'ಯ ಕಲ್ಪನೆ ಆಕೆಯ 'ಶೀಲ'ವನ್ನೂ ಆಸ್ತಿಯ ಪರಿಭಾವನೆಯಲ್ಲಿ ಪರಿಭಾವಿಸಿಕೊಳ್ಳಲು ಕಾರಣವಾಯಿತು. ಇದರ ಪರಿಣಾಮವಾಗಿಯೇ ಸಮಾಜದಲ್ಲಿ ಸತಿಯಂತಹ ಕಠೋರ ಆಚರಣೆಗಳು ಜಾರಿಗೆ ಬಂದವು. ಆಸ್ತಿಯ ಸಮೃದ್ಧತೆ ಮತ್ತು ರಕ್ಷಣೆಯ ಭಾಗವಾಗಿ ಕೆರೆ, ಬಾವಿ, ನಿರ್ಮಿಸುವ ಕೆಲಸವೂ ಆರಂಭವಾಯಿತು. ಇವುಗಳು ಶಿಥಿಲಗೊಳ್ಳದಿರಲು ಗರ್ಭವತಿಯರ, ಅಥವಾ ಕಿರಿ ಸೊಸೆಯರ 'ಹಾರ' ಬೇಡುವ ಸನ್ನಿವೇಶಗಳನ್ನು ಸೃಷ್ಟಿಸಿ ಆಕೆಯನ್ನು 'ಆತ್ಮಬಲಿ'ಗೆ ಪ್ರಚೋದಿಸುವಂತಹ ಕೆಲಸ ಕಾರ್ಯಗಳು ನಡೆದವು. ಇದರ ಕಾರಣವಾಗಿ 'ಆತ್ಮಬಲಿ' ಜಾರಿಗೆ ಬಂತು. ಇದಕ್ಕೆ ಜನಪದ ಸಾಹಿತ್ಯದಲ್ಲಿ ಅನೇಕ ಉದಾಹರಣೆಗಳು ಸಿಗುತ್ತವೆ. ಭಾಗೀರತಿ, ಕೆರೆಹೊನ್ನಮ್ಮ, ಹುಳಿಯಾರು ಕೆಂಚಮ್ಮ, ಈರೋಬಿ, ಬಂದಮ್ಮ, ಹೀಗೆ ಮುಂತಾದ ನಾಯಕಿಯರೆಲ್ಲ ದುರಂತ, ನತದೃಷ್ಟ ನಾಯಕಿಯರೇ, ಇದು ವಸಹಾತುಷಾಹಿ, ಊಳಿಗಮಾನ್ಯ ವ್ಯವಸ್ಥೆಗಳು ಸೃಷ್ಟಿಸಿದ ಸಾಮಾಜಿಕ ವಿಪ್ಲವ, ಹಾಗೆಯೇ ಈ ಮೌಲ್ಯಗಳು ಸಮಾಜದಲ್ಲಿ ಪುರೋಹಿತಷಾಹಿಗಳು ಹೇರಿದ ಮೌಲ್ಯಗಳಾಗಿವೆ. ಈ ಮೌಲ್ಯಗಳನ್ನು, ಕಟ್ಟು ಪಾಡುಗಳನ್ನು ಜನಪದ ಸಮಾಜವು ಎಂದಿಗೂ ಒಪ್ಪಿಕೊಳ್ಳುವುದಿಲ್ಲ ಬದಲಿಗೆ ಇದನ್ನು ಹೇರಿಕೆಯಾಗಿಯೇ ಸ್ವೀಕರಿಸುತ್ತದೆ. ಇವುಗಳನ್ನು ಪುರೋಹಿತಷಾಹಿ ವರ್ಗ ಮಾತ್ರ ಒಪ್ಪಿ ಸ್ವೀಕರಿಸಿರುತ್ತದೆ. ಅದರಲ್ಲಿ ಒಂದು ಸ್ವಾರ್ಥ ವಿರುವ ಕಾರಣಕ್ಕೆ, ಅಂದರೆ ಆ ಮುಖಾಂತರ ತನ್ನ ಸ್ವಾರ್ಥ ಸಾಧಿಸಿಕೊಳ್ಳುತ್ತದೆ. ತಳ ಸಮುದಾಯಗಳ ಮೇಲೆ ಈ ಮೌಲ್ಯಗಳನ್ನು ಹೇರುವುದರ ಮೂಲಕ ತನ್ನ ಹಿಡಿತದಲ್ಲಿಟ್ಟುಕೊಳ್ಳುವುದೇ ಆ ಸ್ವಾರ್ಥ, ಈ ಎಲ್ಲಾ ಆತ್ಮಬಲಿಯಂಥ ಪ್ರಕರಣಗಳು ನಡೆದದ್ದು ಊರಿನ ಗೌಡ ಅಥವಾ ಒಡೆಯರ ಮನೆಗಳಲ್ಲಿಯೇ ಆಗಿರುವುದನ್ನು ಕಾಣಬಹುದು. ಆದರೆ ಜನ ಸಾಮಾನ್ಯರ ಮನೆಗಳಲ್ಲಿ ಎಲ್ಲಿಯೂ ಆದ ಉದಾಹರಣೆಗಳಿಲ್ಲ. ಇನ್ನೊಂದು ವಿಶೇಷ ಅಥವಾ ವಿಚಿತ್ರವಾದ ಸಂಗತಿಯೆಂದರೆ ಈ ಆತ್ಮಾಹುತಿಯ ಘಟನೆಯ ನಂತರ ಜನಸಾಮಾನ್ಯರು ಬಲಿಯಾದವಳನ್ನು ದೇವರೆಂದು, ದೈವತ್ವಕ್ಕೇರಿಸಿ ಆಕೆಯನ್ನು ಪೂಜಿಸುತ್ತಾರೆ. ಇದರಲ್ಲಿ ಯಾವುದೇ ರೀತಿಯ ವೈಭವೀಕರಣವಿರುವುದಿಲ್ಲ. ಬದಲಿಗೆ ತಮ್ಮ ಮನಸ್ಸಿನ ಮೇಲಾದ ದುಃಖ ದುಮ್ಮಾನ, ನೋವನ್ನು ಈ ಪೂಜೆಯ ಮೂಲಕ ಮರೆಯಲು ಪ್ರಯತ್ನಿಸಿದರು. ಇಲ್ಲಿ ಆಕೆಯನ್ನು ಪೂಜಿಸುವುದು ಜನ ಸಾಮಾನ್ಯರೇ ಹೊರತು ಗೌಡನಾಗಲೀ ಅಥವಾ ಒಡೆಯರಾಗಲೀ ಅಲ್ಲವೆಂಬುದು ಮುಖ್ಯವೆನಿಸುತ್ತದೆ. ಭಾಗೀರಥಿಯು ತನಗೆ ಬಲಿಗೊಡಲಾಗುತ್ತಾಳೆ. ಆದರೆ ಅಲ್ಲಿ ಆಕೆಗೆ ಯಾರಿಂದಲೂ ಸಹಾಯ ದೊರೆಯುವುದಿಲ್ಲ. ಬದಲಿಗೆ ಬಲಿಗೇರುವುದು ಅನಿವಾರ್ಯವೆಂಬಂತೆ ಎಲ್ಲರೂ ಆ ಒಪ್ಪಿತ; ಹೇರಿಕೆಯ

ಮೌಲ್ಯವನ್ನು ಪಾಲಿಸುತ್ತಾರೆ. ಅದನ್ನು ಪಾಲಿಸುವುದು ಅವಳಿಗೆ ಮತ್ತು ಇಡೀ ಜನಸಮುದಾಯಕ್ಕೆ ಗೊತ್ತಿದೆ. ಆಕೆ ಬಲಿಯಾದ ನಂತರಕ್ಕೆ ಅವಳಿಗೆ ದೈವತ್ವಕ್ಕೇರಿಸುತ್ತಾರೆ. ಅಲ್ಲಿ ಆಕೆಯನ್ನು ಬಲಿಗೇರುವಂತೆ ಮಾಡುವುದು. 'ಭೂಮಾಲೀಕ' ನಾದ್ದರಿಂದ ಅದನ್ನು ವಿರೋಧಿಸುವ ಧೈರ್ಯವನ್ನು ಯಾರೂ ತೋರುವುದಿಲ್ಲ, ಬದಲಿಗೆ ತಮ್ಮ ಮನಸ್ಸಿನಲ್ಲಿ ಉಂಟಾದ ದುಃಖ ನೋವನ್ನು ಹಾಡುಗಳ ಮೂಲಕ ವ್ಯಕ್ತ ಪಡಿಸುತ್ತಾರೆ. ಇವತ್ತಿಗೂ ಈ ಹಾಡುಗಳು ಜನ ಸಾಮಾನ್ಯರ ಮೇಲೆ ಎಂತಹ ಪರಿಣಾಮ ಬೀರಿವೆ ಎಂಬುದು ಸೂಕ್ಷ್ಮವಾಗಿ ಗಮನಿಸಿದರೆ ಗೊತ್ತಾಗುತ್ತದೆ. "ನಿಜವಾದ ಅರ್ಥದಲ್ಲಿ ಈ ರೀತಿಯಲ್ಲಿ ಇದ್ದುದ್ದನ್ನು ಇದ್ದಹಾಗೆ ಹೇಳುತ್ತಲೇ ಅಂತರಾಳದಲ್ಲಿ ಸೂಕ್ಷ್ಮವಾಗಿ ಮೂಡಿಸುವ ವ್ಯಂಗ್ಯಾರ್ಥ ಮತ್ತು ಧ್ವನ್ಯಾರ್ಥವೇ" (ಹಿ.ಚಿ.ಬೋರಲಿಂಗಯ್ಯ, ವಿಸ್ಮೃತಿ ಮತ್ತು ಸಂಸ್ಕೃತಿ, ಪು:೬೩) ಈ ಹಾಡುಗಳ ಅಂತಿಮ ಸಂದೇಶವಾಗಿರುತ್ತದೆ. ಇವುಗಳನ್ನು ಸಾಮಾಜಿಕ ಕಥನ ಗೀತೆಗಳೆಂದು ಕರೆದು ಸಾಮಾಜಿಕತೆಯ ಮೌಲ್ಯ ಪ್ರತಿಪಾದಕಗಳೆಂದು ವಿದ್ವಾಂಸರು ಗುರುತಿಸುತ್ತಾರೆ. ಇವುಗಳಿಗೆ ಪರಂಪರೆಯಲ್ಲಿ ಪ್ರಮುಖಸ್ಥಾನ ಕೊಟ್ಟಿರುವುದು ಈ ಸಾಮಾಜಿಕತೆಯ ಕಾರಣಗಳಿಂದಾಗಿಯೆ.

ಹೀಗೆ ಪರಂಪರೆಯಲ್ಲಿ ಹುಟ್ಟಿಕೊಂಡ ಎಲ್ಲಾ ಮೌಲ್ಯಗಳೂ ಸಮಾಜದಲ್ಲಿ, ಸಮುದಾಯಗಳಲ್ಲಿ ಗಟ್ಟಿಯಾಗಿ ನಿಲ್ಲುತ್ತವೆ. ಗಟ್ಟಿಯಾಗಿ ನಿಂತು ಇಡೀ ಸಮಾಜ, ಸಮುದಾಯಗಳನ್ನು ಗೋಚರಿಸುತ್ತವೆ. "ಆದರೆ, ಜನಪದ ಸಾಹಿತ್ಯವನ್ನು ಬಿಟ್ಟು ಉಳಿದ ಯಾವುದೂ ಅಂದರೆ ನಂಬಿಕೆ, ಆಚರಣೆ, ಸಂಪ್ರದಾಯ, ಹಬ್ಬ, ಹರಿದಿನ ಇತ್ಯಾದಿ ಆರಾಧನಾತ್ಮಕ ಸಾಂಸ್ಕೃತಿಕ ಅಂಶಗಳು ಬಹಳ ಕಾಲ ನಮ್ಮ ವಿದ್ವಾಂಸರ ಗಮನ ಸೆಳೆಯಲೇ ಇಲ್ಲ. ೭೦ರ ದಶಕದಿಂದೀಚೆಗೆ ಅಂಥ ಪ್ರಯತ್ನಗಳೂ ನಡೆದವು. ಸಂಸ್ಕೃತಿ ಅಧ್ಯಯನಕ್ಕೆ ಪೂರಕವಾಗಿ ಈ ಆರಾಧನಾತ್ಮಕ ಅಂಶಗಳನ್ನು ಬಳಸಿಕೊಳ್ಳುವ ಕೆಲಸ ತುಂಬ ವಿರಳವಾಗಿ ನಡೆಯಿತೆನ್ನಬಹುದು. (ಹಿ.ಚಿ.ಬೋರಲಿಂಗಯ್ಯ, ವಿಸ್ಮೃತಿ ಮತ್ತು ಸಂಸ್ಕೃತಿ, ಪು:೮೬) ಇತ್ತೀಚಿನ ದಿನಗಳಲ್ಲಿ ಸಂಸ್ಕೃತಿ ಅಧ್ಯಯನಕ್ಕೆ ಪೂರಕ ಅಂಶಗಳು ಎಂಬಂತೆ ಆಚರಣೆಗಳು, ನಂಬಿಕೆ, ವಿಧಿ ನಿಷೇಧಗಳೆಲ್ಲವನ್ನೂ ಬಳಸಿಕೊಳ್ಳಲಾಗುತ್ತಿದೆ. "ಆದರೆ ಸಾಮಾಜಿಕ, ಆರ್ಥಿಕ ಮತ್ತು ಅಧಿಕಾರದ ನೆಲೆಗಳನ್ನು ನಿಯಂತ್ರಿಸುವ ಸಹಕಾರ ವಲಯಗಳು ಮನ್ನಣೆ ಕೊಡುತ್ತಾ ಬಂದದ್ದು ಮಾತ್ರ ಸಾಹಿತ್ಯ, ಸಂಗೀತ, ಕಲೆ, ನೀತಿ, ನಿಯಮ ಎಂದು ಭಾವಿಸಿ, ಈ ವಲಯಗಳೊಂದಾಗಿ ರೂಪಿಸಿದ ಸಂಸ್ಕೃತಿ ಮಾತ್ರವೇ ಪ್ರಾತಿನಿಧಿಕವೆಂದು ಪ್ರತಿಪಾದಿಸುವುದು, ಸಂಸ್ಕೃತಿಯ ವಿವಿಧ ಬೆಡಗು ಬಣ್ಣಗಳನ್ನು ಬದಿಗೊತ್ತಿದಂತಾಗುತ್ತದೆ. ಅಷ್ಟೇ ಅಲ್ಲ, ಈ ವರ್ಗ ಒಕ್ಕೂಟವು ಸಾಮಾನ್ಯವಾಗಿ ಸ್ಥಿರಗೊಂಡ ನೆಲೆಗಳನ್ನೇ ಸಂಸ್ಕೃತಿಯ ನಮೂನೆಗಳೆಂದು ಪ್ರಚಾರಪಡಿಸುತ್ತದೆ ಯಾದ್ದರಿಂದ ಸಂಸ್ಕೃತಿಯ ಚಲನಶೀಲತೆಯನ್ನೇ ನಿರಾಕರಿಸಿದಂತಾಗುತ್ತದೆ. ಇದರಿಂದ ಸಾಮಾಜಿಕ ಪರಿವರ್ತನ ಶೀಲತೆಯ ಸಹಜಗುಣವನ್ನೂ ಸಂಕಟಕ್ಕೆ ಸಿಕ್ಕಿಸಿದಂತಾಗುತ್ತದೆ. (ಅದೇ, ಪು:೮೮) ಈ ರೀತಿಯಲ್ಲಿ ಸಮಾಜದ ಪರಿವರ್ತನಾಶೀಲ ಗುಣಕ್ಕೆ ಧಕ್ಕೆ ಒದಗಿದರೆ ಪರಂಪರೆಯ ಯಾವ ಗುಣ-

ಮೌಲ್ಯಗಳೂ ಕೂಡ ಗೊತ್ತಾಗುವುದಿಲ್ಲ. ಸಮಾಜಕ್ಕೆ ಈ ಪರಿವರ್ತನಾಶೀಲ ಗುಣವಿರುವುದರಿಂದಲೇ ಪರಂಪರೆಯ ಭಾಗವಾಗಿ ಬಂದಿರುವ ಆಚರಣೆ, ನಂಬಿಕೆ, ವಿಧಿ-ನಿಷೇಧಗಳು ಕಾಲ-ಕಾಲಕ್ಕೆ ಬದಲಾವಣೆಗೊಳ್ಳುತ್ತಾ ಹೋಗುತ್ತವೆ. ಅವುಗಳ ಕುರಿತಾದ ಸಾಹಿತ್ಯವೂ ಬದಲಾವಣೆಗೊಳಪಡುತ್ತಲೇ ಹೋಗುತ್ತಲೇ ಹೋಗುತ್ತದೆ. ಇದರ ಪರಿಣಾಮವಾಗಿಯೇ ಭಿನ್ನ ಭಿನ್ನ ಪಠ್ಯಗಳು, ಅನೇಕ ಪಾಠಾಂತರ ಪಠ್ಯಗಳು ದೊರೆಯುತ್ತವೆ. ಅಲ್ಲದೆ ಸಮಾಜದ ಈ ಪರಿವರ್ತನಾ ಶೀಲ ಗುಣದಿಂದಾಗಿ ಈ ಭಿನ್ನ ಪಠ್ಯ ಮತ್ತು ಪಾಠಾಂತರ ಪಠ್ಯಗಳು "ಕಾಲದ" ಚರ್ಚೆಯ ಭಾಗವಾಗಿಯೂ ಕಂಡುಬರುತ್ತವೆ. ಉದಾಹರಣೆಗೆ ಸಂಗೊಳ್ಳಿ ರಾಯಣ್ಣನನ್ನು ಬಂಧಿಸುವ ಸಂದರ್ಭದಲ್ಲಿ ಒಂದು ಲಾವಣಿಯಲ್ಲಿ ತಂದೆಯನ್ನು ಚಿತ್ರಹಿಂಸೆ ಕೊಡುವ ವಿವರ ವಿದ್ದರೆ ಇನ್ನೊಂದು ಲಾವಣಿಯಲ್ಲಿ ಆತನ ತಾಯಿಯನ್ನು ಚಿತ್ರ ಹಿಂಸೆಗೆ ಗುರಿಪಡಿಸುತ್ತಾರೆ. ಇದಕ್ಕೆ ಈ ಸಮಾಜ ಪರಿವರ್ತನಾ ಶೀಲ ಗುಣದ ಕಾರಣವಿರಬೇಕು. ಹಾಗಾಗಿಯೇ ಭಿನ್ನ ಭಿನ್ನ ಪಠ್ಯಗಳು ಹುಟ್ಟಿಕೊಳ್ಳುತ್ತವೆ.

ಮೌಖಿಕ ಪರಂಪರೆಯಲ್ಲಿ ಪಠ್ಯವು ಅಖಂಡವಾಗಿರುತ್ತದೆ. ಆದರೆ ಅದು ಕಾಲದ ಅನಿವಾರ್ಯತೆಗೆ ಸಿಕ್ಕು ಬದಲಾಗುತ್ತಾ ಸಾಗುತ್ತದೆ. ಆದರೆ ಇವುಗಳು ಎಂದೂ ವ್ಯಕ್ತಿ ನಿಷ್ಠೆಗೆ, ಒಂದೇ ಸಮುದಾಯಕ್ಕೇ ಸೀಮಿತವಾಗಿರುವುದಿಲ್ಲ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಸೃಜನಶೀಲತೆಯ ಆತ್ಯಂತಿಕ ಗುಣ. ಸಮುದಾಯಗಳು ಸಮಷ್ಠಿ ನೆಲೆಯಲ್ಲಿ ತಮ್ಮನ್ನು ತಾವು ಪ್ರತಿಬಿಂಬಿಸಿಕೊಳ್ಳುವ ಸಂದರ್ಭದಲ್ಲಿ ತಮ್ಮ ಪರಂಪರೆಯ ತತ್ವಕ್ಕೇ ಬದ್ಧವಾಗಿರುತ್ತವೆ, ಆದರೆ ಕಾಲದ ಹಂಗಿಗೆ ಎಂದೂ ಒಳಗಾಗುವುದಿಲ್ಲ. ಹಾಗೆ ನೋಡಿದರೆ ಮೌಖಿಕ ಪಠ್ಯಗಳೆಲ್ಲವೂ ಭಿನ್ನ ಭಿನ್ನ ಕಾಲದ ನೆಲೆಯಲ್ಲಿಯೇ ಸೃಜಿಸಲ್ಪಟ್ಟಂತಹವು. ಈ ಪಠ್ಯಗಳೆಲ್ಲವೂ ಸಮುದಾಯಗಳ ಚಹರೆಯ ಹುಡುಕಾಟದಲ್ಲಿ, ಪ್ರಧಾನ ಧಾರೆಯ ಅಂಶಗಳಾಗಿ ಕಂಡು ಬರುತ್ತವೆ. "ಈ ಬಗೆಯ ತಾತ್ವಿಕ ನೆಲೆ ಜಾನಪದ ಸಂಸ್ಕೃತಿಯು ಅವರ ಬದುಕಿನ ಸೃಜನಶೀಲತೆಯ ಜೊತೆ ಹೇಗೆ ಅಂತರ್ಗತಿಸಿಕೊಂಡಿದೆ ಎಂಬುದನ್ನು ಪ್ರಸ್ತಾಪಿಸಿದೆ. ಮೌಖಿಕ ಪಠ್ಯಗಳೆಲ್ಲವೂ ಸೃಜನ ಶೀಲತೆಯ ಪ್ರವೃತ್ತಿಯಿಂದಲೇ ಹುಟ್ಟಿಕೊಂಡವು. ಲಿಪಿಯ ಚೌಕಟ್ಟಿನ ಆಚೆಗಿನ ಧ್ವನಿಗಳನ್ನು ಮೌಖಿಕ ಪಠ್ಯಗಳು ಒಳಗೊಂಡಿರುತ್ತವೆ. ಸಂಸ್ಕೃತಿಗಳನ್ನು ನಿಯಂತ್ರಿಸಲು ಸೃಜನಶೀಲತೆಯೇ ಬಹುದೊಡ್ಡ ಆಯುಧ. ಹಾಗಾಗಿಯೇ ಜನಪದ ಸಂಸ್ಕೃತಿಗಳು ತಮ್ಮನ್ನು ತಾವು ನಿಯಂತ್ರಿಸಿಕೊಳ್ಳಲು ಬಹುರೂಪಿ ಪಠ್ಯಗಳನ್ನು ಸೃಜನಶೀಲ ಸ್ವಾತಂತ್ರ್ಯದ ಮೂಲಕ ಕಟ್ಟಿಕೊಳ್ಳುವುದು. ಆದರೆ ನಾಗರೀಕತೆಯು ವಿಸ್ತರಿಸಿ; ಲಿಪಿ ನಿಷ್ಠೆಯ ಭಾಷಿಕ ವಿನ್ಯಾಸಗಳ ಅಧಿಕೃತತೆಯನ್ನು ಪ್ರತಿಪಾದಿಸಿದ ಮೇಲೆ 'ಪಠ್ಯ'ದ ಅರ್ಥಗಳು ಭಿನ್ನವಾಗ ತೊಡಗಿದವು. ತೋಂಡಿ ಪರಂಪರೆಯ ಪಠ್ಯಗಳಿಗಿದ್ದ ಅಪಾರ ಸೃಜನಶೀಲ ಸ್ವಾತಂತ್ರ್ಯವು ವ್ಯಕ್ತಿ ನಿಷ್ಠೆಯನ್ನು ನಿರೂಪಿಸುವ ನಿರ್ದಿಷ್ಟ ಪಠ್ಯಗಳಿಗೆ ಇರುವುದಿಲ್ಲ. ಅಂದರೆ ಸಮಷ್ಠಿ ನಿಷ್ಠವಾದ ಸೃಜನಶೀಲತೆಯು ಮುಕ್ತ ಪಠ್ಯವನ್ನು ತೋರುವಾಗ ಅದರ ಒಳಗೇ ಇರಬಲ್ಲ ಅಸಂಖ್ಯಾತ ಒಂಟಿ ಧನಿಗಳನ್ನೆಲ್ಲ ಅದು ಅಂತರ್ಗತಿಸಿಕೊಂಡು

ಬಿಡ ಬಲ್ಲದು. ಇದು ಬೃಹತ್ ಪಠ್ಯದ ಶಕ್ತಿಯನ್ನು ತೋರುತ್ತಲೇ ಆ ಬೃಹತ್ ಪಠ್ಯದ ಶಕ್ತಿಯ ನಿರ್ದಿಷ್ಟತೆಯನ್ನು ಮರೆ ಮಾಚಿಸುತ್ತದೆ.(ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು:೩೮) ಹೀಗೆ ಮರೆಮಾಚಿಸುವಲ್ಲಿ ಪರಂಪರೆಯ ಪಾತ್ರ ಬಹು ದೊಡ್ಡದು. ಪರಂಪರೆಯ ಭಾಗವಾಗಿ ಬಂದ, ಬರುವ ಎಲ್ಲಾ ಭಾಷಿಕ, ಮೌಖಿಕ, ವಿನ್ಯಾಸಗಳೆಲ್ಲವೂ ಕೂಡ ಈ ಪಠ್ಯದ 'ಬೃಹತ್' ಶಕ್ತಿಯ ಭಾಗವಾಗಬೇಕಾಗಿರುವ ಅನಿವಾರ್ಯತೆಯನ್ನು ಈ ಪಠ್ಯದ ಭಿತ್ತಿಯಲ್ಲಿ ಕಾಣಲು ಸಾಧ್ಯವಿದೆ. ಪಠ್ಯಕ್ಕೊಂದು ಬೃಹತ್ ಎನ್ನಿಸುವ ಭಿತ್ತಿಯಿದೆ ಎನ್ನುವುದಾದರೆ ಅದರ ಕೇಂದ್ರ ಶಕ್ತಿಯೇ ಒಂದು ಸೃಜನಶೀಲ ನೆಲೆಯಲ್ಲಿ ವಿನ್ಯಾಸಗೊಂಡಿರುತ್ತದೆ ಎಂದರ್ಥ.

ಪರಂಪರೆಯ ಬೇರುಗಳು ಆಳದಲ್ಲಿ ಒಂದೇಯಾಗಿರುತ್ತವೆಯಾದರೂ ಮೇಲೇರುತ್ತಾ ಹೋದಂತೆ ಅವು ಟಿಸಿಲೊಡೆದು, ಟೊಂಗೆಯಾಗಿ ಮತ್ತೆ ನಿಳಲುಗಳ ರೂಪದಲ್ಲಿ ಭೂಮಿಯನ್ನು ಸೇರುವಂತೆ; ಜಾನಪದದಿಂದ ಆರಂಭ ಜಾನಪದ ಎಂದರೆ ಮೌಖಿಕವಾಗಿ ಸಾಗಿ ಬಂದ ಎಲ್ಲಾ ಪ್ರಕಾರಗಲು ದಾಖಲಾಗುವುದು ಲಿಖಿತದಲ್ಲಿ. ಇದನ್ನು ನವ ಮೌಖಿಕತೆ ಎಂದು ಕರೆಯಲಾಗಿದೆ. ಮೌಖಿಕವಾಗಿದ್ದ ಕಾವ್ಯ ಅಕ್ಷರ ಮಾಧ್ಯಮದಲ್ಲಿ ದಾಖಲಾದಾಗ ಅದು ಶಿಷ್ಟ ಎನಿಸುತ್ತದೆ. ಕ್ರಮೇಣ ಸಾಹಿತ್ಯದ ಪಂಥಗಳು ಯುರೋಪಿಯನ್ ಪ್ರಭಾವದಿಂದ ಇಂಡಿಯಾ ಅಥವಾ ಕರ್ನಾಟಕದಲ್ಲಿ ಬೆಳೆದು ಬಂತು. ಅದು ನವೋದಯ, ಪ್ರಗತಿಶೀಲ, ನವ್ಯ ಹೀಗೆ ಹಲವಾರು ಹೆಸರುಗಳೊಂದಿಗೆ, ಲಕ್ಷಣಗಳೊಂದಿಗೆ ಅಸ್ತಿತ್ವಕ್ಕೆ ಬಂದಿದ್ದು, ಈಗ ಪಂಥ ರಹಿತ ಸಾಹಿತ್ಯ ಪ್ರಕಾರವೊಂದರ ಕುರಿತೂ ಚರ್ಚೆ ನಡೆಯುತ್ತಿರುವುದು ಸೋಜಿಗವನ್ನುಂಟು ಮಾಡುತ್ತದೆ. ಆದರೆ ಜಾನಪದ ಈ ಎಲ್ಲಾ ಪಂಥಗಳ ಮೇಲೂ ಪ್ರಭಾವ ಬೀರಿದೆಯಾದರೂ ಹೆಚ್ಚಾಗಿ ಪ್ರಭಾವಿಸಿದ್ದು ನವೋದಯ ಮತ್ತು ನವ್ಯ ಪಂಥಕ್ಕೆ ಅಲ್ಲದೆ ವಸಹಾತು ಪ್ರಜ್ಞೆಯ ತೀವ್ರ ವಿರೋಧದೊಂದಿಗೆ ನವ್ಯ ಪ್ರಕಾರ ತನ್ನ ಅಸ್ತಿತ್ವ ಸಾಬೀತು ಪಡಿಸಲೂ ಕೂಡ ಜಾನಪದ ಅಥವಾ ಮೌಖಿಕತೆಯ ಪಾತ್ರ ಅಪಾರ. "ಆದರೆ ಯುರೋಪಿನ ನವ್ಯ ಪರಂಪರೆಯನ್ನು ಹೀಗೆ ಯಜಮಾನ್ಯದ ನೆಲೆಯಲ್ಲಿ ಮಾತ್ರ ಗುರುತಿಸುವುದು ಸಾಧ್ಯವಿಲ್ಲ. ಏಕೆಂದರೆ ಅದರ ಒಂದು ಪ್ರಧಾನ ಆಯಾಮ ವಸಾಹತುಷಾಹಿಯೂ ಸೇರಿದಂತೆ ಹಲವಾರು ಬಗೆಯ ಯಾಜಮಾನ್ಯಗಳ ವಿರೋಧವೇ ಆಗಿತ್ತು. ಯುರೋಪಿನ ಧಾರ್ಮಿಕ, ಸಾಹಿತ್ಯಿಕ ಪರಂಪರೆಗಳ ವಿರುದ್ಧ, ಸ್ಥಾಪಿತ ಮೌಲ್ಯಗಳ ವಿರುದ್ಧದ ಅತ್ಯಂತ ತೀವ್ರವಾದ ವಿಮರ್ಶೆ ಮತ್ತು ಬಂಡಾಯಗಳು ಯೂರೋಪಿನ ನವ್ಯದ ಮೂಲಸತ್ವವಾಗಿದ್ದವು. ಒಂದು ರೀತಿಯಲ್ಲಿ ಇದ್ದೂ ಕೂಡ ಈ ನವ್ಯದ ಸಮಗ್ರ ವಿವರಣೆಯಲ್ಲ, ಯುರೋಪಿನ ಚೌಕಟ್ಟಿನಲ್ಲಿ ತೀವ್ರವಾದ ಒಳ ಬಂಡಾಯವೊಂದರ ಸ್ವರೂಪವನ್ನು ಹೊಂದಿದ್ದ ನವ್ಯವನ್ನು ವಸಾಹತುಷಾಹಿಯ ಚೌಕಟ್ಟಿನಲ್ಲಿ ನೋಡಿದಾಗ ಅದು ಹೆಚ್ಚು ಸಂಕೀರ್ಣವಾಗಿ ಅಂದರೆ ಯಾಜಮಾನ್ಯದ ಇನ್ನೊಂದು ಆಯಾಮವುಳ್ಳದ್ದಾಗಿ ಕಾಣುತ್ತದೆ. ನವ್ಯೋತ್ತರ ಹಾಗೂ ಆಧುನಿಕೋತ್ತರ ಯುರೋಪಿಯನ್ ಚಿಂತಕರು, ಯುರೋಪಿಯನ್ ಆಧುನಿಕತೆಯನ್ನು (ನವ್ಯವೂ

ಸೇರಿದಂತೆ) ಹೆಚ್ಚು ಕಡಿಮೆ ಸಂಪೂರ್ಣವಾಗಿ ನಿರಚನಗೊಳಿಸಿ ಬಿಟ್ಟಿದ್ದಾರೆ. ಅವರಿಗೆ ಈ ಆಧುನಿಕತೆ ಪ್ರಬಲ ಯಾಜಮಾನ್ಯದ ಅಭಿವ್ಯಕ್ತಿಯಾಗಿ ಕಂಡಿದೆ. ಆದರೆ ಕನ್ನಡ ನವ್ಯದ ಸಂದರ್ಭದಲ್ಲಿ ನಮ್ಮ ಪ್ರಧಾನ ಲೇಖಕರ ಮೇಲೆ ಪ್ರಭಾವ ಬೀರಿದ್ದ ಆಧುನಿಕತೆ ಯುರೋಪಿಯನ್ ನವ್ಯ ಸಂಪ್ರದಾಯವಾಗಿತ್ತು. ಅಂದರೆ ಮಹಾಯುದ್ಧದ ನಂತರ ವಿಶೇಷವಾಗಿ ಫ್ರಾನ್ಸ್‌ನಲ್ಲಿ, ಜರ್ಮನ್ ಭಾಷೆಯಲ್ಲಿ ಅಭಿವ್ಯಕ್ತಿ ಪಡೆದ ಅಸ್ತಿತ್ವವಾದಿ ಸಂಪ್ರದಾಯವಾಗಿತ್ತು." (ರಾಜೇಂದ್ರ ಚೆನ್ನಿ, ನಡುಹಗಲಿನಲ್ಲಿ ಕಂದೀಲುಗಳು, ಪು-೨೫-೨೬) ಇದು ಒಂದರ್ಥದಲ್ಲಿ ತಮ್ಮ ಕಾಲದ ನೋವುಗಳಿಗೆ ಅವರು ಅಲ್ಲಿ ಪರಿಹಾರ ಹುಡುಕಿದಂತಿದೆ. ಹಾಗೆ ನೋಡಿದರೆ "ಜಾನಪದ ನೆಲೆಯಲ್ಲಿ 'ವಸ್ತು' ಸರಳವಾಗಿದ್ದು ಸಂಸ್ಕೃತಿ ವಿಕಾಸಗೊಂಡಂತೆ ವಿಶಿಷ್ಟಪ್ರಭಾವ ಅದರ ಮೇಲಾಗುತ್ತ ನಡೆದಂತೆ; ವಸ್ತು ಸಂಕೀರ್ಣತೆಗೆ ಒಳಗಾಗುತ್ತದೆ. ಜನಾಂಗದ ಆದರ್ಶೀಕರಣ ಹಾಗೂ ನೈತಿಕ ಮೌಲ್ಯಗಳ ಸ್ಥಾಪನೆಗೆ ಮಹತ್ವ ಉಂಟಾಗಿ ಅದನ್ನು ಪ್ರಸಾರ ಮಾಡುವ ಸಾಹಿತ್ಯವೂ ಅಭಿಜಾತ ಲಕ್ಷಣಗಳನ್ನೊಳಗೊಂಡು ಪೆಡಸು ಶೈಲಿಗೆ ಆತುಕೊಳ್ಳುತ್ತದೆ. ಕನ್ನಡದ ಪ್ರಾಚೀನ ಸಾಹಿತ್ಯ 'ಚಂಪೂ'ವಿನಂತಹ ಪೆಡಸು ರಚನೆಯಲ್ಲಿ ಸೃಷ್ಟಿ ಪಡೆದುದನ್ನು ಈ ಹಿನ್ನೆಲೆಯಲ್ಲಿ ಅವಲೋಕಿಸಬೇಕು. ಆದರೆ 'ಶಿಷ್ಟ' ಎಂಬುದು ತಾನೆಷ್ಟೇ ಪ್ರಾಮಾಣಿತ ಪುಟ್ಟದೊಂದು ತೋರಿಸಿಕೊಳ್ಳುವಾಗಲೂ ಅದು ಜನಪದದಿಂದ ಸಂಪೂರ್ಣ ಭಿನ್ನವಾಗಿ ನಿಂತುಕೊಳ್ಳಲಾರದು. ಜನಪದವನ್ನು ಹೊರತುಪಡಿಸಿ ಶಿಷ್ಟಪದ ಪ್ರತ್ಯೇಕ ಅಸ್ತಿತ್ವ ಹೊಂದಲಾರದು. ಚಂಪೂವಿನಲ್ಲಿ ಮಾರ್ಗ-ದೇಶಿ; ವಸ್ತುಕ- ವರ್ಣಕಗಳನ್ನು ಸರಿ ಬೆರೆಸುವ ಧೋರಣೆಗಳನ್ನು ಆ ಕಾಲದ ಕವಿಗಳು ಅನುಸರಿಸಿರುವುದನ್ನು ನೋಡಿದರೆ ಶಿಷ್ಟ ಕವಿಗಳಿಗೂ ಸಹ ಜನಪದ ಸಂವೇದನೆಗಳಿವೆ ಎಂಬುದು ಸ್ಪಷ್ಟ. ಆದರೆ ಮಾರ್ಗದೊಳೆ ದೇಶಿ ಜೀವ ಹಿಡಿದು ಬದುಕಿತೇ ವಿನಃ ವಿಜೃಂಭಿಸಲಿಲ್ಲ" (ಡಾ. ದುರ್ಗಾದಾಸ್, ಕನ್ನಡ ಶಿಷ್ಟಸಾಹಿತ್ಯದಲ್ಲಿ ಜಾನಪದ, ಪು-೨೫)ಕಾವ್ಯಗಳಲ್ಲಿ ರಾಜರುಗಳನ್ನು ಹಾಡಿ ಹೊಗಳಲು ಹಲವಾರು ಸವಲತ್ತುಗಳನ್ನು ಪಡೆದರು. ಹೀಗೆ ಸವಲತ್ತುಗಳನ್ನು ಪಡೆದ ಕವಿಗಳು ರಾಜ ಮತ್ತು ಅವನ ಪರಿವಾರದ ಸುತ್ತವೇ ಹೊಂದುವಂತಹ ಅನೇಕ ಕಥೆಗಳನ್ನೇ ಆಯ್ಕೆ ಮಾಡಿಕೊಂಡರು ಆ ಕಾರಣಗಳಿಗಾಗಿಯೇ ಕೃತಿಯ ವಸ್ತು, ವಿನ್ಯಾಸ, ಸ್ವರೂಪವೆಲ್ಲವೂ ರಾಜನ ನಿಯಂತ್ರಣಕ್ಕೆ ಒಳಗಾಯಿತೆಂಬುದು ನಮ್ಮ ಮುಂದಿರುವ ಉತ್ತರ ಕೇವಲ ಜಾನಪದದಲ್ಲಷ್ಟೇ ಅಲ್ಲದೆ ಶಿಷ್ಟ ಕಾವ್ಯಗಳಲ್ಲೂ ಯಾವುದೂ ಅಸಹ್ಯಕರವಲ್ಲ, ಊಳಿಗಮಾನ್ಯ ಪ್ರಭುತ್ವ ಪದ್ಧತಿ ಬದಲಾಗಿಲ್ಲದಿದ್ದರೂ ಧರ್ಮರಾಜ ಮೊದಲಿನಿಂದಲೂ ಅಧಿಕಾರದ ಕೇಂದ್ರೀಕರಣದ ಆಮಿಷಕ್ಕೆ ಒಳಗಾಗಿರಲಿಲ್ಲ. ಐದು ಗ್ರಾಮಕ್ಕೇ ತೃಪ್ತಿ ಪಟ್ಟುಕೊಳ್ಳುವವನು, ಇಂಥ ಉದಾರವಾದಿ ವ್ಯಕ್ತಿ ಪ್ರಭುವಾದಾಗ ಸಹಜವಾಗಿಯೇ ಸರ್ವಾಧಿಕಾರಿ ಧೋರಣೆ ಸಡಿಲವಾಗುತ್ತದೆ. ಜನರ ಭಾಷೆಯಲ್ಲಾದ ಪರಿವರ್ತನೆ ಅವರ ಸಂವೇದನೆಯ ನೆಲೆಯನ್ನು ನಿರ್ದೇಶಿಸುತ್ತದೆ. ಅಂದರೆ ಪ್ರಭುತ್ವದ ಪಲ್ಲಟವಾದಾಗ ಭಾಷೆಯ ಬದಲಾವಣೆಯಾಗುವುದು ಸಹಜವಾಗಿದೆ. ಹೀಗೆ ಬದಲಾದ ಭಾಷೆಯಲ್ಲಿ ಸಾಮಾನ್ಯ ಜನರ ಆಶೋತ್ತರಗಳೂ ಪ್ರತಿಬಿಂಬಿತವಾಗುತ್ತವೆ. ಕೇಂದ್ರೀಕರಣ

ತುಂಬಾ ಬಿಗಿಯಾಗಿದ್ದಾಗ ಇದ್ದ ಸಾಹಿತ್ಯದ ಪರಿಭಾಷೆಗೂ, ಕೇಂದ್ರೀಕರಣ ಬಿಗಿ ತಪ್ಪಿದಾಗ ಮೂಡಿಬರುವ ಸಾಹಿತ್ಯದ ಪರಿಭಾಷೆಗೂ ತುಂಬಾ ವ್ಯತ್ಯಾಸ" (ರಂಗಾ ರೆಡ್ಡಿ ಕೋಡಿರಾಂಪುರ, ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು-೫೫) ವಿರುವುದನ್ನು ಗಮನಿಸಬಹುದು. ಇಡೀ ಮಧ್ಯಕಾಲೀನ ಸಾಹಿತ್ಯದ ಬದಲಾದ ಪರಿಭಾಷೆಯ ಹಿನ್ನೆಲೆಯಲ್ಲಿ ಇಂಥ ರಾಜಕೀಯ ಪಲ್ಲಟಗಳು, ಧಾರ್ಮಿಕ ಹಾಗೂ ಸಾಮಾಜಿಕ ಪಲ್ಲಟಗಳು ಉಂಟಾಗಿರುವುದನ್ನು ಲಕ್ಷ್ಮೀಶನ ಜೈಮಿನಿ ಭಾರತದ ಹಲವಾರು ಪದ್ಯಗಳು ಮೂಲಕ ಗ್ರಹಿಸಬಹುದು. ಹಾಗಾಗಿಯೇ ಪ್ರಾಚೀನ ಸಾಹಿತ್ಯದಲ್ಲಿ ಬಳಕೆಯಾಗಿರುವ ಜನಪದ ಪರಿಸರಕ್ಕಿಂತ ಮಧ್ಯಕಾಲೀನ ಸಾಹಿತ್ಯದಲ್ಲಿ ಜನಪದಲಯ-ಆಶಯ ಹೆಚ್ಚು ಸೇರ್ಪಡೆಯಾಗಿವೆ. ಅಂದರೆ ಮಧ್ಯಕಾಲೀನ ಸಾಹಿತ್ಯದ ಅಭಿವ್ಯಕ್ತಿಯೇ 'ದೇಸಿ'ಯಾಗಿದೆ." (ರಂಗಾ ರೆಡ್ಡಿಕೋಡಿರಾಂದಿರ, ಕನ್ನಡ ಶಿಷ್ಟಸಾಹಿತ್ಯದಲ್ಲಿ ಜಾನಪದ, ಪು-೫೫) ಜನಪದ ಕಥನ ಕವನಗಳ ಲಕ್ಷಣಗಳನ್ನು ಹರಿಹರನ ರಗಳೆಗಳಲ್ಲಿಯೂ ಗುರುತಿಸಬಹುದಾಗಿದೆ. ಹಾಗೆ ನೋಡಿದರೆ ಯುರೋಪಿನ ಪರಂಪರೆಯಲ್ಲಿ ಮನೋವಿಶ್ಲೇಷಣೆಯ ಸಿದ್ಧಾಂತಗಳು ಮನುಷ್ಯನ ಅನುಭವಕ್ಕೆ ಹೊಸ ಆಯಾಮವನ್ನು ಕಲ್ಪಿಸಿಕೊಟ್ಟ ಮೇಲೆ ಸುಪ್ತ ಪ್ರಜ್ಞೆಯ ಆಳದಲ್ಲಿ ಹುಟ್ಟುವ ಕಾವ್ಯದ ಸೃಷ್ಟಿಗೆ ಹೆಚ್ಚಿನ ಮನ್ನಣೆ ದೊರೆಯಿತು. ಕೇವಲ ಬೌದ್ಧಿಕವಾದ (ಸೆರೆಬ್ರಲ್) ಕಾವ್ಯದ ವಿರುದ್ಧ ಹೋರಾಡಿದ ನಂತರವೇ ಪ್ರಜ್ಞೆಯ ಎಲ್ಲಾ ಮಜಲುಗಳನ್ನು ಒಳಗೊಳ್ಳುವ ಸಾಹಿತ್ಯದ ರಚನೆ ಸಾಧ್ಯವಾಯಿತು." (ರಾಜೇಂದ್ರ ಚನ್ನಿ, ನಡುಹಗಲಿನಲ್ಲಿ ಕಂದೀಲುಗಳು, ಪು-೧೬೭) ಈ ಸುಪ್ತ ಪ್ರಜ್ಞೆಯ ಭಾಗವಾಗಿದ್ದ ಮೌಖಿಕತೆಯು ಕಲಾವಿದರ ಮೂಲಕ, ಗಾಯಕರ ಮೂಲಕ, ತನ್ನ ಅಸ್ತಿತ್ವವನ್ನು ಸಾಬೀತು ಪಡಿಸಿತು. ಭಾರತೀಯ ಮೂಲದ ಅನೇಕ ಕಾವ್ಯಗಳು ಅವು ಹೆಚ್ಚಾಗಿ ಮೌಖಿಕ ಪರಂಪರೆಯ ಕಾವ್ಯಗಳು, ಯುರೋಪನ್ನೂ ಕೂಡ ಅತೀ ಹೆಚ್ಚು ಎನಿಸಿವಷ್ಟು ಪ್ರಭಾವಿಸಿರುವುದನ್ನು ಕಾಣುತ್ತೇವೆ. ಇದಕ್ಕೆ ಉದಾಹರಣೆಯೆಂದರೆ ಭಾರತೀಯ ಮೂಲವಾದದ ಸೃಷ್ಟಿ, ಸೌರಪುರಾಣವಾದದ ಸೃಷ್ಟಿ, ಥಿಯೋಡರ್ ಬೆನ್ಫೆ ತನ್ನ ಸಿದ್ಧಾಂತವನ್ನು ರೂಪಿಸುವಾಗ ವಸ್ತುವನ್ನು ಭಾರತದಿಂದ ಪಡೆದದ್ದು, ಈ ಸಿದ್ಧಾಂತವು ನಮ್ಮ ಕಲ್ಪನೆಯ ಭಿತ್ತಿಯನ್ನು ಸ್ವಲ್ಪವೂ ಬಿಡದಂತೆ ಆವರಿಸಿಕೊಳ್ಳುವ ವಿವರಗಳನ್ನು ನಮಗೆ ಒದಗಿಸುತ್ತದೆ. ಈ ತರಹದ ಹಲವಾರು ಕಥನಗಳು ಭಾರತದಲ್ಲಿವೆ. ಮತ್ತು ಅವುಗಳು ಅನೇಕ ರೀತಿಯ ವಸ್ತುವಿಷಯಗಳನ್ನು ಯುರೋಪಿನಾದ್ಯಂತ ಒದಗಿಸಿವೆ ಎಂಬುದು ಚರ್ಚೆಯ ಸಂಗತಿ. ಯುರೋಪಿನ ಮೌಖಿಕ ಕಥನಗಳೊಂದಿಗೆ ಇವುಗಳನ್ನು ಸಮೀಕರಿಸಿ ನೋಡಲು ಅಸಾಧ್ಯ. ಇಂಥ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳಲು ಈ ನೆಲದ ಸಂಸ್ಕೃತಿಯೊಡನೆ ಅಂದರೆ ಜನಪದ ಸಂಸ್ಕೃತಿಯೊಡನೆ ಅರ್ಥಪೂರ್ಣ ಸಂಬಂಧವನ್ನು ಹೊಂದಿತು. ಅಂದರೆ ದೇಸೀಯ ಬದುಕಿನ ಸಾಧ್ಯತೆಗಳತ್ತ ಕೈಚಾಚಿರಬೇಕು. ಏಕೆಂದರೆ ಸೃಷ್ಟಿಶೀಲ ಸಾಹಿತ್ಯದಲ್ಲಿ ನಮ್ಮ ಜನಾಂಗಿಕ ಜೀವನದ ವಿಭಿನ್ನ ಮುಖಗಳು ತಮ್ಮದೇ ಆದ ವಸ್ತು ಪ್ರತಿರೂಪವನ್ನು ಪಡೆದಿರುತ್ತವೆ. ಜನಪದ ಬದುಕಿನ ಹತ್ತಾರು ಮುಖಗಳು ತಮ್ಮ ಪ್ರತಿಭೆಗೆ ತಮ್ಮ ಹೃದಯವನ್ನು ತೆರೆದಿಟ್ಟು ಸಾಹಿತ್ಯ ಕೃಷಿಯ ಅಭಿವ್ಯಕ್ತಿಗೆ

ಕುಮ್ಮಕ್ಕು ಕೊಟ್ಟಿರುತ್ತವೆ. ಆದ್ದರಿಂದ ಶಿಷ್ಟ ಸಾಹಿತಿ ಜನಪದ ಪ್ರಜ್ಞೆಯಲ್ಲಿ ವಂಚಿತನಾದರೆ, ಅಷ್ಟರ ಮಟ್ಟಿಗೆ ಅವನ ಕೃತಿ ಕೊರತೆಯನ್ನು ಅನುಭವಿಸುತ್ತದೆ." (ಡಾ.ಪಿ.ಕೆ.ಖಂಡೋಬಾ, ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು-೧೩) ಈ ಚರ್ಚೆಯು ನಮಗೆ ಮತ್ತೊಮ್ಮೆ ಮೌಖಿಕತೆಯ ಅನಿವಾರ್ಯತೆಯನ್ನು ಸಾಬೀತುಗೊಳಿಸಿದಂತಾಗುತ್ತದೆ. ಇದು ಚಾರಿತ್ರಿಕ ಬೆಳವಣಿಗೆಯ ಫಲವಾಗಿ ನಡೆದ ಸಂವೇದನೆಯ ಸ್ವರೂಪವೆಂದೂ ಇದನ್ನು ಗುರ್ತಿಸಬಹುದಾಗಿದೆ. ಇದು ಸಾಂಸ್ಕೃತಿ ಲೋಕವೊಂದರ ಪ್ರಧಾನ ಅಭಿವ್ಯಕ್ತಿಯ ವಿಧಾನವಾಗತೊಡಗಿದೆ. ಈ ಪ್ರಧಾನ ಅಭಿವ್ಯಕ್ತಿಯ ವಿಧಾನದಿಂದಾಗಿ "ಜನಪದ ಸಾಹಿತ್ಯದ ಸರಳ ಭಾಷೆ ನೇರ ನಿರೂಪಣೆ, ಆಡು ನುಡಿಯ ಸೊಗಡು, ಸಣ್ಣ ಸಣ್ಣ ಮಾತುಗಳಲ್ಲಿ ಸಂಭಾಷಣೆಗಳು, ಶಬ್ದ ಚಿತ್ರ ಮುಂತಾದ ಅಂಶಗಳು ಕಂಡುಬರುತ್ತವೆ."[೧೨] (ಡಾ.ಬಿ.ನಾಯಕ, ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು-೧೨೮) ಇವುಗಳು ಮೌಖಿಕ ಅಭಿವ್ಯಕ್ತಿಯ ಮಾಧ್ಯಮಕ್ಕೆ ಅತಿ ಹೆಚ್ಚಿನ ಸತ್ವವನ್ನು ಒದಗಿಸಿವೆ ಎಂಬುದು ಸತ್ಯ.

ಮೌಖಿಕ ಪರಂಪರೆಯ ಬಹುಮುಖ್ಯ ಆಯಾಮವೆಂದರೆ ಅದಕ್ಕಿರುವ ಕರ್ಷಣ ಶಕ್ತಿ. ಹಾಗೆ ನೋಡಿದರೆ ಪ್ರಾಚೀನ ಸಾಹಿತ್ಯದ ಬಹು ಭಾಗವು ಬರವಣಿಗೆಯಾಗಿ ಮೂಡಿ ಬಂದಿಲ್ಲ. ಅದು ಮಾತಿನ ರೂಪದಲ್ಲಿ ಹಾಗೇ ಇದೆ. ಅಂದರೆ ಅದು ತೋಂಡಿ ರೂಪದಲ್ಲಿಯೇ ಇದೆ. ಅದು ಉಳಿದು, ಬೆಳೆದು ಬಂದಿರುವುದು 'ಪರಂಪರೆ'ಯ ಭಾಗವಾಗಿ. ಭಾರತೀಯ ಸಾಹಿತ್ಯದ ಇತಿಹಾಸವನ್ನು ಗಮನಿಸಿದರೆ ಅದು ಬೆಳೆದು ಬಂದಿದ್ದು ತೀರ ಇತ್ತೀಚೆಗೆ ಅಂದರೆ, ಬ್ರಿಟೀಷರ ಆಗಮನದ ನಂತರಕ್ಕೆ ವಸಾಹತು ಕಾಲಘಟ್ಟದಲ್ಲಿ ಮಾತ್ರ ಸಾಹಿತ್ಯವೆಂದರೆ ಕೇವಲ 'ಮೌಖಿಕ'ತೆ ಅಷ್ಟೇ ಅಲ್ಲ, ಅದಕ್ಕೊಂದು ಬರವಣಿಗೆಯ ಪರಂಪರೆಯೂ ಇದೆ ಯುರೋಪ್‌ನಲ್ಲಿ ಎಂದು ತೋರಿಸಿಕೊಟ್ಟರು. ಭಾರತೀಯ ಮೌಖಿಕತೆಗೆ ಒಂದು ಬಹು ದೊಡ್ಡ ಪರಂಪರೆಯಿದೆಯಾದರೂ 'ವೇದ'ಗಳ ವಿಚಾರದಲ್ಲಿ ಉಪನಿಷತ್ತುಗಳ ವಿಚಾರದಲ್ಲಿ ತುಂಬಾ ಕಠಿಣ ಪ್ರಶ್ನೆ ಎದುರಾಗುತ್ತದೆ. ಪುರೋಹಿತಶಾಹಿ ಧೋರಣೆಯ ಈ ಸಾಹಿತ್ಯವೆಲ್ಲ ಮೌಖಿಕತೆಯಲ್ಲಿಯೇ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದಿದೆಯಾದರೂ ಅದು ಎಲ್ಲೂ ಕೂಡ ಮುಕ್ಕಾದಂತೆ, ತಿದ್ದಲ್ಪಡದೆ, ಯಥಾವತ್ತಾಗಿ ಉಳಿದುಕೊಂಡು ಬಂದಿದೆ. "ಇದು ಸಾಧ್ಯವಾಗಿರುವುದು ಗ್ರಹಿಸಲು ಕಷ್ಟವಾದ ಬಹಳ ಸಂಕೀರ್ಣವಾದ ವೇದ ಪಠಣದ ವ್ಯವಸ್ಥೆಯಿಂದ."[೧೩] (ಡಾ.ಚಂದ್ರಶೇಖರ ಕಂಬಾರ, ದೇಶೀಯ ಚಿಂತನ, ಪು-೫೮) ಶತ ಶತಮಾನಗಳಿಂದಲೂ ಒಂದೇ ಒಂದು ಉಚ್ಚಾರಣೆ ಬದಲಾಗದಿರುವುದು ಈ ವೇದ ಪಠಣದಲ್ಲಿ ಕಾಣಬಹುದು. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬರವಣಿಗೆಗೆ 'ಅಧಿಕೃತ' ಸ್ಥಾನವಿದೆ. ಆದರೆ ಭಾರತೀಯ ಸಂಸ್ಕೃತಿಯಲ್ಲಿ ಬರವಣಿಗೆಗಿಂತ ಮೌಖಿಕತೆಯಲ್ಲಿ ಆತ್ಯಂತಿಕ ಸತ್ಯದ ಸ್ಥಾನವಿದೆ. ಭಾರತೀಯ ರಾಜಕೀಯ ಚರಿತ್ರೆಯನ್ನು ನೋಡಿದಾಗ ವಸಾಹತುಶಾಹಿ ಆಡಳಿತದಲ್ಲಿ ಏನೆಲ್ಲಾ ಬದಲಾವಣೆಗಳು ಆದವು. ಇಲ್ಲಿಯ ಯಾವ ತೋಂಡಿ ಅಥವಾ ಮೌಖಿಕ ಪರಂಪರೆಗೆ ಅಷ್ಟೊಂದು ವ್ಯಾಪಕತೆ ಅಥವಾ ಮಹತ್ವ ಸಿಗಲಾರದ್ದನ್ನು ಗಮನಿಸಬಹುದು. ಬ್ರಿಟೀಷರು ಇಲ್ಲಿ ನೆಲೆ ಕಂಡು ಕೊಂಡ ನಂತರ ಕ್ರಮೇಣ ಒಂದೊಂದಾಗಿ ಭಾರತದ

ಎಲ್ಲಾ ಆಂತರಿಕ ಹಾಗೂ ಬಾಹ್ಯ ಬದಲಾವಣೆಗಳನ್ನು ಮಾಡುತ್ತಾ ಬಂದರು. ಮೌಖಿಕತೆ ಯಾಕೆ ಇಷ್ಟೊಂದು ಮಹತ್ವ ಕಳೆದುಕೊಂಡಿತೆಂದರೆ, ಅವರು ಇಲ್ಲಿ ನ್ಯಾಯಾಲಯಗಳನ್ನು ಸ್ಥಾಪಿಸಲು ಶುರುಮಾಡಿದ್ದಕ್ಕೆ. ಅವರಿಗೆ ಸಾಕ್ಷಿಗಾರರು ಬೇಕಾಗಿತ್ತು, ಅಲ್ಲದೆ ಅವರೇನಾದರೂ ಕೇಳಿದರೆ ಭಾರತೀಯರು ಕಥೆಗಳನ್ನು ಹೇಳಲು ಪ್ರಾರಂಭಿಸುತ್ತಾರೆ. ಅವರಿಗೆ ವಾಸ್ತವತೆಯ ಪ್ರಜ್ಞೆಯಿಲ್ಲ, ಆ ಕಾರಣಕ್ಕಾಗಿಯೇ ಇವರಿಗೆ ಬರವಣಿಗೆಯ ಮಹತ್ವವನ್ನು ತಿಳಿಸಿಕೊಡಬೇಕೆಂದು ಇಲ್ಲಿ ಮೌಖಿಕ ರೂಪದಲ್ಲಿದ್ದ ಎಲ್ಲಾ ಸಾಹಿತ್ಯದ ಸಂಗ್ರಹಣೆಯಲ್ಲಿ ತೊಡಗಿದರು ೧೮೦೩ರಲ್ಲಿ ಶ್ರೀರಂಗಪಟ್ಟಣದ ಪತನಕ್ಕೆ ಸಂಬಂಧಪಟ್ಟಂತೆ ಜಾನ್ ಲೇಡನ್ ಎಂಬಾತ ಲಾವಣಿವೊಂದನ್ನು ಸಂಗ್ರಹ ಮಾಡುತ್ತಾನೆ. ಇದು ಮುಂದೆ ಅನೇಕ ಅಧ್ಯಯನಗಳಿಗೆ ಕಾರಣವಾಗುತ್ತದೆ. ಅಬ್ಬೆಡು ಬೋಯ್ ೧೯೧೬ರಲ್ಲಿ 'ಹಿಂದು ಮ್ಯಾನರ್ಸ್ ಕಸ್ಟಮ್ಸಂ ಅಂಡ್ ಸೆರೆಮಾನೀಸ್,' ೧೮೭೧ರಲ್ಲಿ ಚಾರ್ಲ್ಸ್ ಇ.ಗೋವರ್ 'ದ ಫೋಕ್ ಸಾಂಗ್ಸ್ ಆಫ್ ಸದರನ್ ಇಂಡಿಯಾ,' ೧೮೮೫ರಲ್ಲಿ ಜೆ.ಎಫ್.ಫ್ಲೀಟ್ 'ಐದು ಐತಿಹಾಸಿಕ ಲಾವಣಿಗಳು' ಹೀಗೆ ಅನೇಕ ಸಂಗ್ರಹ ಬರೆಹಗಳು ನಡೆದವು. ಇದರ ಪರಿಣಾಮವಾಗಿ ಕನ್ನಡದಲ್ಲೂ ಕೂಡ ಸಂಗ್ರಹ ಕಾರ್ಯ ಆರಂಭಗೊಂಡು, ಮೌಖಿಕ ಸಂಸ್ಕೃತಿ ಮತ್ತು ಬರವಣಿಗೆಯ ನಡುವಿನ ಮೂಲಭೂತ ವ್ಯತ್ಯಾಸಗಳೇ ಗೊತ್ತಾಗದಂತಾಯಿತು. "ಪ್ರಾಚೀನ ಭಾರತದಲ್ಲಿ ಮಾತು ಮತ್ತು ಬರವಣಿಗೆ ಎರಡೂ ಇದ್ದವು. ಅವುಗಳ ನಡುವಿನ ಮೂಲಭೂತ ವ್ಯತ್ಯಾಸವೇ ಅವು ಮಾಡಬೇಕಾದ ಕೆಲಸಗಳನ್ನು ತೀರ್ಮಾನಿಸಿದ್ದವು. ಬರಹಗಾರ ಅಥವಾ ಸಾಹಿತಿಯಿಂದ, ಬೇರೆಯಾದ ಇರುವಿಕೆಯನ್ನು ಪಡೆದಿರುವ ಬರವಣಿಗೆಯು, ಅವನ ಸಾವಿನ ನಂತರವೂ ಉಳಿಯುತ್ತದೆ. ಆದ್ದರಿಂದಲೇ ಮಾತನಾಡುವವನ ವ್ಯಕ್ತಿತ್ವದ ಜೀವಂತ ಅಂಗವಾಗಿರುತ್ತದೆ. ಅದು ಕಣ್ಣೆದುರಿಗಿರುವ ಕೇಳುಗರೊಂದಿಗೆ ಸಂವಹನ ನಡೆಸುವ ಉದ್ದೇಶವನ್ನು ಹೊಂದಿರುತ್ತದೆ. ನಮ್ಮಲ್ಲಿ ಮೌಖಿಕ ಸಂವಹನಕ್ಕೆಂದು ರಚಿತವಾದ ಕಾವ್ಯಗಳೂ ಇವೆ. 'ಲಿಖಿತ'ವಾದ ಕಾವ್ಯಗಳೂ ಇವೆ. ಕನ್ನಡದ ಆದಿ ಕವಿಯಾದ, ಹತ್ತನೆ ಶತಮಾನದ ಪಂಪನ ಕೃತಿಗಳು 'ಲಿಖಿತ ಕೃತಿ'ಯ ಎಲ್ಲಾ ಗುಣಲಕ್ಷಣಗಳನ್ನು ಒಳಗೊಂಡಿವೆ. ಪೀಠಿಕಾ ರೂಪದ ಪದ್ಯವೊಂದರಲ್ಲಿ ಪಂಪನು ಮಹಾಭಾರತದಂತಹ 'ಚಾರಿತ್ರಿಕ ಕಥನ ಕಾವ್ಯ'ವನ್ನು ತಾನು 'ರಚಿಸಿ ಶಾಸನ'ದ ಜಗತ್ತಿಗೆ ಕೊಟ್ಟೆನೆಂದು ಹೇಳಿಕೊಳ್ಳುತ್ತಾನೆ. ಪಂಪನ ಮಹಾಕಾವ್ಯದ ರೂಪವು, ಸುಧೀರ್ಘವಾದ ಶಾಸನವೊಂದರ ರೂಪಕ್ಕೆ ಬಹಳ ನಿಕಟವಾಗಿದೆ. ಶಾಸನವು ಬರವಣಿಗೆಯ ಅತ್ಯಂತ ಪರಿಶುದ್ಧ ರೂಪ" (ಅದೇ, ಪು-೫೮-೫೯) ಹೀಗಾಗಿಯೇ ಪ್ರಾಚೀನ ಕಾಲದಿಂದಲೂ ಮೌಖಿಕ ಸಂವಹನದ ಎಲ್ಲಾ ಕಾವ್ಯಗಳು, ಬರವಣಿಗೆಯ ರೂಪ ಧರಿಸುತ್ತಾ ಬಂದಿರುವುದು ಗೊತ್ತಾಗುತ್ತದೆ. ಪಂಪನು ಮಹಾಭಾರತದಂಥ ಒಂದು ಬಹುದೊಡ್ಡ ಮೌಖಿಕ ಪರಂಪರೆಯ ಕಥನವನ್ನು ಲಿಖಿತ ಪಠ್ಯವನ್ನಾಗಿ ಮಾರ್ಪಡಿಸುತ್ತಾನೆ. ಪಂಪನ ಸಮಕಾಲೀನ ಸಂದರ್ಭವು ಭಾಷೆಗಳ ಮೂಲಕ ಕೂಡ ಒಂದು ಬದಲಾವಣೆಯನ್ನು ಬಯಸುತ್ತಿತ್ತು. ಆ ಕಾಲದ ಚಿಕ್ಕ ಪುಟ್ಟ ಭಾಷೆಗಳೆಲ್ಲವೂ ಕೂಡ ಬರವಣಿಗೆಯತ್ತ ತುಡಿಯುತ್ತಿದ್ದವು ಎಂಬುದಕ್ಕೆ ಪಂಪನ ಕಾವ್ಯ ಸಾಕ್ಷಿ ನುಡಿಯುತ್ತದೆ. ಇದೆಲ್ಲ ಗಮನಿಸಿದರೆ ಅಂದಿನ ಬರಹದ ಉದ್ದೇಶ 'ಕೃತಿ'ಯನ್ನು ಅಂದರೆ ಬರವಣಿಗೆಯನ್ನು ಸ್ಮೃತಿಯಲ್ಲಿ ಉಳಿಸುವ ಮಹತ್ವದ ಉದ್ದೇಶ ಇದ್ದಂತೆ ಕಾಣುತ್ತದೆ. ಇಲ್ಲಿ ಪಂಪನು

ತನ್ನ ಕಾವ್ಯದ ಮುಖಾಂತರ ಎರಡು ಯುಗಗಳ ನಡುವಿನ 'ರೂಪಕಾತ್ಮಕ ಸಂಬಂಧ'ವನ್ನು ಮಾತ್ರ ಅನಾವರಣಗೊಳಿಸುತ್ತಾನೆ. ಇದು ಬರವಣಿಗೆಯ ಮೂಲಕ ಮೂಡಿ ಬಂದಿರುವ ಸಂಬಂಧವಾಗಿದೆ. ಬರವಣಿಗೆ ಯಾವಾಗಲೂ ಸಂಮೃದ್ಧವಾದುದಾಗಿರುತ್ತದೆ. ಕಾರಣ ಬರವಣಿಗೆ ಸದಾ ತನ್ನ ಪಠ್ಯಕ್ಕೆ ಕಟ್ಟು ಬಿದ್ದಿರುತ್ತದೆ. ಅದು ಮೌಖಿಕ ಕಾವ್ಯಕೃತಿಗಳ ತರಹ ಒಂದು ಪ್ರದರ್ಶನದಿಂದ ಮತ್ತೊಂದು ಪ್ರದರ್ಶನಕ್ಕೆ ಪಲ್ಲಟಗೊಳ್ಳುವ ಅಥವಾ ಬದಲಾವಣೆಯಾಗುವ ಸಾದ್ಯತೆ ಇರುವುದಿಲ್ಲ. ಲಿಖಿತ ಮಾಧ್ಯಮಕ್ಕೆ ಈ ರೀತಿಯ ಬದಲಾವಣೆಗಳು ಅಥವಾ ಪಲ್ಲಟಗಳು ಸಾಧ್ಯವಿರುವುದಿಲ್ಲ. ಏಕೆಂದರೆ ಅಲ್ಲಿಯ ರಚನೆಯೇ ಆ ರೀತಿಯದ್ದಾಗಿರುತ್ತದೆ. ಅದಕ್ಕೆ ಆರಂಭ, ಅಂತ್ಯ, ಮಧ್ಯ ಭಾಗಗಳಿರುತ್ತವೆ. ಜೊತೆಗೆ ಈ ಕವಿತೆ ಅಥವಾ ಕಾವ್ಯದ ಬಂಧ ತುಂಬಾ, ಖಚಿತವೂ ಮತ್ತು ಬಿಗಿಯಾದುದೂ ಆಗಿರುವುದೇ ಇದಕ್ಕೆ ಕಾರಣ. ಇದರಲ್ಲಿಯ ಒಂದೇ ಒಂದು ಶಬ್ದ ಅಥವಾ ಪದವನ್ನು ತೆಗೆದು ಹಾಕಲು ಬರುವುದಿಲ್ಲ. ಒಂದು ವೇಳೆ ಹಾಗೇನಾದರೂ ತೆಗೆದು ಹಾಕಿದರೆ ಅಥವಾ ಹೊಸದಾಗಿ ಏನಾದರೂ ಸೇರಿಸಿದರೆ ಅದರಲ್ಲಿ ಪಲ್ಲಟವಾಗುವ ಅಪಾಯವಿರುತ್ತದೆ ಮತ್ತು ಇಡೀ ಕವಿತೆಯ ಅಥವಾ ಕಾವ್ಯದ ಸಂಬಂಧವೇ ಕೆಟ್ಟು ಹೋಗುತ್ತದೆ. ಅದರ ಬಂಧ ಅಷ್ಟೊಂದು ಬಿಗಿಯಾದುದಾಗಿರುತ್ತದೆ ಮತ್ತು ಬಂಧವು ಅರ್ಥವನ್ನು ಒಳಗೊಂಡಿರುವುದೇ ಇದಕ್ಕೆ ಕಾರಣ; ಲಿಖಿತ ಕೃತಿಯಲ್ಲಿ ಅನೇಕ ರೀತಿಯ ಕಾವ್ಯ ತಂತ್ರಗಳನ್ನು ಕಾಣಲು ಸಾಧ್ಯವಿದೆ. ಅಲ್ಲಿ ಒಬ್ಬ ಲೇಖಕ ಅಥವಾ ಬರಹಗಾರ ಯಾವುದೇ ಒಂದು ಘಟನೆಯನ್ನು ವಿವರಿಸಿ ಕ್ಷಣಕಾಲ ವಿರಮಿಸಿ, ಆಲೋಚನೆಯಲ್ಲಿ ತೊಡಗಲು ಸಾಧ್ಯತೆಯಿದೆ. ಅಲ್ಲದೆ ಆ ಘಟನೆಯ ಕುರಿತು ತನ್ನದೇ ಆದ ವ್ಯಾಖ್ಯಾನವೊಂದನ್ನು ಕೂಡ ಬರಹಗಾರ ಕೊಡಬಹುದು. ಇದೊಂದು ರೀತಿಯಲ್ಲಿ ಪ್ರಕ್ರಿಯಾತ್ಮಕ ಸಂಬಂಧವಾಗಿದೆ. ಇಲ್ಲಿ ವಸ್ತು ಸ್ಥಿತಿ ಮತ್ತು ಲೇಖಕನ ಪ್ರಜ್ಞೆ ಒಂದಕ್ಕೊಂದು ಬೆಸೆದುಕೊಂಡಿರುತ್ತವೆ. ಅಂದರೆ ಇಲ್ಲಿ ಭೂತಕಾಲದ ರೂಪದಲ್ಲಿ ಪುರಾಣವು ಮತ್ತು ವರ್ತಮಾನಕಾಲದ ರೂಪದಲ್ಲಿ ಚರಿತ್ರೆಯು ತಮ್ಮ ಸಂಬಂಧವನ್ನು ಅನಾವರಣಗೊಳಿಸುತ್ತವೆ. ಹೀಗೆ ಮೌಖಿಕ ಪರಂಪರೆಯು ಬಹುದೊಡ್ಡ ಭಿತ್ತಿಯಲ್ಲಿ ತನ್ನನ್ನು ತಾನು ರೂಪುಗೊಳ್ಳುತ್ತಾ ಸಾಗುತ್ತಿರುತ್ತದೆ. ಆದರೂ ಇಂದು ಮೌಖಿಕ ಪರಂಪರೆಯು ತನ್ನ ಅಸ್ತಿತ್ವವನ್ನು, ತನ್ನ ಇರುವಿಕೆಯನ್ನು ಗಟ್ಟಿಗೊಳಿಸಿಕೊಂಡಿದೆ. ಅದು ಕಲಾವಿದರ ರೂಪದಲ್ಲಿ ತಲೆಮಾರುಗಳಿಂದ ಉಳಿದುಕೊಂಡಿದೆ. ಲಾವಣಿ ಗಾಯಕರು, ರಂಗಭೂಮಿ, ಪ್ರದರ್ಶಕ ಕಲೆಗಳ ರೂಪದಲ್ಲಿ ಮೌಖಿಕ ಪರಂಪರೆ ಹಾಗೇ ಮುಂದುವರಿದುಕೊಂಡು ಬಂದಿದೆ. ಅಂದರೆ, ಮೌಖಿಕ ಪರಂಪರೆಯ ಮುಂದುವರಿಕೆಯ ಭಾಗವಾಗಿ ಈ ಎಲ್ಲಾ ಕಲಾವಿದರುಗಳು ಕಾಣಿಸಿಕೊಳ್ಳುತ್ತಾರೆ. ಮತ್ತು ಈ ಮೌಖಿಕ ಪರಂಪರೆಯು ಸಮುದಾಯ, ಕಲಾವಿದರುಗಳ ಆಯ್ಕೆಗಳಿಗನುಗುಣವಾಗಿ ಬದಲಾವಣೆಯಾಗುತ್ತಾ, ತಮ್ಮ ಆಕೃತಿ, ವಿವರಗಳಲ್ಲಿ ಭಿನ್ನತೆಯನ್ನು ಸಾಧಿಸುತ್ತಾ ಹೋಗುತ್ತದೆ. ಇಲ್ಲಿ ಗಾಯಕ ಅಥವಾ ಪ್ರದರ್ಶಕ ಕಲೆಯ ಕಲಾವಿದನೊಬ್ಬ ಕೇಳುಗರ ಎದುರಿನಲ್ಲೇ ತನ್ನ ಕಲೆ, ಗಾಯನವನ್ನು ಪ್ರದರ್ಶನ ಮಾಡಬೇಕಾಗಿರುವುದರಿಂದ ಸಾಂದರ್ಭಿಕವಾಗಿ ಅದು ಬದಲಾವಣೆಗೊಳ್ಳುತ್ತಾ ಹೋಗುವುದು ಅಥವಾ ಅದನ್ನು ಬದಲಾವಣೆಗೊಳಿಸುವುದು ಆ ಗಾಯಕ ಅಥವಾ ಕಲಾವಿದನಿಗೆ ಅನಿವಾರ್ಯವಾಗಿರುತ್ತದೆ. ಈ

ಬದಲಾವಣೆಗಳ ಪರಿಣಾಮವಾಗಿಯೇ ವಿದ್ವಾಂಸರು ಸಾಂದರ್ಭಿಕ ಸಿದ್ಧಾಂತವೊಂದನ್ನು ರೂಪಿಸಿದ್ದಾರೆ. ಇದನ್ನು ಸಂಗ್ರಹಣಾ ಸಿದ್ಧಾಂತವೆಂದು ಕರೆದಿದ್ದಾರೆ. ಇದರಲ್ಲಿ ಪ್ರದರ್ಶನ ಸಿದ್ಧಾಂತವೂ ಸೇರಿದೆ. ಈ ಸಿದ್ಧಾಂತದ ಹುಟ್ಟಿಗೆ ಮೂಲಕಾರಣವೆಂದರೆ ಭಾಷಾ ವಿಜ್ಞಾನದಲ್ಲಿ ತಲೆದೋರಿದ ಸಮಸ್ಯೆ ಭಾಷಾವಿಜ್ಞಾನದಲ್ಲಿನ ಸಮಾಜೋ ಭಾಷಾ ವಿಜ್ಞಾನ ಪಂಥದ ಪ್ರಭಾವ ಜಾನಪದ ಅಧ್ಯಯನದ ಮೇಲೂ ಆಗುತ್ತದೆ. ಇದರ ಪರಿಣಾಮವಾಗಿ ಜಾನಪದ ಅಧ್ಯಯನದಲ್ಲಿ ಒಂದು ಹೊಸ ದೃಷ್ಟಿಕೋನ ಮೂಡಿ ಬರುವಂತಾಗಿದೆ. ಈ ಸಾಂದರ್ಭಿಕ ಸಿದ್ಧಾಂತಕ್ಕೆ ಪೂರಕವಾಗಿರುವ ಸಿದ್ಧಾಂತವೆಂದರೆ 'ಮೌಖಿಕ ಸೂತ್ರಾತ್ಮಕ ಸಿದ್ಧಾಂತ' ಜಾನಪದ ಸಿದ್ಧಾಂತಗಳೆಲ್ಲವೂ ವಿದೇಶಗಳಲ್ಲಿಯೇ ರೂಪುತಳೆದಿರುವುದರಿಂದ ಇವತ್ತಿಗೂ ಕೂಡ ನಾವು ಅವುಗಳನ್ನು ಬದಲಾವಣೆಗಳಿಲ್ಲದೇ ಒಪ್ಪಿಕೊಂಡು ಬಂದಿದ್ದೇವೆ. ಮಿತಮನ್ ಪ್ಯಾರಿ ಮತ್ತು ಲಾಡ್ ಅವರು ಕತೆಗಾರಿಕೆಯಲ್ಲಿ ನಿರೂಪಕರು ಸಾಮಗ್ರಿಯನ್ನು ನೆನಪಿನಲ್ಲಿಟ್ಟುಕೊಳ್ಳುವುದು ಮತ್ತು ಕಲಿಯುವುದು ಹಾಗೂ ಫಾರಂಪರಿಕವಾದ ಕಥನ ಪರಂಪರೆಯನ್ನು ಮುಂದುವರೆಸುವ ಸೂತ್ರಗಳ ಬಗ್ಗೆ ಅಧ್ಯಯನ ಮಾಡುವ ಸಂದರ್ಭದಲ್ಲಿ Context ಕಡೆಗೆ ಅವರ ಗಮನ ಹರಿಯಿತು. ಇದೇ ಮುಂದೆ "Contextual Theory" (ಸಾಂದರ್ಭಿಕ ಸಿದ್ಧಾಂತ)ವಾಗಿ ರೂಪು ತಳೆಯಿತು. ಈ ಸಿದ್ಧಾಂತದ ಹುಟ್ಟಿಗೆ ಇರುವ ಮುಂಚಿನ ಸ್ಥಿತಿಯನ್ನು ಕುರಿತು ಬಿ.ಎ.ವಿವೇಕ ರೈ ಹೀಗೆ ಹೇಳುತ್ತಾರೆ. "ಸಾಂಪ್ರದಾಯಿಕ ಭಾಷಾ ವಿಜ್ಞಾನಿಗಳು ಬಂಧದ ಬಗ್ಗೆ, ಜಾನಪದ ವಿದ್ವಾಂಸರು ಪಠ್ಯದ ಬಗ್ಗೆ ಸ್ವತಂತ್ರರಾಗಿ ಆಸಕ್ತಿಯನ್ನು ತಾಳುತ್ತಿದ್ದರು. ಈ ಎರಡೂ ಶಿಸ್ತುಗಳ ವಿಜ್ಞಾನಿಗಳು ವಿಶ್ಲೇಷಣೆಯ ಮೂರನೆಯ ಮೂರನೆಯ ಸ್ತರವಾದ ಸಂದರ್ಭವನ್ನು ಕಡೆಗಣಿಸುತ್ತಿದ್ದರು(ರೈ, ೧೯೮೫-೮೪),ಆರಂಭದ ಜಾನಪದ ಅಧ್ಯಯನಕಾರರಿಗೆ ಜಾನಪದದ ಬಗ್ಗೆ ತುಂಬಾ ಆತಂಕವಿತ್ತು, ಜಾನಪದ ಹಾಳಾಗಿ ಹೋಗುತ್ತದೆ ಅದನ್ನು ರಕ್ಷಣೆ ಮಾಡಬೇಕು, ಸಂಗ್ರಹಿಸಬೇಕು ಇಲ್ಲದಿದ್ದರೆ ಅದು ಪಳೆಯುಳಿಕೆಯಾಗಿ ಉಳಿದು ಬಿಡುತ್ತದೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಹಾಗಾಗಿ ಅವರ ಗಮನವೆಲ್ಲಾ ಜಾನಪದ ಪಠ್ಯದ ಕಡೆಗೆ ಇತ್ತು. ಹಾಗಾಗಿ ಅದನ್ನು ಸಂಗ್ರಹಿಸಿ, ಪುನರ್ ರಚಿಸುವುದರಲ್ಲೇ ಮಗ್ನರಾಗಿದ್ದರು. ಅವರಿಗೆಲ್ಲಾ ಪಠ್ಯದ ಚಲನಶೀಲ ಗುಣದ ಬಗ್ಗೆ ಕಲ್ಪನೆಯೇ ಇರಲಿಲ್ಲವೆನಿಸುತ್ತದೆ. ನಂತರದ ಅಧ್ಯಯನಕಾರ ಪಠ್ಯದ ಬಗ್ಗೆ ಖಚಿತ ನಿಲುವನ್ನು ಸ್ಪಷ್ಟಪಡಿಸಿದರು. ಅದು ನಿರ್ದಿಷ್ಟರೂಪ ಹೊಂದಿರುವುದಿಲ್ಲ, ಕಾಲ ಹಾಗೂ ಸನ್ನಿವೇಶ ಅಥವಾ ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಿರುತ್ತದೆ ಎಂಬುದರ ಬಗ್ಗೆ ಖಚಿತ ನಿಲುವಿಗೆ ಬಂದರು. ಈ ತಲೆಮಾರಿನ ಅಧ್ಯಯನಕಾರರೆಲ್ಲ ಬೇರೆ ಬೇರೆ ಅಧ್ಯಯನ ಶಿಸ್ತುಗಳಿಂದ ತಮಗೆ ಅಗತ್ಯವೆನಿಸಿದ ಮಹತ್ವದ ಮಾಹಿತಿಯನ್ನೆಲ್ಲ ಸ್ವೀಕರಿಸಿದರು. "ಉದಾಹರಣೆಗೆ ಭಾಷಾ ವಿಜ್ಞಾನದಿಂದ ನಡವಳಿಕೆ ಪರಿಕಲ್ಪನೆಯನ್ನು, ಮಾನವ ವಿಜ್ಞಾನದಿಂದ ಸಮಾಜ ವಿಜ್ಞಾನದಿಂದ Functionalism, ಸಮಾಜ ವಿಜ್ಞಾನದಿಂದ Rale Playing, ಮನಶಾಸ್ತ್ರದಿಂದ Egomechanisms ಹೀಗೆ ಜೊತೆಗೆ ಇವುಗಳನ್ನು ಜಾನಪದ ಸಂಪ್ರದಾಯಗಳಿಗೂ ಅನ್ವಯಿಸಲು ಪ್ರಯತ್ನಿಸಿದರು. ಅಲ್ಲದೆ ಆಗ ಚಲಾವಣೆಗೆ ಬಂದ Holistic Aspect, Ethnograhic Field work ನಂತಹ ಪರಿಕಲ್ಪನೆಗಳೂ ಸಾಂದರ್ಭಿಕ ಸಿದ್ಧಾಂತಕ್ಕೆ ಹಿನ್ನಲೆಯಾಗಿ ಪೂರಕವಾಗಿ ಕೆಲಸ ಮಾಡಿವೆ ಎಂಬುದನ್ನುಗಮನಿಸಬೇಕು. ಇವು ಮಾನವ

ವಿಜ್ಞಾನದಿಂದ ಜಾನಪದ ವಿಜ್ಞಾನಕ್ಕೆ ಬಂದ ಪರಿಕಲ್ಪನೆಗಳು. ಮಾನವ ವಿಜ್ಞಾನದ ದೃಷ್ಟಿಯಿಂದ ಜಾನಪದ ಅಧ್ಯಯನ ಮಾಡ ಹೊರಟಾಗ ಜಾನಪದದಲ್ಲಿ ಮೂರು ಮುಖ್ಯ ಮುಖಗಳು ಕಂಡುಬರುತ್ತವೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಅದೇ Cross Cultural Aspect, Holistic aspect, ಹಾಗೂ Ethnographic Field Work ಇವುಗಳಲ್ಲಿ Cross Cultural aspect ಜಾನಪದವನ್ನು ತೌಲನಿಕವಾಗಿ ನೋಡುವ ದೃಷ್ಟಿಗೆ ಒತ್ತು ಕೊಟ್ಟರೆ, Holistic ಜಾನಪದವನ್ನು ಸಮಗ್ರವೆಂದು ಪರಿಗಣಿಸಿ ಅಧ್ಯಯನ ಮಾಡಬೇಕೆನ್ನುತ್ತದೆ. ಸಂಸ್ಕೃತಿಯ ಎಲ್ಲಾ ಭಾಗಗಳನ್ನು, ಅಂಶಗಳನ್ನು ಪರಸ್ಪರ ಸಾವಯವ ಸಂಬಂಧ ಪಡೆದವು ಎಂದು ಅದು ಪರಿಭಾವಿಸುತ್ತದೆ. ಇನ್ನು ಜನಾಂಗಿಕ ಕ್ಷೇತ್ರಕಾರ್ಯದಲ್ಲಿ ಜಾನಪದ ಅಧ್ಯಯನಕಾರನ ಕೆಲಸ ಬರೀ ಪಠ್ಯ ಸಂಗ್ರಹ ಮಾಡುವುದಷ್ಟೆ ಅಲ್ಲ, ಆ ನಿರ್ದಿಷ್ಟ ಜನಪದ ಪ್ರದರ್ಶನದ ಸಂದರ್ಭವನ್ನು ಅಗತ್ಯವಾಗಿ ಅಧ್ಯಯನ ಮಾಡಬೇಕು. ಅಧ್ಯಯನಕಾರ ಜನಪದ ಪ್ರದರ್ಶನಗಳ ಸಂದರ್ಭದಲ್ಲಿ ಸ್ವತಃ ಭಾಗವಹಿಸಿ ಆ ಪ್ರದರ್ಶನದ ಅನೇಕ ಮುಖಗಳನ್ನು, ಅನೇಕ ವಿಧವಾದ ಚಟುವಟಿಕೆಗಳನ್ನು ರೀತಿ, ನೀತಿಗಳನ್ನು ದಾಖಲಿಸಿಕೊಳ್ಳಬೇಕು. ಹಾಗೂ ಪ್ರದರ್ಶನಕಾರರನ್ನಷ್ಟೇ ಅಲ್ಲದೇ, ಅಲ್ಲಿ ಸೇರಿದ ಇತರ ಹಲವರ ಜೊತೆಯೂ ಸಂದರ್ಶನ ನಡೆಸಿ ಮಾಹಿತಿ ಸಂಗ್ರಹಿಸಬೇಕು (ಡಾ.ಟಿ. ಗೋವಿಂದರಾಜು: ಸಾಂದರ್ಭಿಕ ಸಿದ್ಧಾಂತ : ಪು: ೯೨-೯೩, ವೀರಣ್ಣ ದಂಡೆ ಸಂ: ಜಾನಪದ ಶಾಸ್ತ್ರ ಸಿದ್ಧಾಂತಗಳು). ಹೀಗೆ ಸಂಗ್ರಹಿಸಲ್ಪಟ್ಟ ಮಾಹಿತಿಯ ಪರಿಣಾಮದಿಂದಾಗಿ ನಮಗೆ ಮೌಖಿಕ ಪರಂಪರೆಯ ಕುರಿತಾಗಿ ಖಚಿತ ನವುವನ್ನು ತಾಳಬಹುದು. ಈ ಸಿದ್ಧಾಂತದ ಹುಟ್ಟಿಗೂ ಪೂರ್ವದಲ್ಲಿ ಉದಯಿಸಿದ ಇನ್ನೊಂದು ಸಿದ್ಧಾಂತ "ಮೌಖಿಕ ಸೂತ್ರಾತ್ಮಕ ಸಿದ್ಧಾಂತ" ಮೌಖಿಕ ಪರಂಪರೆಗೆ ಸಂಬಂಧಿಸಿದಂತೆ ಈ ಸೂತ್ರ ಅತ್ಯಂತ ಸಮಂಜಸವೆನಿಸುತ್ತದೆ. ಗಾಯಕರದಲ್ಲಿ ಪರಂಪರೆಯೊಂದು ಧೃವೀಕರಣ ಗೊಂಡಿರುತ್ತದೆಯಾದ್ದರಿಂತ ಆ ಪರಂಪರೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಈ ಸಿದ್ಧಾಂತ ಸಹಾಯಕ್ಕೆ ಬರುತ್ತದೆ. "ಮೌಖಿಕ ಕವಿಗೆ ಕಾವ್ಯ ಸಂರಚನೆಯ ಸಂದರ್ಭದಲ್ಲಿ ಅವನದೇ ಆದ ಮಾದರಿಗಳೇನೋ ಇರುತ್ತವೆ. ಆದರೆ ಅವು ಯಾವುವೂ ಸ್ಥಿರ ರೂಪದವು ಅಲ್ಲ, ಅವುಗಳನ್ನು ಆತ ಖಚಿತ ರೂಪದಲ್ಲಿ ಬಾಯಿಪಾಠದ ಮೂಲಕ ತನ್ನೊಳಗೆ ಸ್ಥಿರೀಕರಿಸಿಕೊಂಡಿರುವುದಿಲ್ಲ. ಪ್ರತಿ ಬಾರಿಗೂ ಹೊಸದೇ ಹೊಮ್ಮುತ್ತದೆ. ಇಲ್ಲಿ ಕಾಲಾವಧಿಯ ಪ್ರಶ್ನೆ ಎದುರಾಗುತ್ತದೆ. ಬರವಣಿಗೆ ಹಾಗೂ ಬಾಯಿ ಪಾಠದ ಸಾಧ್ಯತೆ ಇಲ್ಲದಿರುವುದರಿಂದ ಗಾಯಕ ತೀವ್ರಗತಿಯಲ್ಲಿ ಧಿಡೀರನೇ ಸಂರಚನೆ ಮಾಡಬೇಕಾಗುತ್ತದೆ. ಶಿಷ್ಟ ಕವಿಗಾದರೆ ಕುಳಿತು ಬರೆಯುವಲ್ಲಿ ಸಾಕಷ್ಟು ಸಮಯಾವಕಾಶವಿರುತ್ತದೆ. ಮೌಖಿಕ ಕವಿಗಾದರೆ ತನ್ನೆದುರು ಪ್ರೇಕ್ಷಕರು ಕುಳಿತಿರುವುದರಿಂದ ತನ್ನದೇ ಆದ ವೇಗದಲ್ಲಿ ಕಾವ್ಯ ಹೊಸೆಯುತ್ತಾ ಹೋಗಬೇಕಾಗುತ್ತದೆ. ಇಲ್ಲಿ ಕಾದು ಆಲೋಚಿಸಿ ಕಾವ್ಯ ನಿರ್ಮಾಣ ಮಾಡುವುದಕ್ಕೆ ಅವಕಾಶವಿಲ್ಲ, ಆಗ ಪರಂಪರೆ ಅವನ ನೆರವಿಗೆ ಬರುತ್ತದೆ. ಮೌಖಿಕ ಕಾವ್ಯದ ಮೂಲಕ ಹಲವಾರು ತಲೆಮಾರಿನಿಂದ ಬೆಳೆದು ಬಂದು ಲಯ ವಿನ್ಯಾಸಗಳ ಮೂಲಕ ಅಭಿವ್ಯಕ್ತಿಯನ್ನು ಪಡೆಯುವ ನಡುಕಟ್ಟುಗಳು, ಘಟನಾ ಪರಂಪರೆಗಳು ಅವನ ನೆರವಿಗೆ ಬರುತ್ತವೆ. ಮೌಖಿಕ ಕಾವ್ಯ ಪರಂಪರೆಯಲ್ಲಿ ಕಾವ್ಯ ಸಂರಚನೆಗೊಳ್ಳುವ ತಾಂತ್ರಿಕತೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಆತ-ಆಕೆ ಆ ಸಂಪ್ರದಾಯವನ್ನು

ಕರಗತ ಮಾಡಿಕೊಂಡ ಬಗೆಯನ್ನು ವಿವರವಾಗಿ ತಿಳಿದುಕೊಳ್ಳುವುದು ಅವಶ್ಯಕ. (ಎ.ವಿ ನಾವಡ:ಮೌಖಿಕ ಸೂತ್ರಾತ್ಮಕ ಸಿದ್ಧಾಂತ. ಪು: ೨೨-೨೮. ವೀರಣ್ಣ ದಂಡೆ (ಸಂ): ಜಾನಪದ ಶಾಸ್ತ್ರದ ಸಿದ್ಧಾಂತಗಳು) ಇದೊಂದು ಪ್ರತಿಕ್ರಿಯೆಯಾಗಿರುವುದರಿಂದ ಇದನ್ನು ಅರ್ಥಮಾಡಿಕೊಳ್ಳುವುದು ಅಷ್ಟೊಂದು ಸುಲಭವಲ್ಲ. ಈ ಪ್ರಕ್ರಿಯೆಯು ಮುಖ್ಯವಾಗಿ ಮೂರು ಹಂತಗಳಲ್ಲಿ ನಡೆಯುವುದನ್ನುಕಾಣಬಹುದು. ಮೊದಲನೆ ಹಂತದಲ್ಲಿ ಗಾಯಕ ಅಥವಾ ಗಾಯಕಿ ತನ್ನ ಹಿರಿಯರಿಂದ ಗಾಯಕ ಅಥವಾ ಪ್ರದರ್ಶನವೊಂದನ್ನು ಆಲಿಸುವುದು, ನೋಡುವುದು ನಡೆಯುತ್ತದೆ. ಎರಡನೆ ಹಂತದಲ್ಲಿ ತಾನು ಆಲಿಸಿದ ಅಥವಾ ನೋಡಿದ ಪ್ರದರ್ಶನವೊಂದನ್ನು ತಾನೇ ಸ್ವತಃ ಒಬ್ಬಂಟಿಯಾಗಿ ಮಾಡುವುದು ಅಥವಾ ಹಾಡಲು ತೊಡಗುವುದು. ಇಲ್ಲಿ ಯಾವುದೇ ರೀತಿಯ ಪ್ರಜ್ಞಾಪೂರ್ವತೆ ಕಂಡು ಬರುವುದಿಲ್ಲ. ಅಪ್ರಜ್ಞಾ ಪೂರ್ವಕವಾಗಿಯೇ ಗಾಯಕ ಅಥವಾ ಗಾಯಕಿಯಲ್ಲಿ ಆ ಕಲೆ ಅನುಕರಣಗೊಳ್ಳುತ್ತಿರುತ್ತದೆ. ಮೂರನೆ ಹಂತದಲ್ಲಿ ತಾನು ಕಲಿತದ್ದನ್ನು ಪೂರ್ತಿಯಾಗಿ ಅಲ್ಲದಿದ್ದರೂ ಪ್ರೇಕ್ಷಕರೆದುರು ಪ್ರದರ್ಶನ ಮಾಡುತ್ತಾರೆ. ಹೀಗೆ ಮೂರು ಹಂತದಲ್ಲಿ ಸಾಗಿ ಬರುವ ಈ ಪ್ರದರ್ಶನ ತನ್ನದೇ ಆದ ರೀತಿಯಲ್ಲಿ ಪರಂಪರೆಯೊಂದನ್ನು ಅನುಸರಿಸುತ್ತಿರುತ್ತದೆ.ಅದು ಮೌಖಿಕ ಪರಂಪರೆ. ಆಳುವ ವರ್ಗ ಯಾವುದನ್ನು ಅಕ್ಷರ ಮಾಧ್ಯಮದ ಮೂಲಕ ಮಾನ್ಯ ಮಾಡಲೆತ್ನಿಸುವುದೋ ಅದನ್ನು ಮೌಖಿಕ ಮಾಧ್ಯಮದ ಮೂಲಕ ಜನರು ವಿಮರ್ಶೆಗೆ ಒಳಪಡಿಸುತ್ತಾರೆ. ಎಷ್ಟೋ ಬಾರಿ ಈ ಎರಡು ವೃತ್ತಿಗಳು ಪರಸ್ಪರ ವಿರೋಧಿ ನೆಲೆಗಳಲ್ಲಿರುತ್ತವೆ. ಒಂದು ಅಕ್ಷರದ ಮೂಲಕ, ಇನ್ನೊಂದು ಬಾಯ್ಮಾತಿನ ಮೂಲಕ ಉಳಿಯುವುದೇ ಇದಕ್ಕೆ ಒಳ್ಳೆಯ ಸಾಕ್ಷಿ. ಸಾಮಾನ್ಯವಾಗಿ ಅಕ್ಷರ ರೂಪದಲ್ಲಿಲ್ಲದಿರುವುದನ್ನು 'ಶಾಶ್ವತ ಎಂದೂ' ಅಕ್ಷರ ರೂಪದಲ್ಲಿರುವುದನ್ನು 'ಅಶಾಶ್ವತ'ವೆಂದೂ ವ್ಯಾಖ್ಯಾನಿಸಲಾಗುತ್ತದೆ. ಇದು ಅಕ್ಷರದ ಪರವಾಗಿರುವಂಥವರ ತರ್ಕ. ಆದರೆ ವಾಸ್ತವವಾಗಿ ಮೌಖಿಕ ರೂಪ ದಲ್ಲಿರುವಂಥದ್ದು ಅಶಾಶ್ವತ ಏನೂ ಆಗಿರುವುದಿಲ್ಲ. ಅದು ಕಂಠಸ್ಥ ಪರಂಪರೆಯಲ್ಲಿಯೇ ಉಳಿಯುತ್ತದೆ. ಇಡೀ ಜಾನಪದವೇ ಹಾಗೆ ಉಳಿದಿದೆ. ಅಕ್ಷರದ ಬಂಧನ ಇಲ್ಲದ್ದರಿಂದ ಅದು ಹೆಚ್ಚು ಲವಲವಿಕೆಯಿಂದ ಬೆಳೆಯುತ್ತದೆ. ಬದಲಾಗುತ್ತಿರುವ ಸಮಾಜದೊಂದಿಗೆ ತನ್ನನ್ನು ಗುರುತಿಸಿಕೊಳ್ಳುತ್ತಾ ಹೆಚ್ಚು ಹೆಚ್ಚು ಸಮಕಾಲೀನವಾಗುತ್ತಾ ಕ್ರಿಯಾಶೀಲವಾಗುತ್ತಿರುತ್ತದೆ. (ಪುರುಷೋತ್ತಮ ಬಿಳಿಮಲೆ, ಕೊಡುಕಟ್ಟು, ಪು: ೯೧.) ಲಿಖಿತದಲ್ಲಿರುವಂತೆ ಮೌಖಿಕತೆಯಲ್ಲಿ ಯಾವುದೂ ಕೂಡ ಧೃವೀಕರಣ ಗೊಂಡಿರುವುದಿಲ್ಲ. ಒಂದು ವೇಳೆ ಧೃವೀಕರಣಗೊಂಡರೆ ಅಲ್ಲಿ ಯಾವ ಮೌಲ್ಯಗಳೂ ಉಳಿದಿರಲು ಸಾಧ್ಯವಿಲ್ಲ. ಕಾರಣ ಮೌಖಿಕತೆ ಕ್ರಿಯಾ ಶೀಲವಾದುದು, ಮತ್ತು ಅದೊಂದು ರೀತಿಯಲ್ಲಿ ಪ್ರಕ್ರಿಯಾತ್ಮಕವಾದ ಲೋಕವಾಗಿದೆ. ಬಹುತೇಕ ಆಚರಣಾತ್ಮವಾದ ಜಗತ್ತೊಂದನ್ನು ಇದು ಸೃಷ್ಟಿಸಿಕೊಂಡಿರುತ್ತದೆ. ಈ ಆಚರಣೆಗಳು ಮತ್ತೆ ಪುನಃ ಸಾಹಿತ್ಯದ ರೂಪದಲ್ಲಿ ಹೊರ ಹೊಮ್ಮುತ್ತವೆ. ಉದಾ ಐತಿಹ್ಯ, ಪುರಾಣಕತೆ, ಗಾದೆ, ಒಗಟು, ಇತ್ಯಾದಿಗಳೆಲ್ಲವೂ ಬಹುತೇಕ ಮೌಖಿಕ ಪರಂಪರೆಯ ಆಚರಣಾತ್ಮಕ ಲೋಕವೊಂದನ್ನು ತೆರೆದಿಡುತ್ತವೆ. ಮೌಖಿಕ ಸಾಹಿತ್ಯ ರೂಪಗಳಾದ ಕತೆಗಳು, ಕಾವ್ಯಗಳು, ಮತ್ತು ಕಥನಗೀತೆಗಳಲ್ಲಿ ನಾಯಕನನ್ನು ಹೇಗೆ ಕಂಡರಿಸಲಾಗಿದೆ ಎಂದು ನೋಡಬೇಕು. ಇದೇ ಸಂದರ್ಭದಲ್ಲಿ ಕತೆಗಳ ಬಗ್ಗೆ ಎ.ಕೆ. ರಾಮಾನುಜನ್,

ಕಾವ್ಯಗಳ ಬಗ್ಗೆ ವಿವೇಕ ರೈ, ಮತ್ತು ಕಥನಗೀತೆಗಳ ಬಗ್ಗೆ ಜೀ.ಶಂ. ಪರಶಿವಯ್ಯನವರು ನಡೆಸಿದ ಅಧ್ಯಯನಗಳನ್ನು ನೆನಪಿಟ್ಟುಕೊಳ್ಳಬೇಕು. ರಾಮಾನುಜನ್ ಹೇಳಿದ ಹಾಗೆ ಕತೆಗಳು ಭಾರತದ ಘೋಷಿತ ಮೌಲ್ಯಗಳಿಗಿಂತ ಭಿನ್ನವಾದ ಸತ್ಯವನ್ನು ಅನಾವರಣಗೊಳಿಸುತ್ತವೆ. ನಮ್ಮ ಮಾರ್ಗ ಸಂಪ್ರದಾಯ ಕಲಾಕೃತಿಗಳಲ್ಲಿ ಹಿರಿಯ ಮಗನೇ ನಾಯಕನಾಗಿ ಪಟ್ಟವೇರುತ್ತಾನೆ. (ಉದಾ: ರಾಮಾಯಣದಲ್ಲಿ ರಾಮ, ಭಾರತದಲ್ಲಿ ಧರ್ಮರಾಯ ಭಾಗವತದಲ್ಲಿ ಬಲರಾಮ) ಆದರೆ ಜನಪದ ಕತೆಗಳಲ್ಲಿ ಕಿರಿಯ ಮಗನೇ ಸಾಹಸಗಳನ್ನು ಮೆರೆಯುತ್ತಾನೇ. ಅವಳಿಗಳಿದ್ದಲ್ಲಿ ಕಿರಿಯನೇ ಉಗ್ರನಾಗಿರುತ್ತಾನೆ. ಈ ಕಿರಿಯರ ಸಾಹಸ ಕಲ್ಪನೆಯಲ್ಲೂ ಜನಪದರು ತಮ್ಮದೇ ಆದ ಧೋರಣೆಗಳನ್ನು ಹೊಂದಿರುವಂತಿದೆ. ಕತೆ, ಕಾವ್ಯ, ಪಾಡ್ದನ ಮತ್ತಿತರ ಪ್ರಕಾರಗಳಲ್ಲಿ ಕಂಡುಬರುವ ವೀರಕಲ್ಪನೆಯಲ್ಲಿ ಒಂದು ಬಗೆಯ ಕ್ರಿಯಾತ್ಮಕ ಗುಣಧರ್ಮ ಕಂಡು ಬರುತ್ತದೆ. ಈ ಪ್ರಕಾರಗಳಲ್ಲಿ ಒಬ್ಬಾತ ವೀರನಾಗಿ ಸಾಹಸಗಳನ್ನು ಮೆರೆಯಲು ಕಾರಣ ಆತ ದೈವದ ಅವತಾರವಾಗಿರುವುದಿಲ್ಲ. ಅಥವಾ ಅವನಿಗೆ ಪೂರ್ವಜನ್ಮದ ಪುಣ್ಯ ವಿಶೇಷಗಳಾವುವೂ ಇರುವುದಿಲ್ಲ. ಶ್ರೀರಾಮನು ವಿಷ್ಣುವಿನ ಅವತಾರ ಆಗಿರುಂತೆ, ಅರ್ಜುನನ್ನು ಇಂದ್ರನ ಮಗನಾಗಿರುವಂತೆ ಇಲ್ಲಿ ಘಟನೆಗಳನ್ನು ಸಂಘಟಿಸಲಾಗುತ್ತಿಲ್ಲ. ಈ ಜನಪದ ನಾಯಕರು ಜನಿಸುವಾಗ ಪುಷ್ಪ ವೃಷ್ಟಿಯೂ ಆಗುವುದಿಲ್ಲ. ಒಂದಾನೊಂದು ಊರಿನಲ್ಲಿ, ಒಂದಾನೊಂದು ಕಾಲದಲ್ಲಿ ಆತ ಎಲ್ಲರಂತೆ ಹುಟ್ಟುತ್ತಾನೆ. ಆತ ಬೆಳೆಯುತ್ತಾ ಇರುವಾಗ ಕೆಲವು ಬಗೆಯ ಸವಾಲುಗಳನ್ನು ಇದಿರಿಸಬೇಕಾಗಾತ್ತದೆ. ತೀವ್ರತರದ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗ ಬೇಕಾಗುತ್ತದೆ. ಇಂಥ ಸಂದಿಗ್ಧಗಳಲ್ಲಿ ಕೇವಲ ಮಾನವೀಯವಾಗಿ ನಡೆದುಕೊಳ್ಳುವ ಈ ನಾಯಕರು ಒಂದೋ ಸವಾಲುಗಳನ್ನು ಉತ್ತರಿಸಿ, ಗೆದ್ದು ಜನಪ್ರಿಯರಾಗುತ್ತಾರೆ. ಇಲ್ಲವೇ ಅಕಾಲ ಮರಣಕ್ಕೆ ಒಳಗಾಗಿ ಸತ್ತು ರಕ್ಷಕ ದೈವಗಳಾಗಿ ಮಾರ್ಪಡುತ್ತಾರೆ. ನಾಯಕನ ಇಂಥ ಸಾಧನೆಗಳಿಗೂ ಆತನ ಸಾಮಾಜಿಕ ಸ್ಥಾನಮಾನಗಳಿಗೂ ಏನೇನೂ ಸಂಬಂಧ ಇರುವುದಿಲ್ಲ. ಅದರ ಬದಲು ಬದುಕನ್ನು ಅವರು ಇದಿರಿಸುವ ಸಂದರ್ಭಗಳಲ್ಲಿ ತೋರುವ ಕ್ರಿಯಾತ್ಮಕತೆಯೇ ಅವರನ್ನು ವೀರರನ್ನಾಗಿಸುತ್ತದೆ." (ಪುರುಷೋತ್ತಮ ಬಿಳಿಮಲೆ, ಕೂಡು-ಕಟ್ಟು, ಪು.೧೧೫-೧೧೬) ಈ ವೀರತನ, ಶೂರತನಗಳ ಗುಣಗಾನ ನಡೆಯುವುದು ಆಚರಣೆಗಳ ಸಂದರ್ಭದಲ್ಲಿ, ಹಾಗಾಗಿಯೇ ನಮಗೆ ಆಚರಣೆಗಳು ಬಹುದೊಡ್ಡ ಲೋಕಕ್ಕೆ ಕರೆದೊಯ್ಯುತ್ತವೆ. ಮತ್ತು ಈ ಆಚರಣಾ ಲೋಕವು ಮೌಖಿಕ ಮಾಧ್ಯಮದ ಮೂಲಕವೇ ತನ್ನನ್ನು ತಾನು ತೆರೆದುಕೊಳ್ಳುತ್ತದೆ. ಮೌಖಿಕ ಮಾಧ್ಯಮವು ಜನಪದ ಸಂಸ್ಕೃತಿಯ ಒಂದು ಭಾಗವಾಗಿದೆ. ಈ "ಸಂಸ್ಕೃತಿಯ ಶಿಷ್ಟವು ಕಾಲಕ್ಕೆ ಬದ್ಧವಾದಂತೆ ಸ್ಥಳಕ್ಕೆ ಬದ್ಧವೂ ಹೌದು ಹಿಂದೂಗಳ ಪವಿತ್ರ ಸ್ಥಳ ಮುಸ್ಲಿಮರಿಗೆ ಪವಿತ್ರ ಅಲ್ಲ. ಕ್ರಿಶ್ಚಿಯನ್ನರ ಚರ್ಚುಗಳ ಆವರಣ ಹಿಂದೂಗಳಿಗೆ ಯಾವ ಅರ್ಥವನ್ನು ನೀಡುವುದಿಲ್ಲ. ಸತ್ತವರನ್ನು ಹೂಳುವ ಸ್ಥಳದಲ್ಲಿ ಕ್ರಿಶ್ಚಿಯನ್ನರು ಉದ್ಯಾನಗಳನ್ನು ಬೆಳೆಸುತ್ತಾರೆ. ಮುಸ್ಲಿಮರು ತಾಜಮಹಲಿ ನಂತಹ ಸುಂದರ ಕಟ್ಟಡಗಳನ್ನು ಕಟ್ಟಿಸುತ್ತಾರೆ. ಹಿಂದೂಗಳು ಭೂತ ಪ್ರೇತಗಳ ಭಯದಲ್ಲಿ ಸ್ಮಶಾನದತ್ತ ತಲೆ ಕೂಡಾ ಹಾಕಿ ಮಲಗುವುದಿಲ್ಲ. "ಕರ್ನಾಟಕ ಮಾತೆ" ತಮಿಳರಲ್ಲಿ ಭಾವೋತ್ಕಟತೆಯನ್ನು ಉಂಟು ಮಾಡದು. ಇಂತಹ ಸ್ಥೂಲ ವಿವರಗಳು ನಿಜವಾಗಿರುವಂತೆ, ಸಂಸ್ಕೃತಿಯ

ಸೂಕ್ಷ್ಮ ಸ್ತರದಲ್ಲೂ ಸ್ಥಳ ಬದ್ಧತೆ ಕಂಡುಬರುತ್ತದೆ. ಮನೆಯ ಎದುರಿನ ಅಂಗಳವು ಮನೆಯಜನಗಳ ಒಡೆತನಕ್ಕೆ ಸಂಬಂಧಿಸಿದರೆ, ಮದುವೆಯ ದಿನ ಅಂಗಳವು ಸಾರ್ವಜನಿಕ ಪ್ರದೇಶವಾಗುತ್ತದೆ. ಅಂಥ ಜಾಗದಲ್ಲಿ ಕಂಬಗಳ ಮೂಲಕ ಪ್ರತ್ಯೇಕಿತವಾದ ಧಾರಮಂಟಪವು ಮದುವೆಯ ದೃಷ್ಟಿಯಿಂದ ಪವಿತ್ರ ಸ್ಥಳವಾಗುತ್ತದೆ. ಮದುವೆಯ ನಂತರ ಅದು ಅಂಗಳದ ಭಾಗವೇ ಆಗಿ ಬಿಡುತ್ತದೆ. ಇಲ್ಲಿ ಸ್ಥಳವು ಸಂಬಂಧಿಸಿದಂತೆ ಸಂಸ್ಕೃತಿಯು ನಿಯತವಾದ ಒಂದು ನಿಲುವನ್ನು ಸದಾ ಹೊಂದಿರುತ್ತದೆ. ಇಲ್ಲಿ ಸ್ಥಳವನ್ನೇ ಒಂದು ಪರಿಕಲ್ಪನೆಯಾಗಿ ಪರಿಭಾವಿಸಿ ಏಕ ಘಟಕ ರೂಪದಲ್ಲಿ ಅಸ್ಥಿತ್ವವನ್ನು ಪ್ರದರ್ಶಿಸಲಾಗುವುದು." (ಬಿಳಿಮಲೆ, ಕೂಡು-ಕಟ್ಟು, ಪು-೭೩-೭೪) ಈ ಪ್ರದರ್ಶನವು ಕೇವಲ ಆಚರಣೆಯ ಒಂದು ಭಾಗವಾಗಿ ಮಾತ್ರ ಕಾಣಲು ಸಾಧ್ಯ. ಆಯಾ ಆಚರಣೆಯ ಹಿಂದೆ ಒಂದು ಸಂಪ್ರದಾಯದ ಅಸ್ತಿತ್ವವಿರುತ್ತದೆ. ಆಯಾಯ ಸಂಪ್ರದಾಯವು ಒಂದೊಂದು ಮೌಖಿಕ ಪರಂಪರೆಯನ್ನು ಪ್ರತಿನಿಧಿಸುತ್ತಿರುತ್ತವೆ ಮತ್ತು ಪ್ರತಿಪಾದಿಸುತ್ತಿರುತ್ತವೆ. ಇಲ್ಲಿ ಯಾವುದೇ ರೀತಿಯ ಬಿಕ್ಕಟ್ಟುಗಳನ್ನು ಕಾಣಲು ಸಾಧ್ಯವಿಲ್ಲ. ಒಂದು ವೇಳೆ ಹಾಗೇನಾದರೂ ಬಿಕ್ಕಟ್ಟುಗಳು ಕಾಣಿಸಿಕೊಂಡಿದ್ದೇ ಆದರೆ ಅದು ಅನ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಮಾತ್ರ, ಒಂದೇ ಸಂಸ್ಕೃತಿಯಲ್ಲಿ ಯಾವುದೇ ರೀತಿಯ ಬಿಕ್ಕಟ್ಟುಗಳು ಕಾಣಿಸಿಕೊಳ್ಳಲು ಸಾಧ್ಯವಿಲ್ಲ. ಒಂದು ವೇಳೆ ಆ ಬಿಕ್ಕಟ್ಟು ಕಾಣಿಸಿಕೊಂಡಿದ್ದೇ ಆದರೆ ಅದರ ಒಳಗಿನ ಜನರ ಭಿನ್ನ ನಡಾವಳಿಗಳ ಮೂಲಕವೇ ಕಾಣಿಸಿಕೊಳ್ಳುತ್ತದೆ. ಆ ಜನರ ನಡುವಿನಿಂದಲೇ ಅದು ಪ್ರಕಟಗೊಳ್ಳುತ್ತಾ ಹೋಗುತ್ತದೆ. ಈ ಬಿಕ್ಕಟ್ಟಿನ ಸಂದರ್ಭಗಳಲ್ಲಿ ಸಂಸ್ಕೃತಿಯು ಸಂಘರ್ಷದ ಮುಖಾಂತರ ತನ್ನಲ್ಲಿ ಉಂಟಾದ ಬಿಕ್ಕಟ್ಟನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತದೆ. ಅಂದರೆ 'ತನ್ನದು' ಎಂಬುದನ್ನು ಉಳಿಸಿಕೊಳ್ಳಲು ಹರಸಾಹಸವೇ ಮಾಡುತ್ತದೆ. ಅದು ಗರಿಷ್ಠ ಮಟ್ಟದಲ್ಲಿ ಪ್ರಯತ್ನ ಮಾಡುತ್ತದೆ. ಅಂತರ್ಜಾತೀಯ ಮದುವೆಗಳ ಸಂದರ್ಭ ಮತ್ತು ಸಾವಿನ ಸಂದರ್ಭ ಇದಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಈ ಎರಡೂ ಸಂದರ್ಭಗಳು ಒಂದು ರೀತಿಯಲ್ಲಿ ಅಸಮತೋಲನವನ್ನು ಸೃಷ್ಟಿ ಮಾಡಿ ಬಿಡುತ್ತವೆ. ಈ ರೀತಿಯ ಸಾಂಸ್ಕೃತಿಕ ಅಸಮತೋಲನವನ್ನು ಕಾಪಾಡಿಕೊಳ್ಳುವ ಸಲುವಾಗಿಯೇ ಸಮಾಜದಲ್ಲಿ ಅಂತರ್ಜಾತೀಯ ವಿವಾಹಗಳನ್ನು ನಿಷೇಧಿಸಲಾಗಿದೆ. ಸಾವಿನಿಂದ ಉಂಟಾಗುವ ಅಸಮತೋಲನವನ್ನು ಸರಿಪಡಿಸಿಕೊಳ್ಳುವ ಅಥವಾ ಕಾಪಾಡಿಕೊಳ್ಳುವ ಸಲುವಾಗಿಯೇ ಆಚರಣೆಗಳನ್ನು ರೂಢಿಗೆ ತಂದು ಕೊಳ್ಳಲಾಗಿದೆ. ಈ ಸಾವಿನ ಕುರಿತಾದ ಆಚರಣೆಗಳು ಒಂದೊಂದು ಸಮುದಾಯದಲ್ಲಿ ಒಂದೊಂದು ಬಗೆಯಲ್ಲಿದೆ. ಸತ್ತ ವ್ಯಕ್ತಿಯನ್ನು 'ಇಂತಿಷ್ಟು ದಿನದ'ವರೆಗೂ ಹೊರಗಡೇ ಊಟವಿಟ್ಟು 'ಒಳಗೆ' ಕರೆದು ಕೊಳ್ಳುವ ಪದ್ಧತಿ ಅದು 'ತಿಥಿ'ಯ ರೂಪದಲ್ಲಿ ಇರುವುದನ್ನು ಕಾಣುತ್ತೇವೆ. ಇದನ್ನೆಲ್ಲಾ ಗಮನಿಸದರೆ ಯಾವುದೇ ಒಂದು ಸಂಸ್ಕೃತಿಯು ಅಥವಾ ಸಂಸ್ಕೃತಿಯ ಶಿಷ್ಟವು ಸಾರ್ವತ್ರಿಕವಾದ ಗುಣ ಲಕ್ಷಣಗಳನ್ನು ಹೊಂದಿಲ್ಲವೆಂಬುದು ಅರಿವಿಗೆ ಬರುತ್ತದೆ. ಹಾಗೆನೇ ಅದು ವ್ಯಕ್ತಿ, ಸ್ಥಳ ಮತ್ತು ಕಾಲದೊಂದಿಗೆ ಗಾಢ ಸಂಬಂಧ ಹೊಂದಿರುತ್ತದೆ. ಭಾರತೀಯ ಸಂದರ್ಭದಲ್ಲಿ ವ್ಯಕ್ತಿಗೆ ಅಥವಾ ಗಾಢ ಸಂಬಂಧ ಹೊಂದಿರುತ್ತದೆ. ಭಾರತೀಯ ಸಂದರ್ಭದಲ್ಲಿ ವ್ಯಕ್ತಿಗೆ ಅಥವಾ ಅವನ ವೈಯಕ್ತಿಕ ಅಸ್ಥಿತ್ವಕ್ಕೆ ಅಷ್ಟೇನೂ ಮಾನ್ಯತೆಯಿಲ್ಲದಿರುವುದನ್ನು ಕಾಣಬಹುದು. ಆದರೆ ಇಲ್ಲಿ ಸಮುದಾಯಕ್ಕೆ

ವಿಶೇಷವಾದ ಮಾನ್ಯತೆ, ಬೆಲೆಯಿರುವುದನ್ನು ನೋಡುತ್ತೇವೆ. ಈ ನಿಟ್ಟಿನಲ್ಲಿ ಜನಸಮುದಾಯವು 'ಸುಗ್ಗಿ'ಯ ಸಂಭ್ರಮದಲ್ಲಿ ಭಾಗವಹಿಸುವಿಕೆಯು ತುಂಬಾ ವಿಶೇಷ ಮತ್ತು ಅಷ್ಟೇ ವಿಚಿತ್ರವಾಗಿರುತ್ತದೆ. ಕಾಲ ಮತ್ತು ಜನ ಇಲ್ಲಿ ಒಂದೇ ರೀತಿಯ ಸಂಭ್ರಮವನ್ನನು ಭಾವಿಸುತ್ತಿರುವ ಸಂದರ್ಭದಲ್ಲಿ ಭೂಮಿ ಮಾತ್ರ ತುಂಬಾ ಸಮೃದ್ಧವಾಗಿರುತ್ತದೆ. ಇದರ ಪರಿಣಾಮವಾಗಿ ಸಮುದಾಯಗಳೂ ಕೂಡ ಈ ಸುಗ್ಗಿಯನ್ನು ಬೇರೆ ಬೇರೆ ರೂಪಕಗಳಲ್ಲಿ ಹಿಡಿದಿಡುತ್ತವೆ. ಅಲ್ಲದೆ ಈ ಸುಗ್ಗಿಯ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಹಲವಾರು ರೀತಿಯ ಆಚರಣೆಗಳು ಅಸ್ತಿತ್ವದಲ್ಲಿವೆ. ಇದೇ 'ಸುಗ್ಗಿ'ಯು ಉತ್ಪಾದನಾ ಪ್ರಕ್ರಿಯೆಗೆ ಸಂಬಂಧ ಪಟ್ಟಿರುವುದರಿಂದ ಇಲ್ಲಿ ಆಚರಣೆಗಳು ಕೂಡ ಈ ಉತ್ಪಾದನಾ ಪ್ರಕ್ರಿಯೆಯ ಭಾಗವಾಗಿಯೇ ರೂಪುಗೊಂಡಿರುತ್ತವೆ. ಮತ್ತು ಇದಕ್ಕೆ ಸಂಬಂಧ ಪಟ್ಟ ಸಾಹಿತ್ಯವೆಲ್ಲವೂ ಕೂಡ ಇದರ ಭಾಗವಾಗಿಯೇ ಸೃಷ್ಟಿಗೊಂಡಿರುವುದನ್ನು ಕಾಣಬಹುದು. ಆ ಕಾರಣಕ್ಕಾಗಿಯೇ ಮೌಖಿಕತೆಯು ಪರಂಪರೆಯ ಒಂದು ಭಾಗವಾಗಿ, ಆಚರಣಾತ್ಮಕ ನೆಲೆಯಲ್ಲಿ ಹೆಚ್ಚು ಅಂತರ್ಗತವಾಗಿ, ಸಂಸ್ಕೃತಿಯ ಅಭಿನ್ನ ಅಂಗವಾಗಿ ಅಸ್ತಿತ್ವ ಪಡೆದಿದೆ.

ಲಿಖಿತತೆ ಎನ್ನುವುದು ಸಂಜ್ಞೆಗಳನ್ನು ಜಾರಿಗೊಳಿಸುವ ಮತ್ತು ಪ್ರತಿನಿಧಿಸುವ ಒಂದು ಖಚಿತ ರೂಪವಾಗಿದೆ. ಇದನ್ನು ನಾವು ಬರವಣಿಗೆ ಎಂದೂ ಕರೆಯಬಹುದು. ಈ ಬರವಣಿಗೆಯ ಖಚಿತತೆಗೆ ಕಾರಣೀಭೂತವಾದ ಅಂಶಗಳು ಅನುಕ್ರಮ, ಅವಕಾಶ ಮತ್ತು ಕಾಲ. ಈ ಅಂಶಗಳು ಬರವಣಿಗೆಗೆ ಖಚಿತತೆಯನ್ನು ತಂದುಕೊಡುತ್ತವೆ ಎನ್ನುವುದಕ್ಕಿಂತ ಈ ಮೂರು ಅಂಶಗಳಿಗೆ ಬರವಣಿಗೆ ಖಚಿತತೆ ಒದಗಿಸುತ್ತದೆ ಎನ್ನುವುದೇ ಸೂಕ್ತವಾದುದು. ಹಾಗೆ ನೋಡಿದರೆ ಲಿಖಿತತೆ ಎನ್ನುವುದು ಸಾಮಾನ್ಯ ಪ್ರಕ್ರಿಯೆಯ ಒಂದು ಭಾಗ ಮಾತ್ರ. ಆ ಪ್ರಕ್ರಿಯೆಯು ಮಾನವ ನಿರ್ಮಿತ 'ಕಥನ'ಗಳಲ್ಲಿ ಸ್ಥಾನ ಪಡೆಯುತ್ತದೆ. ಇದು ಜಾಗತಿಕ ಮಟ್ಟದಲ್ಲಿ ನಡೆಯುವ ಸಂದರ್ಭದಲ್ಲಿ 'ಜಗತ್ತು ಅಲ್ಪ' ಎನ್ನುವ ಹಿನ್ನೆಲೆಯೊಂದಿಗೆ ಜಗತ್ತನ್ನು ಪ್ರತಿನಿಧಿಸುತ್ತದೆ. ನೈಜತೆಯ ಆಧಾರದ ಮೇಲೆ ಜಗತ್ತನ್ನು ಪ್ರತಿನಿಧಿಸುವ ಕಥನ ಪರಂಪರೆಯೆಂದರೆ 'ರಾಚನಿಕ' ಹಿನ್ನೆಲೆಯ ಕಥನ ಪರಂಪರೆಯಾಗಿದೆ. ಇದು ಕಥನ ಸೃಷ್ಟಿಸುವ ಕ್ರಿಯೆಯಲ್ಲಿ ಸೃಷ್ಟಿಕರ್ತ ಮತ್ತು ಕಥಾವಸ್ತುವನ್ನು ಪ್ರತಿನಿಧಿಸುತ್ತಾರೆಅಥವಾ ಸೃಷ್ಟಿಕರ್ತ ಯಾವುದನ್ನು ನಿಯಂತ್ರಿಸುತ್ತಾನೆ ಮತ್ತು ಕಥಾವಸ್ತು ಏನನ್ನು ಪ್ರತಿನಿಧಿಸುತ್ತದೆ ಎನ್ನುವುದರ ಬದಲಿಗೆ, ಸಾಮಾಜಿಕತೆಯ ಹಿನ್ನೆಲೆಯಲ್ಲಿ ರಾಚನಿಕ ಸಂದರ್ಭವನ್ನು ಗ್ರಹಿಸುತ್ತದೆ; ಅಂದರೆ, ಸೃಷ್ಟಿಕರ್ತ ಮತ್ತು ವಸ್ತು ಯಾವುದನ್ನು ನಿಜವಾಗಿ ಅರ್ಥೈಸುತ್ತಾರೆ ಎನ್ನುವುದರ ಹಿನ್ನೆಲೆಯಲ್ಲಿ ಅದನ್ನು ವಿವರಿಸುತ್ತದೆ. ಅಲ್ಲದೆ ತುಂಬಾ ಖಚಿತವಾಗಿ ಇದು ಕೆಲವು ಸಾಧ್ಯತೆಗಳು ಮತ್ತು ಬದಲಾವಣೆಗಳ ಕುರಿತಾಗಿಯೂ ವಿವರಗಳನ್ನು ಒದಗಿಸುತ್ತದೆ. (ಕಥನಗಳ ಅಂಶಗಳಲ್ಲಿಯ) ವಿವರಗಳನ್ನು ಒದಗಿಸುವುದೆಂದರೆ ಇಲ್ಲಿ ಕಥನವನ್ನು ಪ್ರತಿನಿಧಿಸುವುದಾಗಿದೆ ಎಂದೇ ಅರ್ಥ ಈ ಎಲ್ಲವುಗಳ ಕುರಿತಾದ ಪರಿಕಲ್ಪನೆ ಎಂದರೆ 'ಕಥೆ.' ಅದು 'ಕಥನ'ದ ತಕ್ಷಣದ ಪರ್ಯಾಯವೊಂದನ್ನು ವಿವರಿಸುತ್ತದೆ.

ಕಥೆ ಮತ್ತು ಕಥನಗಳು ಒಂದಕ್ಕೊಂದು ಬೆಸೆದು ಕೊಂಡಿವೆ. ಒಂದಕ್ಕೊಂದು ಪೂರಕ ಸಂಬಂಧವನ್ನು ಹೊಂದಿವೆ. ಪ್ರಾಥಮಿಕ ಸಂಶೋಧನೆಗಳಿಂದಲೂ ಇದು ದೃಢಪಟ್ಟಿದೆ. ಪ್ರಾಥಮಿಕ ಸಂಶೋಧನೆಗಳೆಲ್ಲವೂ ಇದನ್ನು ಪ್ರಕಟಪಡಿಸಿವೆ. ಇದರಲ್ಲಿ ಮೂರು ಪ್ರತ್ಯೇಕ ಭಾಗ ಅಥವಾ ಹಂತಗಳಿವೆ. ಅವುಗಳು ಕೆಲವೊಮ್ಮೆ ತುಂಬಾ ಆಹ್ಲಾದ ಭರಿತ ರೀತಿಯಲ್ಲಿ ಪ್ರತ್ಯೇಕತೆಯನ್ನು ಪಡೆದುಕೊಳ್ಳುತ್ತವೆ. ಅವುಗಳೇ ಕಥೆ, ಕಥಾವಸ್ತು ಮತ್ತು ಕಥನ, ಇನ್ನೂ ಹೆಚ್ಚಿನ ವಿವರಣೆಗಳು ಲಭಿಸುವುದಕ್ಕಿಂತ ಮುಂಚೆ ಅಂದರೆ ಇವುಗಳಲ್ಲಿ ಒಂದೊಂದು ರೀತಿಯ ತಂತ್ರಗಳು ಅಡಗಿವೆ. ಇವುಗಳು ವಿವರಿಸಿಕೊಳ್ಳುವ ಬದಲಿಗೆ ಸಮಕಾಲೀನ ವಿವರಗಳೊಂದಿಗೆ, ಪ್ರಾದೇಶಿಕ, ಜನಪ್ರಿಯ ಎನ್ನುವ ಕ್ರಮವೊಂದನ್ನು ರೂಪಿಸಿಕೊಂಡು ಈ ಅಂಶಗಳನ್ನು ವಿವರಿಸಿಕೊಳ್ಳಲಾಗಿದೆ. ಮತ್ತು ವಿಸ್ತರಿಸಿಕೊಳ್ಳಲಾಗಿದೆ. ಈ ಕಾರಣಕ್ಕಾಗಿಯೇ ಕಥನ ಪರಂಪರೆಯ ಈ ಮೂರು ಅಂಶಗಳು 'ಸಡಿಲ'ವಾಗುತ್ತಾ ಹೋಗುತ್ತಿವೆ ಎಂದರೆ ತಪ್ಪಾಗಲಿಕ್ಕಿಲ್ಲ.

ಮುಖ್ಯವಾಗಿ ಈ ಮೂರು ಅಂಶಗಳಲ್ಲಿ ಭಿನ್ನತೆಯಿದೆ. ಕಥೆಯಲ್ಲಿ ಎಲ್ಲಾ ಘಟನೆಗಳನ್ನು ಚಿತ್ರಿಸಲಾಗಿರುತ್ತದೆ. ಕಥಾವಸ್ತುವು ಕಾರ್ಯಕಾರಣದ ಸರಪಳಿಯಂತೆ ಈ ಘಟನೆಗಳನ್ನು ಶೋಧಿಸುತ್ತದೆ. ಅಂದರೆ ಈ ಘಟನೆಗಳು ಒಂದಕ್ಕೊಂದು ಸಂಬಂಧಿಸಿರುವುದನ್ನು ಇದು ವ್ಯಕ್ತಪಡಿಸುತ್ತದೆ. 'ಕಥನ'ವು ಈ ಘಟನೆಗಳು ಯಾವ ರೀತಿಯಲ್ಲಿ ಒಂದು ಹಂತವನ್ನು ಪಡೆದಿರುತ್ತವೆ ಎಂಬುದನ್ನು ಕ್ರಮಾನುಗತಿಯಲ್ಲಿ ಹೇಳುತ್ತದೆ.

ತುಂಬಾ ಸರಳ ರೀತಿಯಲ್ಲಿ ಹೇಳುವುದಾದರೆ ಕಥನವು ಕಥನ ಕ್ರಮದಲ್ಲಿ ಒಂದು ಅನುಕ್ರಮವನ್ನು ಅನುಸರಿಸುತ್ತಿರುತ್ತದೆ. ಅನುಸರಿಸುವುದು ಎಂದರೆ ಪ್ರತಿನಿಧಿಸುವುದು ಎಂದೂ ಅರ್ಥೈಸಬಹುದು. ಕಥನವು ಪ್ರತಿನಿಧಿಸುವಿಕೆಯನ್ನು ಒಳಗೊಂಡಿದೆ. ಅಂದರೆ ಇಲ್ಲಿ ಕೇವಲ ಬರವಣಿಗೆಯನ್ನು ಮಾತ್ರ ಪರಿಗಣಿಸಿದರೆ ಅದರ ಅಶಾಬ್ದಿಕ ರೂಪವನ್ನು ಮರೆಮಾಚಿದಂತಾಗುತ್ತದೆ. ಕಥನದ ಸಂದರ್ಭದಲ್ಲಿಯ ಸಾಮಾನ್ಯ 'ಪ್ರತಿನಿಧೀಕರಣ'ವನ್ನು ಕೂಡ ವಿಶ್ಲೇಷಿಸುವುದು ಅನಿವಾರ್ಯವಾಗಿದೆ. ಈ ಅಶಾಬ್ದಿಕ ಕಥನವೆಂದರೆ ಸಂಗೀತ, ಶಿಲ್ಪ ಮತ್ತು ಚಿತ್ರಕಲೆ ಇತ್ಯಾದಿ. ಆದರೆ ಮೌಖಿಕ ಕಥನ ಮಾತ್ರ ಇದಕ್ಕಿಂತ ತುಂಬಾ ಭಿನ್ನವಾದ ರೀತಿಯಲ್ಲಿ ತೆರೆದುಕೊಳ್ಳುತ್ತದೆ. ಇದೆಲ್ಲ ನೋಡಿದಾಗ ಕಥನ ಅಥವಾ ಲಿಖಿತ ಪರಂಪರೆ ಎನ್ನುವುದಕ್ಕೆ ಯಾವುದೇ ರೀತಿಯ ಒಂದು ಖಚಿತವಾದ ರೂಪ ಸಿಗುತ್ತದೆಯೇ ಅಥವಾ ಖಚಿತವಾದ ರೂಪ ಇದೆಯೇ ಎಂಬುದಕ್ಕೆ ಉತ್ತರ ಸಿಗಲಾರದು. ಆಯಾ ಕಥನಗಳಿಗೆ ಒಂದು ಸಾಮಾನ್ಯವಾದ ಆರಂಭ ಮತ್ತು ಅಂತ್ಯ ಎನ್ನುವುದು ಇದ್ದೇ ಇರುತ್ತದೆ. ಹಾಗಾಗಿ ಲಿಖಿತ ಕಥನಗಳೆಲ್ಲವೂ ಬದಲಾವಣೆಗಳಿಗೊಳಪಡದೆಯೇ ಆರಂಭಿಕ ಹಂತದಿಂದ ಕೊನೆಯ ಹಂತಕ್ಕೆ ಚಲಿಸುತ್ತಿರುತ್ತವೆ. ಅವುಗಳಲ್ಲಿ ಯಾವುದೇ ರೀತಿಯ ಸಣ್ಣ ಬದಲಾವಣೆ ಮಾಡಲು ಬಯಸಿದರೂ ಅವುಗಳಲ್ಲಿ ಏನೋ ಒಂದು ರೀತಿಯ ಕೊರತೆ ಕಂಡು ಬರುತ್ತದೆ. ಇವುಗಳನ್ನು ಅಥವಾ ಲಿಖಿತ ಕಥನವನ್ನು ಅರ್ಥೈಸಿಕೊಳ್ಳುವಿಕೆಯ ಹಿಂದೆ ಈ ರೀತಿಯ ಅಂದರೆ,

ಬದಲಾವಣೆಗೊಳಪಡಿಸಲು ಅಸಾಧ್ಯ ಎನ್ನುವ ತತ್ವ ಅಡಗಿದೆ ಎಂಬುದು ಸತ್ಯ. ಒಂದು ವೇಳೆ ಅದನ್ನು ಹಾಗೆ ಆರಂಭದಿಂದ ಅಂತ್ಯದ ವರೆಗೆ ಮುಂದುವರೆಸಿದರೆ ಅದರಲ್ಲಿ ಏಕತಾನತೆ ಬರುವ ಅಪಾಯವಂತೂ ಖಂಡಿತಾ ಇದೆ. ಇದನ್ನು ಆರಂಭದ ನಮ್ಮ ಪ್ರಾಣಿ ಕಥೆಗಳು ನಿರೂಪಿಸಿರುವುದನ್ನು ಕಾಣಬಹುದು. ಒಂದು ರೀತಿಯಲ್ಲಿ ಕಥನವೆನ್ನುವುದು ಸುಪ್ತವಾಗಿ ಅಡಗಿರುವ ವಶೀಕರಣ ಭಾವವಾಗಿದೆ. ಈ ರೀತಿಯ ಕಥನಗಳಿಗೆ ಒಂದೇ ಆಯಾಮವಿರುವುದಿಲ್ಲ. ಇವುಗಳು ಬಹು ಆಯಾಮವನ್ನು ಒಳಗೊಂಡಿರುವುದರಿಂದ ಏಕತಾನತೆ ಕಾಡದು. ಬೇಗನೆ ನಾಶವಾಗುವ ಅಥವಾ ತುಂಬಾ ಅರಾಜಕವಾಗಿರುವ ಕಥನಗಳೆಲ್ಲವೂ ಆರಂಭದಿಂದ ಅಂತ್ಯದವರೆಗಿನ ಅವಧಿಯಲ್ಲಿ ಏನನ್ನಾದರೂ ಒಳಗೊಂಡಿರುತ್ತವೆ. ಅಂದರೆ ಇವುಗಳಲ್ಲಿ ಯಾವುದೇ ರೀತಿಯ ಸುಪ್ತ ಭಾವವಿರುವುದಿಲ್ಲ. ಈ ಕಥನಗಳೆಲ್ಲವೂ ಒಂದು ರೀತಿಯಲ್ಲಿ ಹೊಯ್ದಾಟವನ್ನು ಅನುಭವಿಸುತ್ತಿರುತ್ತವೆ. ಈ ಸಂದರ್ಭದಲ್ಲಿ ಅದರ ಆರಂಭದಿಂದ ಅಂತ್ಯದವರೆಗಿನ ಅವಧಿಯಲ್ಲಿ ಕಥನವು ಬಹುಮುಖ್ಯವಾದ ಅವಕಾಶವನ್ನು ಆಕ್ರಮಿಸಿಕೊಂಡಿರುತ್ತದೆ. ಇದು ಅದರ ಚಲನಶೀಲ ಗತಿಸ್ಥಿತಿಯಾಗಿದೆ.

ಕಥನದ ಸಂದರ್ಭದಲ್ಲಿ ಬಹುಮುಖ್ಯವಾಗಿ ಎರಡು ಅಂಶಗಳು ನಮಗೆ ಗೋಚರಿಸುತ್ತವೆ. ಅಥವಾ ಎರಡು ಅಂಶಗಳು ಬಹುಮುಖ್ಯವಾದ ಪಾತ್ರ ವಹಿಸುತ್ತವೆ. ಅವು ಕಾಲ ಮತ್ತು ಅವಕಾಶ, ನಾವು ಲಿಖಿತ ಪರಂಪರೆಯನ್ನು ಅರ್ಥೈಸಿಕೊಳ್ಳುವಲ್ಲಿ ಈ ಎರಡೂ ಅಂಶಗಳು ಒಂದಕ್ಕೊಂದು ಪೂರಕವಾಗಿರುವುದನ್ನು ಕಾಣುತ್ತೇವೆ. ಲಿಖಿತ ಪರಂಪರೆಯಲ್ಲಿ 'ಅವಕಾಶ'ವನ್ನು ಅರ್ಥೈಸಿಕೊಳ್ಳಬೇಕಾದರೆ ಕಾಲಗಣನೆಯನ್ನು ಮಾಡಲೇಬೇಕಾಗುತ್ತದೆ. ಅಂದರೆ ಲಿಖಿತ ಪರಂಪರೆಯಲ್ಲಿ ಕಾಲದ ಕುರಿತಾಗಿ ಅಷ್ಟೊಂದು ಮಹತ್ವವಿದೆ. ಲಿಖಿತತೆಗೆ ಕಾಲವೆ ಬಹುಮುಖ್ಯ ಸಾಧನ. ಕಾಲವನ್ನು ಅಧ್ಯಯನ ಮಾಡುವಾಗ ಅವಕಾಶವನ್ನು ಕುರಿತಾಗಿ ಮಾತಾಡಲೇಬೇಕಿರುವುದು ಲಿಖಿತ ಪರಂಪರೆಯಲ್ಲಿ ಅನಿವಾರ್ಯವಾಗಿರುತ್ತದೆ. ಆ ಕಾರಣಕ್ಕಾಗಿಯೇ ಇಲ್ಲಿ 'ಕಾಲ' ಮತ್ತು 'ಅವಕಾಶ' (Time and Sapce)ಗಳು ಒಂದಕ್ಕೊಂದು ಪೂರಕವಾಗಿರುತ್ತವೆ. ಲಿಖಿತಪರಂಪರೆಗೆ ಈ ಎರಡು ಅಂಶಗಳೇ ಬಹು ಮುಖ್ಯ ಆಧಾರ ಮತ್ತು ಜೀವಾಳ. ಇಲ್ಲಿ ನಡೆಯುವ ಎಲ್ಲಾ ಪ್ರಕ್ರಿಯೆಗಳಿಗೂ ಒಂದು ಕಾಲವಿರುತ್ತದೆ, ಅಥವಾ ಕಾಲದ ಖಚಿತತೆ ಇರುವುದನ್ನು ಗಮನಿಸಬಹುದು. ಆದರೆ ಮೌಖಿಕ ಪರಪರೆಯಲ್ಲಿ ಇದಕ್ಕಿಂತ ಭಿನ್ನವಾಗಿರುವುದನ್ನು ಕಾಣುತ್ತೇವೆ. ಅಲ್ಲಿ ಕಾಲದ ಖಚಿತತೆಯಿರುವುದಿಲ್ಲ, ಕಾಲದ ನಿರ್ಬಂಧವಿರುವುದಿಲ್ಲ, ಕಾಲಮಿತಿಯಿರುವುದಿಲ್ಲ, ಮತ್ತು ಕಾಲದ ಕುರಿತಾದ ಸಣ್ಣ ಚರ್ಚೆಯೂ ಇರುವುದಿಲ್ಲ, ಕಾಲದ ಚೌಕಟ್ಟೂ ಇರುವುದಿಲ್ಲ ಮಂಟೇಸ್ವಾಮಿಯಂತಹ ಒಬ್ಬ ವ್ಯಕ್ತಿ ಬಸವಣ್ಣನ ಜೊತೆಗೆ ಸಂವಾದ ಮಾಡಬಲ್ಲ; ಆದರೆ ಲಿಖಿತ ಪರಂಪರೆಯಲ್ಲಿ ಈ ರೀತಿಯ ಸಂವಾದವಾಗಲೀ, ಸಂಘರ್ಷವಾಗಲೀ ಸಾಧ್ಯವಾಗುವುದಿಲ್ಲ. ಇದಕ್ಕೆ ಕಾರಣ ಕಾಲದ ಮಿತಿ ಅಥವಾ ಕಾಲದ ಚೌಕಟ್ಟು, ಇತಿಹಾಸ ರಚನೆಯ ಸಂದರ್ಭಕ್ಕೂ ಆಕರಗಳ ಶೋಧನೆಯಲ್ಲಿ ಕಾಲಗಣನೆ ಬರುತ್ತದೆ. ಆದರೆ ಸಾಂಸ್ಕೃತಿಕ ಇತಿಹಾಸ ಎಂದು ಕರೆಯಲ್ಪಡುವ ಮೌಖಿಕತೆಯಲ್ಲಿ ಕಾಲ ಗಣನೆಗೆ ಅವಕಾಶವೇ ಇಲ್ಲ. ಕಾಲದ ಕುರಿತಾದ

ಚರ್ಚೆಗಳು ಸಮಕಾಲೀನ ತತ್ವಜ್ಞಾನ ಮತ್ತು ಸಾಹಿತ್ಯ ಸಂದರ್ಭಗಳಲ್ಲೂ ಕೂಡ ನಡೆಯುತ್ತಿರುವುದನ್ನು ಕಾಣಬಹುದಾಗಿದೆ.

ಸಾಮಾನ್ಯವಾಗಿ ಲಿಖಿತ ಪರಂಪರೆಯಲ್ಲಿ ಬರುವ ಪ್ರಶ್ನೆಗಳೆಂದರೆ ಹೇಗೆ, ಏಕೆ, ಮತ್ತು ಎಲ್ಲಿ ಎನ್ನುವಂತಹವುಗಳೇ ಆಗಿವೆ. ಇದು ಲಿಖಿತ ಪರಂಪರೆ ಹೊಂದಿರುವ ಬಹುಮುಖ್ಯ ಅಂಶ. ಈ ಪ್ರಶ್ನೆಗಳನ್ನು ಉತ್ತರಿಸುವಲ್ಲಿ ಎರಡು ವಿಶಾಲ ಮಾರ್ಗಗಳನ್ನು ಅನುಸರಿಸಬಹುದು. ಮೊದಲನೆಯದು ಮನಃಶಾಸ್ತ್ರೀಯ ಮಾರ್ಗ, ಕಥನದ ಸಂದರ್ಭದಲ್ಲಿ ಅಥವಾ ನಿರೂಪಣೆಯ ಸಂದರ್ಭದಲ್ಲಿಯ ಬಲವಾದ ಒಲವು ಒಂದು ಕಡೆಗಿದ್ದರೆ, ಅದಕ್ಕೆ ತೀರಾ ಭಿನ್ನವಾಗಿ ಮತ್ತೊಂದು ಕಡೆ ಒಲವಿರುವುದಿಲ್ಲ. ಮತ್ತೊಂದು ಕಡೆಗೆ ಒಲವು ಎಂದರೆ ಬೇರೆ ರೀತಿಯ ಅಥವಾ ಭಿನ್ನ ನೆಲೆಯಲ್ಲಿ ಲಿಖಿತ ಪರಂಪರೆಯು ಧೃವೀಕರಣಗೊಂಡಿರುತ್ತದೆ. ಭಿನ್ನ ನೆಲೆ ಎಂದಾಕ್ಷಣ ನಮಗೆ ತೀರಾ ಅಪರೂಪ ಎಂಬಂತಹ ಕಥನ ಮಾದರಿ ಇದೆ ಎಂದು ಭಾವಿಸಲಾಗದು. ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಆ ಮಾದರಿ ಇದೆ, ಎಂಬಂತಹ ವಾದಗಳೂ ಇಂದು ನಮ್ಮಲ್ಲಿ ಇವೆ.

ಕಥನದ ಎಲ್ಲಾ ಮಾದರಿಗಳನ್ನು ಗಮನಿಸಿದರೆ ಅದು ಮನಶಾಸ್ತ್ರೀಯ ಆಲೋಚನಾ ಕ್ರಮವನ್ನು ತುಂಬಾ ಆಳವಾಗಿ ಪ್ರಚೋದಿಸುತ್ತದೆಯೋ ಅಥವಾ ಅದು ಸಾಂಸ್ಕೃತಿಕವಾಗಿ ತುಂಬಾ ಅಭ್ಯಾಸದ ರೀತಿಯಲ್ಲಿ ಆಗಿ ಹೋಗಿದೆಯೇ ಎನ್ನುವುದನ್ನು ಗ್ರಹಿಸಲು ಕಷ್ಟವೆನಿಸುತ್ತದೆ. ಈ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರ ಹುಡುಕಲು ತೊಡಗಿದರೆ ಅದು ಯಾವಾಗಲೂ ನೀಟಾದ ಕಥನ ಪರಂಪರೆಯಲ್ಲಿ ಅಸ್ತಿತ್ವ ಪಡೆಯುವುದಿಲ್ಲ. ಮತ್ತು ಆ ಪ್ರಯೋಗಾತ್ಮಕ ಉತ್ತರಗಳು ಅಥವಾ ವಿಚಾರ, ಊಹಾಪೋಹಗಳು ಈ ಕ್ಷೇತ್ರದಲ್ಲಿ ಅಥವಾ ಈ ಲಿಖಿತ ಕಥನ ಪರಂಪರೆಯಲ್ಲಿ ಬಲವಾಗಿ ಬೇರೂರಿ ಗಟ್ಟಿ ಚರ್ಚೆಗೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿವೆ. ಇದು ಕೊಂಚ ನಿರಾಶೆಯನ್ನು ಮೂಡಿಸುವ ವಿಚಾರವಾಗಿದೆ. ಇನ್ನೊಂದು ಇದಕ್ಕೆ ತೀರಾ ವಿರುದ್ಧವಾದ ವಿಚಾರಧಾರೆ ಸಾಮಾಜಿಕ ಭಾಷಾಶಾಸ್ತ್ರದಲ್ಲಿದೆ. ಇದು ಶುದ್ಧಾಂಗವಾಗಿ 'ಸಾಹಿತ್ಯಗೋಳದಲ್ಲಿ', ಸಾಹಿತ್ಯಕ್ಕೇ ಸೀಮಿತವಾದ ಒಂದು ರೀತಿಯ ಸಂವಾದವನ್ನು ಸೃಷ್ಟಿ ಮಾಡುವಂಥದ್ದಾಗಿದೆ. ಅಂದರೆ, ಲಿಖಿತ ಪರಂಪರೆಯಲ್ಲಿ ಕಥನಕಾರನ ದೃಷ್ಟಿ ಕೋನದ ರೀತಿಯಲ್ಲಿಯೇ ಕಥನ ಮಾದರಿಗಳು ಹುಟ್ಟಿಕೊಳ್ಳುತ್ತವೆ. ಅಲ್ಲಿ ಆತನಿಗೆ ಯಾವುದು ಶಾಸ್ತ್ರೀಯ ಮತ್ತು ಯಾವುದು ಶಾಸ್ತ್ರೀಯ ವಲ್ಲದ್ದು ಎಂಬ ಪ್ರಜ್ಞೆ ಇರುತ್ತದೆಯಾದ್ದರಿಂದ ಸಾಂಪ್ರದಾಯಿಕ ಅಥವಾ ಪಾರಂಪರಿಕ ರೀತಿಯಲ್ಲಿ ಲಿಖಿತ ಪರಂಪರೆಯು ಶಿಷ್ಟ ಸಮಾಜದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಲು ಕಾರಣವಾಗಿದೆ.

ಈವರೆಗೂ ಕೂಡ ಕಥನ ಮಾದರಿಯು ಅದರ ಸಮಸ್ಯೆಗಳನ್ನು ಹೊರತು ಪಡಿಸಿ ವಿವರಿಸಲ್ಪಡುತ್ತಿಲ್ಲ. ಅವುಗಳಲ್ಲಿ ತುಂಬಾ ಮುಖ್ಯವಾದ ಪ್ರಶ್ನೆ ಅಥವಾ ಸಮಸ್ಯೆ ಉದ್ಭವಿಸುತ್ತಿರುವುದು ಕಾಲ್ಪನಿಕ ದೃಷ್ಟಿಕೋನದಿಂದಾಗಿ ಅಲ್ಲ. ಬದಲಿಗೆ ಕಥನ ಮಾದರಿಯ ಕ್ರಮದಲ್ಲಿ ಎನ್ನುವುದು ಬಹುಮುಖ್ಯವಾದ

ಸಂಗತಿಯಾಗಿದೆ. ಈ ಕಥನ ಮಾದರಿಯು ಬೇರೆ ಬೇರೆ ಮಾಧ್ಯಮಗಳ ಮೂಲಕ ಶಿಷ್ಟ ಪರಂಪರೆಯಲ್ಲಿ ಕಾಣಿಸಿಕೊಳ್ಳುತ್ತದೆ. ಹಾಗಾಗಿ ಅದು ಸ್ಪಷ್ಟವಾಗಿಯೇ ದೊಡ್ಡದಾದ ಭಿತ್ತಿಯನ್ನು ಹೊಂದಿದೆ. ಅದು ಕಾದಂಬರಿ, ಚಲನ ಚಿತ್ರ, ಹೀಗೆ ಬೇರೆ ಬೇರೆ ಮಾಧ್ಯಮಗಳ ಮೂಲಕ ಕಾಣಿಸಿಕೊಳ್ಳುತ್ತದೆ. ಒಂದು ಕಥನ ನಿರೂಪಣೆಯು ಅದರ ಬೇರೆ ಬೇರೆ ಪ್ರಕಾರಗಳನ್ನು ಒಳಗೊಂಡಿರುತ್ತದೆ. ಅಂದರೆ, ಬೇರೆ ಬೇರೆ ಪಠ್ಯ ನಿರೂಪಣೆಗಳ ಸಂದರ್ಭಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲ್ಪಟ್ಟ ಪ್ರಕಾರಗಳನ್ನು ಗುರುತಿಸಬಹುದು. ಸಾಮಾನ್ಯ ಕಥನದ ಒಂದು ಬಹು ಮುಖ್ಯವಾದ ಉಪಯೋಗವೆಂದರೆ ಅದರಲ್ಲಿ ಸುಲಭವಾಗಿ ಯಾಂತ್ರೀಕತೆಯನ್ನು ಗುರುತಿಸಬಹುದು. ಅದು ಭಾಷಿಕತೆಯ ಆಧಾರದ ಮೇಲೆ ಕಥನ ಮಾದರಿಯ ಇತರ ಪ್ರಕಾರಗಳನ್ನು ಒಳಗೊಂಡಿರುವುದರ ಜೊತೆಗೆ, ಪರಿಣಾಮಕಾರಿಯಾದ ಕ್ರಮಗಳನ್ನು ಅದರ ಸಂಬಂಧಿತ ಮಾದರಿಗಳೊಂದಿಗೆ ಕೆಲ ಮೌಲ್ಯಗಳನ್ನು ಹೊಂದಿರುತ್ತದೆ. ಇದು ಮುಂದೆ ಕಥನದ ಅಥವಾ ಲಿಖಿತ ಪರಂಪರೆಯ ವಿವರಣೆಯಲ್ಲಿ ಒಂದು ಹೊಸ ಅಭಿವೃದ್ಧಿಯನ್ನು ಸೃಷ್ಟಿಸಿ ಒಂದು ಖಚಿತವಾದ ನಿಲುವಿಗೆ ಬದ್ಧತೆಯನ್ನು ಸೃಷ್ಟಿಸುವುದರ ಜೊತೆಗೆ ಅದರ ತಾಂತ್ರಿಕ ರೂಪಗಳ ಸೃಷ್ಟಿಗೂ ಕಾರಣವಾಗುತ್ತದೆ.

ಲಿಖಿತ ಪರಂಪರೆಯು ತನ್ನದೇ ಆದ ನೆಲೆಯಲ್ಲಿ ಕೆಲವು ಮಿತಿ ಅಥವಾ ಚೌಕಟ್ಟನ್ನು ಒಳಗೊಂಡಿರುತ್ತದೆ. ಅದಕ್ಕೆ ಯಾವತ್ತೂ ಹೊಂದಿಕೊಳ್ಳುವ ಗುಣ ವಿರುವುದಿಲ್ಲ. ಬದಲಾವಣೆಗಳಿಗೆ ಅವಕಾಶಗಳಿರುವುದು. ಒಂದು ವೇಳೆ ಹಾಗೇನಾದರೂ ಬದಲಾವಣೆ ಅನಿವಾರ್ಯವಾದರೆ ಅದರ ಮೂಲ ರೂಪಕ್ಕೆ ಚ್ಯುತಿವುಂಟಾಗುತ್ತದೆ. ಮೂಲ ರೂಪವನ್ನುಳಿಸಿಕೊಂಡು ಅದನ್ನು ಬದಲಾವಣೆ ಮಾಡಲು ಸಾಧ್ಯವಿಲ್ಲ. ಇದು ಲಿಖಿತ ಪರಂಪರೆಯ ಬಹುದೊಡ್ಡ ಮಿತಿಯಾಗಿದೆ. ಬರವಣಿಗೆಯೇ ಇದರ ಶಕ್ತಿ ಮತ್ತು ಮಿತಿ ಎರಡೂ ಆಗಿದೆ. ಕಾಲ ಗಣನೆಯ ಸಂದರ್ಭಕ್ಕೆ ಬರವಣಿಗೆಯನ್ನು ಅನಿವಾರ್ಯವಾಗಿಯೇ ಪರಿಗಣಿಸಲಾಗುತ್ತದೆ. ಹಾಗಾಗಿ ಬರವಣಿಗೆಯು ಲಿಖಿತ ಪರಂಪರೆಯಲ್ಲಿ ತುಂಬಾ ಅಧಿಕೃತವೆನಿಸಿಕೊಳ್ಳುತ್ತದೆ. ಅಂದರೆ ಲಿಖಿತ ಪರಂಪರೆಗೆ ನಿರ್ದಿಷ್ಟ ಚಹರೆಯಿರುವುದರಿಂದ ಅದಕ್ಕೆ ನಿರ್ದಿಷ್ಟ ಅಧಿಕಾರವೂ ಇರುತ್ತದೆ. ಲಿಖಿತ ಪರಂಪರೆ ಮೌಖಿಕ ಪರಂಪರೆಯ ಆತ್ಯಂತಿಕ ಸ್ವಾತಂತ್ರ್ಯವನ್ನು ಬಯಸುವುದಿಲ್ಲ ನಿಜ, ಆದರೆ ಅದು ತನ್ನ ಅಧಿಕಾರವನ್ನು ಸ್ಥಾಪಿಸುತ್ತದೆ. ಪರಂಪರೆಯ ಸೇತುವೆಯ ಮೇಲೆಯೇ ಅದು ತನಗೆ ಬೇಕಾದ ದಾರಿಗಳನ್ನು ಕಂಡುಕೊಳ್ಳುತ್ತದೆ. ನಾಗರೀಕತೆಯ ಯಾಜಮಾನ್ಯದ ಒಳಗಿಂದಲೇ ತನ್ನ ಅಸ್ತಿತ್ವವನ್ನು ಪ್ರತಿಷ್ಠಾಪಿಸಿಕೊಳ್ಳುತ್ತದೆ. ಆ ಮೂಲಕ ಮೌಖಿಕ ಪರಂಪರೆಯ ಮುಗ್ಧ ಸ್ವಾತಂತ್ರ್ಯವನ್ನು ನಿಯಂತ್ರಿಸುತ್ತದೆ. ಅಂದರೆ, ಅಕ್ಷರ ವಿನ್ಯಾಸದ ಜೊತೆಗೆ ತೊಡಗುವ ಪ್ರಭುನಿಷ್ಠ ಧಾರ್ಮಿಕ ಸೃಜನ ಶೀಲತೆಯು ಶ್ರೇಷ್ಠತೆಯನ್ನು ಎತ್ತಿ ಹಿಡಿದು ಅಲಿಖಿತತೆಯ ಅನುಭವ ಜಗತ್ತನ್ನು ಸಂಸ್ಕೃತಿಯ ಮೂಲವೆಂದು ಮಾನ್ಯ ಮಾಡದೆ ಅರಿವಿನ ಮೇಲರಿಮೆಯ ಮೂಲಕ ಲಿಖಿತ ಪಠ್ಯವನ್ನು ಪವಿತ್ರ ಮಂತ್ರ ಶ್ಲೋಕಗಳ ರೀತಿಗೆ ರೂಪಿಸಿ ಬಿಡುತ್ತದೆ. ಇದರಿಂದ ಲಿಖಿತ ಪರಂಪರೆಯು ಕೂಡ ಯಜಮಾನ್ಯವನ್ನು ಅಲಿಖಿತ ಸೃಜನಶೀಲತೆಯ

ಮೇಲೆ ಸಾಧಿಸುತ್ತಲೇ ತನಗೆ ಬೇಕಾದ ರೀತಿಯಲ್ಲಿ ಮೌಖಿಕ ಪರಂಪರೆಯನ್ನು ಬಳಸಿಕೊಂಡಿದೆ. ಧಾರ್ಮಿಕ ಪದ್ಧತಿ ಹಾಗೂ ಅಧಿಕಾರಗಳ ಕಾರಣವಾಗಿ ಮತ್ತು ಸಂಸ್ಕೃತ ಭಾಷೆಯ ಗರ್ವದಿಂದಾಗಿ ಮೌಖಿಕ ಪರಂಪರೆಯನ್ನು ನಿರ್ಲಕ್ಷಿಸಿರಬಹುದು. ಆದರೆ ಜನಪದ ಸಮಾಜವು ಲಿಖಿತ ಪರಂಪರೆಯನ್ನು ಘನತೆಯಿಂದಲೇ ಕಂಡಿದೆ. ಬರಹ ಲೋಕದ ಬಗ್ಗೆ ಜನಪದರು ತಿರಸ್ಕಾರವನ್ನೇನೂ ಇಟ್ಟುಕೊಂಡಿರಲಿಲ್ಲ (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು.೩೯) ಆದರೆ ಶಿಷ್ಟ ಪರಂಪರೆಗೆ ಮೌಖಿಕತೆಯ ಬಗ್ಗೆ ಕೊಂಚವೂ ಅಭಿಮಾನವಿಲ್ಲ ಮತ್ತು ಚಿರಿತ್ರೆರಚನೆಯ ಯಾವ ಹಂತದಲ್ಲಿಯೂ ಕೂಡ ಮೌಖಿಕ ಆಕರಗಳು ಗಮನಕ್ಕೆ ಬಾರದಿರುವುದು ಒಂದು ರೀತಿಯಲ್ಲಿ ವಿಷಾದನೀಯವಾಗಿದೆ. ಹಾಗೆ ನೋಡಿದರೆ ಪ್ರಾಚೀನ ಕವಿಗಳ್ಯಾರೂ ಕೂಡ ಲಿಖಿತ, ಮೌಖಿಕ ಎಂಬ ಭೇದ ತೋರಿದ ಉದಾರಣೆಗಳಿಲ್ಲ, ಪಂಪನೇ ತನ್ನ ಕಾವ್ಯಕ್ಕೆ ಮೌಖಿಕ ಕಾವ್ಯ ಶೈಲಿಯನ್ನು ತಂದು ಕೊಟ್ಟಿದ್ದಾನೆ. ಇಲ್ಲಿ ಬದುಕು, ಭಾಷೆ, ಮತ್ತು ಸಾಹಿತ್ಯ ಯಾವತ್ತೂ ಬೇರೆ ಬೇರೆಯಾಗಿ ಕಾಣಲು ಸಾಧ್ಯವಿಲ್ಲ. ಮೂರು ಹುರಿಗಳು ಒಗ್ಗೂಡಿ ಬಲವಾದ ಹಗ್ಗವಾಗುವಂತೆ ಬದುಕು, ಭಾಷೆ, ಮತ್ತು ಸಾಹಿತ್ಯಗಳ ನಡುವೆ ಬೇರ್ಪಡಿಸಲಾಗದ ಮುಪ್ಪುರಿ ಬಂಧವಿದೆ. ಈ ಮೂರನ್ನು ಪ್ರತ್ಯೇಕಿಸಿ, ಬಿಡಿ ಬಿಡಿಯನ್ನಾಗಿ ಮಾಡುವ ಅಧ್ಯಯನಗಳು ದುರ್ಬಲ ಮಾತ್ರವಲ್ಲ, ಸತ್ಯದಿಂದ ದೂರ ಸಿಡಿದ ಸುಳ್ಳು ಸೃಷ್ಟಿಗಳಾಗಿವೆ. ಬದುಕು ಭಾಷೆ ಸಾಹಿತ್ಯಗಳ ಮುಪ್ಪುರಿ ಬಂಧದಲ್ಲೇ ಸಂಸ್ಕೃತಿಗಳ ಮುಖಾ ಮುಖಿಯನ್ನು ಗ್ರಹಿಸಬೇಕಾಗಿದೆ. ಕಳೆದ ಶತಮಾನದ ಆರಂಭದಲ್ಲಿ ಬದುಕು ಭಾಷೆ, ಸಾಹಿತ್ಯಗಳನ್ನು 'ಲಿಖಿತ ಪರಂಪರೆ'ಯಲ್ಲಿ ವಿಶೇಷವಾಗಿ ಗುರುತಿಸಲಾಗಿದೆ. ಆದರೆ ಈ ತ್ರಿವಳಿಯನ್ನು 'ಅಲಿಖಿತ ಪರಂಪರೆ'ಯಲ್ಲಿಯೂ ಗುರುತಿಸಬೇಕೆಂಬ ದೃಷ್ಟಿ ಮುನ್ನೆಲೆಗೆ ಬಾರದೆ ಹಿನ್ನೆಲೆಯಲ್ಲೇ ಉಳಿದು ಬಿಟ್ಟಿದೆ. ವಿದ್ವಾಂಸರೆನಿಸಿಕೊಂಡವರು 'ಗ್ರಂಥ'ದಿಂದ 'ನಿರ್‌ಗ್ರಂಥ'ದೆಡೆಗೆ ಸ್ಥಿತ್ಯಂತರಗೊಳ್ಳುವ ಪ್ರಕ್ರಿಯೆ ಬದುಕು, ಭಾಷೆ, ಸಾಹಿತ್ಯಗಳಲ್ಲಿ ಒಟ್ಟೊಟ್ಟಿಗೆ ಸಂಭವಿಸಬೇಕಾಗಿದೆ. ಮೇಲು ಮೇಲಕ್ಕೇರುತ್ತಾ ನೆಲದ ನನ್ನಿಗಳಿಂದ ದೂರ ಸರಿಯುವ 'ಗ್ರಾಂಥಿಕ' ಸಂಸ್ಕೃತಿಯ ಪರಿಮಿತಿಗಳನ್ನು ಮೀರಲು, 'ನಿರ್‌ಗ್ರಾಂಥಿಕ'ವೆನ್ನಬಹುದಾದ ತಳ ಸಂಸ್ಕೃತಿಗಳ ಧಾತು ಮತ್ತು ಧೋರಣೆಗಳನ್ನು ಒಳಗೊಳ್ಳಲು ಇಂಥ ಅನುಸಂಧಾನಗಳು ಆರೋಪಿತವಾಗದೆ ಸಹಜವಾಗಿರಬೇಕಾಗುತ್ತದೆ. (ವಿ.ಚಂದ್ರಶೇಖರ ನಂಗಲಿ, ಸಂಸ್ಕೃತಿಗಳ ಮುಖಾಮುಖಿ, ಪು:೫೦) ಅಂದಾಗ ಮಾತ್ರ ಲಿಖಿತ ಪರಂಪರೆ ತನ್ನೆಲ್ಲಾ ಶಕ್ತಿಯನ್ನು ಸಂಸ್ಕೃತಿಗಳ ಆಚೆಗಿನ ಲೋಕವೊಂದನ್ನು ಮುಟ್ಟಲು ಸಾಧ್ಯವಾಗುತ್ತದೆ. ತನ್ನೆಲ್ಲಾ ಮಿತಿಯಿಂದ ಹೊರ ಬರಲು ಸಾಧ್ಯ ಆದರೆ ಖಚಿತತೆಗೆ ಒಳಪಡದ ದೇಸಿಗೆ ಶಾಸ್ತ್ರೀಯ ಶಿಸ್ತನ್ನು ಮೂಡಿಸುತ್ತಾ ಮಾರ್ಗವು ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಯತ್ನಿಸುತ್ತಾ ಸಾಗುತ್ತದೆ. ಹಾಗಾದಾಗ ಅನೇಕ ಸಂವಿಧಾನಗಳು, ಕಾನೂನುಗಳು, ಶಿಕ್ಷಣ, ನಿಯಮ, ಶಾಸ್ತ್ರ ಮೀಮಾಂಸೆಗಳು ಹುಟ್ಟಿಕೊಳ್ಳುತ್ತವೆ. ಇದು ಸಂಸ್ಕೃತಿ ಕೇಂದ್ರಿತ ಚರ್ಚೆ. ಇದನ್ನು ಸಾಹಿತ್ಯಕ್ಕೆ ಜಾರಿಸಿದಾಗ, ಚದುರಿದ ದೇಶೀಯ ಅಭಿವ್ಯಕ್ತಿಗಾಗಿ ಸಾಹಿತ್ಯವು ಹಲವು ಲಕ್ಷಣಗಳನ್ನು

ಲಕ್ಷ್ಯದಲ್ಲಿರಿಸಿಕೊಂಡು ಮೈ ತಾಳುತ್ತದೆ. ಆಗ ವಿವಿಧ ಕವಿಗಳಲ್ಲಿ ಲಕ್ಷಣ ಬದ್ಧವಾದ ಮತ್ತು ಅದರಲ್ಲಿ ದೇಸೀಯತೆಯ ನೆಲೆಗಳನ್ನು ಹೊಂದಿರುವ ಕಾವ್ಯಗಳು ಹುಟ್ಟಿಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಪಂಪ ಮಾರ್ಗ ದೇಸಿ ಈ ಎರಡಕ್ಕೂ ಬದ್ಧನಾಗಿ ನಿಲ್ಲುವ ಕವಿಯಾಗುತ್ತಾನೆ. ಇವನಲ್ಲಿ ಸಂಸ್ಕೃತ ಕಾವ್ಯಶಾಸ್ತ್ರಗಳ ಶಿಕ್ಷಣ ಇದೆ. ಸಂಸ್ಕೃತ ಮೀಮಾಂಸೆಯ ಪರಿಕರಗಳು ತನ್ನ ಕಾವ್ಯಗಳಲ್ಲಿ ಲಕ್ಷ್ಯವೇ ಆಗಿವೆ. ಶಾಸ್ತ್ರದ ಇನ್ನೂ ಹಲವು ನಿಯಮಗಳಾದ ಧ್ವನಿ, ರಸ, ರೀತಿ, ಔಚಿತ್ಯ, ವಕ್ರೋಕ್ತಿ, ಮೊದಲಾದವುಗಳು ಇಲ್ಲಿ ಕ್ರಿಯಾಶೀಲಗೊಳ್ಳುತ್ತವೆ, ಆದಾಗ್ಯೂ ಕನ್ನಡದ ದೇಶೀಯತೆಯನ್ನು ಅದರೊಳಗಿನ ದೇಸೀಯತೆಯನ್ನು ವಿವಿಧ ಪಾತ್ರಗಳ ನಿರ್ಮಿತಿಯಲ್ಲಿ, ಆ ಪಾತ್ರಗಳ ಆಡು ಮಾತಿನ ಲಯದಲ್ಲಿ, ಅಲ್ಲಿ ಬಳಕೆಯಾಗುವ ಗಾದೆ ವೊದಲಾದ ವಿವಿಧ ತೆರನ ಸೂಕ್ಷ್ಮಗಳಲ್ಲಿ ಕಂಡರಿಸುತ್ತಾ ಹೋಗುತ್ತಾನೆ. (ಡಾ.ಕಾ.ವೆಂ.ಶ್ರೀನಿವಾಸ್‌ಮೂರ್ತಿ, ಮಾರ್ಗ-ದೇಸಿ; ಸಂಸ್ಕೃತಿ ಚರ್ಚೆಗೊಂದು ಆಯಾಮ, ಪು:೪೨) ಹೀಗೆ ಆದಿ ಕವಿ ಪಂಪನಿಂದ ಹಿಡಿದು ಇವತ್ತಿನವರೆಗೂ ದೇಸೀ ಅಥವಾ ಮೌಖಿಕ ಪರಂಪರೆಯು ಶಿಷ್ಟ ಅಥವಾ ಲಿಖಿತ ಪರಂಪರೆಯನ್ನು ಪ್ರಭಾವಿಸುತ್ತಾ, ಸಂಸ್ಕೃತಿಯ ಚರ್ಚೆಗಳಿಗೆ ಹೊಸ ಆಯಾಮಗಳನ್ನು ರೂಪಿಸುತ್ತಾ ಬಂದಿರುವುದನ್ನು ಕಾಣಬಹುದಾಗಿದೆ. ಬರವಣಿಗೆ ಅಥವಾ ಲಿಖಿತತೆಯು ಒಂದರ್ಥದಲ್ಲಿ ಸಾಮಾಜಿಕ ಸಂಸ್ಥೆ, ಬರವಣಿಗೆಗೆ ಹೊಂದಿಕೊಳ್ಳುವ ಗುಣವಿರುವುದರಿಂದ ಶಿಕ್ಷಣ, ಪತ್ರಿಕಾರಂಗ, ರಾಜಕಾರಣ, ಸಾಹಿತ್ಯ, ಹೀಗೆ ಅದು ಹಲವಾರು ರೂಪಗಳಲ್ಲಿ ಹೊರ ಹೊಮ್ಮುತ್ತದೆ. ಈ ರೀತಿಯ ಅನೇಕ ರೂಪಗಳಿವೆ ಅದಕ್ಕೆ ಬರವಣಿಗೆಯ ಸ್ಥಿತಿ-ಗತಿಯು ಅದು ಪ್ರತಿನಿಧಿಸುತ್ತಿರುವ ಸಮಾಜದ ಅಥವಾ ಲಿಖಿತ ಸಮುದಾಯವೊಂದರ ಸ್ಥಿತಿಗತಿಯೇ ಆಗಿರುತ್ತದೆ. ಯಾವುದೇ ಸಮಾಜದಲ್ಲಿ ಅದರ ಭಾಷಿಕ ಶ್ರೇಣೀಕರಣಕ್ಕೂ, ಆರ್ಥಿಕ ಶ್ರೇಣೀಕರಣಕ್ಕೂ ಮತ್ತು ಸಾಂಸ್ಕೃತಿಕ ಶ್ರೇಣೀಕರಣಕ್ಕೂ ಒಂದು ಅವಿನಾಭಾವ ಸಂಬಂಧ ಇದ್ದೇ ಇರುತ್ತದೆ. ಹಾಗಾಗಿ ಯಾವುದೇ ಭಾಷಿಕ ಹೋರಾಟವು ಸಾಮಾಜಿಕ-ಸಾಂಸ್ಕೃತಿಕ ಹೋರಾಟವೇ ಆಗಿರುತ್ತದೆ. ರಾಜಕಾರಣ, ಆಡಳಿತ, ರೀತಿ-ನೀತಿ, ತತ್ವಜ್ಞಾನ, ಶಿಕ್ಷಣ, ಸಾಹಿತ್ಯ ಇತ್ಯಾದಿ ಸಮಾಜವೊಂದರ ಪ್ರಮುಖ ಅಂಗಗಳಲ್ಲಿನ ಬಿಕ್ಕಟ್ಟು, ವಿಕಾರ, ಸೌಂದರ್ಯ, ಸಮೃದ್ಧಿ ಎಲ್ಲವೂ ಭಾಷಿಕ ಬಿಕ್ಕುಟ್ಟು ಸಮೃದ್ಧಿಗಳಲ್ಲಿ ಪ್ರತಿ ಬಿಂಬಿಸುತ್ತಿರುತ್ತದೆ. ಇದಕ್ಕೆ ಬಹುಮುಖ್ಯ ಕಾರಣ ಈ ಎಲ್ಲಾ ಅಂಶಗಳನ್ನು ನಾವು ಭಾಷಿಕ ಶರೀರದ ಮೂಲಕವೇ ಪರಿಭಾವಿಸುತ್ತಿರುತ್ತೇವೆ ಮತ್ತು ಈ ಎಲ್ಲವನ್ನೂ ಭಾಷಿಕ ಶರೀರದ ಮೂಲಕವೇ ನಿರ್ವಚಿಸಿಕೊಳ್ಳುತ್ತಿರುತ್ತೇವೆ. ಇಲ್ಲಿ ಭಾಷಿಕವೆನ್ನಬಹುದಾದ ಒಂದು ಸಮುದಾಯವನ್ನು ನಾವು ಮೌಖಿಕ ಮತ್ತು ಲಿಖಿತ ಎಂಬ ಎರಡೂ ಅಂಶಗಳ ಆಧಾರದ ಮೇಲೆ ಅದನ್ನು ನಿರ್ವಚಿಸಿಕೊಳ್ಳಲು ಸಾಧ್ಯವಿದೆ. ಲಿಪಿಗೊತ್ತಾದಾಗಿನಿಂದ ಅದು ಬರವಣಿಗೆಗೆ ವಾಲತೊಡಗಿತು. ಅದರಾಚೆಗೂ ಮೌಖಿಕವಾಗಿಯೇ ಎಷ್ಟೋ ಅಂಶಗಳು ಉಳಿದು ಬೆಳೆದು ಬೆಂದಿವೆ. ಜನಪದ ಮಹಾಕಾವ್ಯಗಳು ಇದಕ್ಕೆ ಸ್ಪಷ್ಟ ಉದಾಹರಣೆ ಅಂದರೆ, ಆಯಾ ಸಮುದಾಯಗಳು ಮೌಖಿಕ ಅಂಶಗಳನ್ನೇ ಜೀವಂತವಾಗಿರಿಸಿಕೊಂಡು ಆ ಮೂಲಕ ಸಾಂಸ್ಕೃತಿಕ

ಅಂಶಗಳನ್ನು ಪ್ರಚುರಪಡಿಸುತ್ತಾ, ಸಂಸ್ಕೃತಿಯ ನಿರ್ವಚನೆಯಲ್ಲಿ ತೊಡಗಿವೆ. ನಮ್ಮ ಬಹುಪಾಲು ದೇಸೀ ದಂಗೆಗಳು ಈ ಸಾಮಾಜಿಕ ಸಾಂಸ್ಕೃತಿಕವಾದ ಅಸಮಾನ ಶ್ರೇಣೀಕರಣದ ವಿರುದ್ಧ ಸೆಣಸುವಾಗ ಶಿಷ್ಟ ಸಮುದಾಯದ ಲಿಪಿ ಶರೀರವನ್ನು ಮತ್ತು ಅದರ ಮೌಲ್ಯ ವ್ಯವಸ್ಥೆಯನ್ನು ಛಿದ್ರೀಕರಿಸುವತ್ತ ತನ್ನದೇ ಆದ ಲಿಪಿ ಶರಿರವನ್ನು ಮತ್ತು ಪ್ರತಿ ಮೌಲ್ಯವ್ಯವಸ್ಥೆಯನ್ನು ಲಿಪಿ ಶರೀರದ ಮೂಲಕವೇ ಕಟ್ಟುವ ಕೆಲಸವನ್ನು ಮಾಡುತ್ತಿರುತ್ತದೆ. ವೇದ, ಉಪನಿಷತ್ತು ಪುರಾಣಗಳ ಲಿಪಿ ಶರೀರವೇ ತನ್ನ ಅಂತಸ್ತಿನ ಸಂಕೇತವೆಂದು ಮೆರೆಯುವ ವೈದಿಕ ಸಮುದಾಯದೆದುರು ವೀರ ಶೈವವು ವೇದ ಪುರಾಣಗಳನ್ನು ನಿರಾಕರಿಸುತ್ತಲೇ ತನ್ನದೇ ವಚನವೆಂಬ ಪ್ರತಿವೇದವನ್ನೂ ರಗಳೆ ಎಂಬ ಪುರಾಣಗಳನ್ನೂ ಸೃಷ್ಟಿಸಿದೆ. ಉದಾಹರಣೆಗೆ ಹರಿಹರನ ಕೊಳೂರು ಕೊಡಗೂಸಿನ ರಗಳೆ ಒಂದು ವೀರ ಶೈವ ಪುರಾಣವೇ ಆಗಿದೆ. (ಹರಿ ಹರನ ಎಲ್ಲಾ ರಗಳೆಗಳನ್ನು ಒಟ್ಟು ಸೇರಿಸಿದರೆ ಅದೊಂದು ವೀರಶೈವ ಮಹಾ ಪುರಾಣವಾಗುತ್ತದೆಂಬುದು ನನ್ನ ನಂಬಿಕೆ) ಇದು ಆಶ್ರಮ ಧರ್ಮವನ್ನು ಪಾಲಿಸದ ಕೂಸೊಬ್ಬಳಿಗೆ (ಹೆಣ್ಣು) ಕೈಲಾಸ ಪ್ರಾಪ್ತಿ ನೀಡುವ ಮೂಲಕ ವೈದಿಕ ಮೋಕ್ಷ ಭಕ್ತಿ ನಂಬಿಕೆಯನ್ನು ಛಿದಿಸುತ್ತದೆ. ಭಾರತೀಯ ಭಕ್ತಿ ಚಳುವಳಿ, ಧಾರ್ಮಿಕ ಸುಧಾರಣಾವಾದಿ ಚಳುವಳಿ, ದೇಸೀ ದಂಗೆಗಳೆಲ್ಲವೂ ತಮ್ಮ ಸಾಮಾಜಿಕ-ಸಾಂಸ್ಕೃತಿಕ ಔನ್ನತ್ಯಕ್ಕೆ ಲಿಪಿ ಶರೀರವನ್ನು ಪ್ರಧಾನವಾಗಿ ಪ್ರತಿಷ್ಠಾಪಿಸಲು ಯತ್ನಿಸಿವೆ. ಭಾಷಿಕ ನೆಲೆಯಿಂದ ಇವುಗಳನ್ನು ನೋಡಿದರೆ ಈ ಹೋರಾಟಗಳು ನಿರ್ಲಿಪಿಕ ಬದುಕನ್ನು, ಚಿಂತನೆ, ಅನುಭವಗಳನ್ನು ಲಿಪೀಕರಿಸುವ ಹೋರಾಟಗಳಾಗಿ ಕಾಣಿಸುತ್ತವೆ. ಹಾಗೇ ಈ ಹೋರಾಟಗಳು ಇಂದು ಇಂಗ್ಲೀಷಿನೆದುರು ನಾವು ಸೆಣಸಬೇಕಾದ ಕೈ ಮಾರ್ಗಗಳೂ ಆಗಿವೆ. ಈ ಹಿನ್ನೆಲೆಯಲ್ಲಿ ನಿರ್ಲಕ್ಷಿತ ಜ್ಞಾನ ಸಮುದಾಯದ (ಶ್ರಮ ಸಮುದಾಯ) ಲಿಪೀಕರಣವು ಕನ್ನಡ ಪ್ರತಿಷ್ಠಾಪನೆಗೆ ನಾವೀಗ ಅನುಸರಿಸಬಹುದಾದ ಒಂದು ಒಳ್ಳೆಯ ಮಾರ್ಗವಾಗಿದೆ. (ರಾಮಲಿಂಗಪ್ಪ ಟಿ, ಬೇಗೂರು, ಸಂಸ್ಕೃತಿ, ಸಾಮಾಜಿಕತೆ ಮತ್ತು ಭಾಷಿಕ ಅಸ್ತಿತ್ವ, ಪು.-೬೩:೬೪). ಮೌಖಿಕ ಪರಂಪರೆಯಲ್ಲಿ ಬದುಕು ಮತ್ತು ಕಲಿಕೆ ನಡುವೆ ಯಾವುದೇ ರೀತಿಯ ಭಿನ್ನತೆಗಳಿಲ್ಲ. ಸಮುದಾಯಗಳ ದೇಸೀ ಕಲಿಕಾ ಪದ್ಧತಿಯಲ್ಲಿ ಜನರ ಜೀವನ ವಿಧಾನವೇ ಕಸುಬು, ಜ್ಞಾನ ಮತ್ತು ಪ್ರಯೋಗ ಎಲ್ಲವೂ ಆಗಿರುತ್ತಿತ್ತು. ಆದರೆ ಶಿಷ್ಟದಲ್ಲಿ ಇವೆಲ್ಲಾ ತಿರುವು, ಮುರುವು, ಇಲ್ಲಿಯ ವಿವರಣೆ ತಾತ್ವಿಕ ವಿವರಣೆಗೆ ಪ್ರಾಧಾನ್ಯತೆಯನ್ನು ಕೊಡುತ್ತದೆ. ಪ್ರಾಯೋಗಿಕತೆ ಕೇವಲ ಆನುಷಂಗಿಕವಾದದ್ದು, ಇಲ್ಲಿ ಜ್ಞಾನ ಸಂವಹನ ಲಿಪಿಯ ಮೂಲಕವೂ ಆಗುತ್ತಿರುತ್ತದೆ. ಮಾತು ಇಲ್ಲಿ ಜ್ಞಾನ ಮತ್ತು ಅನುಭವಗಳ ಸಂಕೇತಿಕರಣ ಎನಿಸಿಕೊಂಡರೆ ಲಿಪಿ ಅಥವಾ ಬರವಣಿಗೆ ಇದರ ಮರು ಸಂಕೇತಿಕರಣ ಎನಿಸಿಕೊಳ್ಳುತ್ತದೆ. ಅಂದರೆ ಅನುಭವದ ಮೂಲಕ ಪಡೆದ ಜ್ಞಾನವೆಲ್ಲವೂ ಬರವಣಿಗೆಯ ಮುಖಾಂತರ ಮರು ಸೃಷ್ಟಿಸಲ್ಪಡುತ್ತದೆ. ಸೃಷ್ಟಿ ಅಂದರೆ ಹೊಸದಾಗಿಯೇನು ಸೃಷ್ಟಿ ಆಗುವುದಿಲ್ಲ ಬದಲಿಗೆ ದಾಖಲಿಸಲ್ಪಡುತ್ತದೆ. ಹೀಗೆ ದಾಖಲಿಸಲ್ಪಟ್ಟ ಅಂಶಗಳೆಲ್ಲವೂ ಹೆಚ್ಚು ಹೆಚ್ಚು ಅಧಿಕೃತತೆಯನ್ನು ಪಡೆಯುತ್ತಾ ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸುತ್ತಾ ಹೋಗುತ್ತವೆ. ಕನ್ನಡ ಭಾಷೆಯು ಮೌಖಿಕತೆಯ ಇನ್ನೊಂದು

ಆಯಾಮಕ್ಕೆ ತೆರೆದುಕೊಳ್ಳಲು ಲಿಖಿತ ಪರಂಪರೆಗೆ ಪಯಣಿಸಿದ ಕಾರಣವಾಗಿಯೇ ಹಸ್ತ ಪ್ರತಿಗಳು ಮಧ್ಯಕಾಲೀನ ಇತಿಹಾಸದಲ್ಲಿ ಅಗಾಧವಾಗಿ ಬೆಳೆದು ಕೊಂಡದ್ದು. ಇಂತಹ ಚಾರಿತ್ರಿಕ ಕಾಲಘಟ್ಟದಲ್ಲಿ ಮೌಖಿಕ ಹಾಗೂ ಲಿಖಿತ ಎರಡೂ ಬಗೆಯ ಪಠ್ಯಗಳು ಅತಿ ಸೂಕ್ಷ್ಮವಾಗಿ ಒಂದನ್ನೊಂದು ಆಕರ್ಷಿಸಿವೆ ಹಾಗೆಯೇ ವಿಕರ್ಷಣೆಗೂ ಒಳಪಟ್ಟಿವೆ. ಬಹುಪಾಲು ಪ್ರಾದೇಶಿಕ ಭಾಷೆಗಳು ತಮ್ಮ ಭಾಷಿಕ ವಿನ್ಯಾಸ ಮತ್ತು ಅರ್ಥ ರೂಪಗಳನ್ನು ತಮ್ಮದೇ ನೆಲದ ಗುಣದಿಂದ ಕಟ್ಟಿಕೊಳ್ಳಲು ಯತ್ನಿಸಿದ್ದರಿಂದಲೇ ಅವುಗಳ ಅನನ್ಯತೆ ಮತ್ತು ಅಸ್ತಿತ್ವ ಗಟ್ಟಿಯಾದದ್ದು. ವಚನ ಚಳುವಳಿಯು ಮೌಖಿಕ ಕ್ರಾಂತಿಯೇ! ಅಂದರೆ ನುಡಿಯ ಬೆಡಗಿನ ಆತ್ಯಂತಿಕ ಅಭಿವ್ಯಕ್ತಿಯೇ! ಅಲ್ಲಮನ ಪಠ್ಯಗಳೆಲ್ಲವೂ ಅರ್ಥದ ಮಾನವನ್ನು ನಿಗೂಢತೆಯ ಸೌಂದರ್ಯದಿಂದ ಬಿಂಬಿಸುವಂತವೇ. ಹಾಗಾಗಿಯೇ ಆತನಿಗೆ ಮೌನ ಕೂಡ ಅಗಾಧವಾದ ಧ್ವನಿ ಶಕ್ತಿಯ ಸಂಕೇತ, ಇಂತಹ ನುಡಿಯ ನಾಡಿಯಿಂದ ಅಲ್ಲಮನ ಪಠ್ಯಗಳು ಕ್ರಾಂತಿಯ ಆಚೆಗಿನ ನಿಶ್ಯಬ್ದಕ್ಕೆ ಪಯಣಿಸುತ್ತವೆ. ಬಸವಣ್ಣನ ನುಡಿಗೆ ಅನಿವಾರ್ಯವಾದ ನಿಚ್ಚಳ ಕೂಗು ಇದ್ದೇತಿರಬೇಕಿತ್ತು. ವಚನ ಚಳುವಳಿಯ ಪ್ರತಿಯೊಂದು ಪಠ್ಯವೂ ಮೌಖಿಕ ಜಗತ್ತಿನ ಆತ್ಯಂತಿಕ ಧ್ವನಿ ಎಂಬುದಕ್ಕೆ ಅಪಾರ ಸಾಕ್ಷ್ಯವಿದೆ. ಇದು ಲಿಖಿತ ಪಠ್ಯಗಳು ಹೇಗೆ ಮೌಖಿಕ ಪಠ್ಯಗಳ ಅನುಭವ ತತ್ವವನ್ನು ತಮ್ಮ ವಿನ್ಯಾಸಕ್ಕೆ ಒಳಪಿಸಿಕೊಂಡವು ಎಂಬುದನ್ನು ಸೂಚಿಸುತ್ತದೆ (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು-೪೬) ವಿನ್ಯಾಸದ ಜೊತೆ ಜೊತೆಯಲ್ಲೇ ಅವು ತಮ್ಮ ವಿಕಾಸಕ್ಕೂ ಮೂಲವನ್ನಾಗಿಸಿಕೊಂಡವು. ಕನ್ನಡದ ಲಿಖಿತ ಅಭಿವ್ಯಕ್ತಿಯು ಸಂಸ್ಕೃತ ಭಾಷೆಯ ವಿನ್ಯಾಸವನ್ನೊಳಗೊಂಡಿರುವುದು ಇದಕ್ಕೆ ಸೂಕ್ತ ಉದಾಹರಣೆಯೆನಿಸುತ್ತದೆ. “ಈ ಅರ್ಥದಲ್ಲಿ ಮೌಖಿಕ ಕಾವ್ಯದ ಎಲ್ಲ ಪಠ್ಯಗಳೂ ಭಾಷಿಕ ವಿನ್ಯಾಸಗಳೂ ರೂಪಾಂತರಗಳೂ ಅಭಿವ್ಯಕ್ತಿಯ ಬಹುರೂಪಿ ಆಚರಣೆಗಳೇ, ಕಾವ್ಯಗಳನ್ನು ಹಾಡುತ್ತಾ ರಾತ್ರಿಗಳನ್ನು ತುಂಬಿಸುವುದು ಆಚರಣೆಯೇ. ಇದೇ ಕಾವ್ಯವೇ ಅದರ ಮೌಖಿಕ ಅನುಸಂಧಾನವೇ ಸಮಷ್ಟಿಯಾದ ಆಚರಣೆ, ಇಂತಹ ಅಭಿವ್ಯಕ್ತಿಯ ಆಚರಣೆಯು ಮೌಖಿಕತೆಯ ಶಾಬ್ದಿಕ ಲಯವೊಂದನ್ನೇ ಪ್ರಧಾನ ಮಾಡಿರುವುದಿಲ್ಲ, ಸಮುದಾಯಗಳ ಸಮಷ್ಟಿ ಪ್ರಜ್ಞೆಯನ್ನು ಅಂತಹ ಅಭಿವ್ಯಕ್ತಿಯ ಆಚರಣೆಗಳು ಸಾಕ್ಷೀಕರಿಸುತ್ತ ಮುಕ್ತಿಯ ಧ್ಯಾನವನ್ನು ಕೈಗೊಳ್ಳುತ್ತಿರುತ್ತವೆ.” (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು:೪೯). ಮೌಖಿಕ ಪ್ರಜ್ಞೆಯ ಆಚರಣೆಗಳೆಲ್ಲವೂ ಸಾಂಸ್ಕೃತಿಕ ವಲಯವೊಂದನ್ನು ರೂಪಿಸಿಕೊಳ್ಳುತ್ತವೆ. ಮತ್ತು ಆ ಮುಖಾಂತರ ಸಂಸ್ಕೃತಿಯೊಂದರ ನಿಜವಾದ ವಕ್ತಾರರಂತೆ ಕಂಡುಬರುತ್ತವೆ. ಆದರೆ ಲಿಖಿತ ಪರಂಪರೆಯು ಭಾಷಿಕ ವಿನ್ಯಾಸದ ಮೂಲಕ ಸಂಸ್ಕೃತಿಯೊಂದನ್ನು ಪ್ರವೇಶಿಸುತ್ತದೆ. ಹಾಗಾಗಿ ಲಿಖಿತ ಪರಂಪರೆಗೆ ಸಂದರ್ಭದ ಹೊರ ಬಂದು ಆ ಪಠ್ಯವನ್ನು ಅರ್ಥೈಸುವುದು, ಓದುವುದು, ತಿಳಿಯುವುದು ತುಂಬ ಕಷ್ಟ ಹಾಗೂ ಕೃತಕ ಸ್ಥಿತಿಯಲ್ಲಿ ಅವನ್ನು ಅನುಸಂಧಾನ ಮಾಡಿದಂತಾಗುತ್ತದೆ. ಮೌಖಿಕ ಪಠ್ಯದ ಒಳಗೆ ಲಿಂಗ ಸಂಬಂಧಗಳ ಧ್ವನಿಯೂ ಬದಲಾಗುತ್ತಿರುತ್ತದೆ. ಸೂಕ್ಷ್ಮವಾಗಿ ಜಾತೀಯ ಸಂಬಂಧಗಳೂ ನುಸುಳುತ್ತವೆ. ಆದ್ದರಿಂದ ಒಂದು ಮೌಖಿಕ ಪಠ್ಯದ ಸಂದರ್ಭವನ್ನು

ಗ್ರಹಿಸಿದೆ ಪಠ್ಯದ ಬಗ್ಗೆ ನೀಡುವ ವ್ಯಾಖ್ಯಾನಗಳು ಚೌಕಟ್ಟಿನ ಒಳಗೇ ಹುಟ್ಟುವಂತಾಗಿರುತ್ತವೆ. ಮೌಖಿಕ ಪಠ್ಯವನ್ನು ಓದುವುದು ಕೂಡ ಅರ್ಥ ಶೋಧಕ್ಕಾಗಿ, ಆದರೆ ಓದಿನ ಕ್ರಮಕ್ಕೆ ಮೌಖಿಕ ಪಠ್ಯದ ಅರ್ಥಗಳು ತೆರೆದು ಕೊಳ್ಳುವುದಿಲ್ಲ. ಕುಮಾರವ್ಯಾಸನ ಕಾವ್ಯವನ್ನು ಭಾಗವತ ವಾಚಿಸುತ್ತಲೇ ಕೇಳುಗರಿಗೆ ಮೌಖಿಕವಾಗಿ ಮುಟ್ಟುತ್ತಾನೆ. ಹಾಗೆ ಭಾಗವತನ ಮೂಲಕ ಕುಮಾರವ್ಯಾಸನ ಕಾವ್ಯ ಮೌಖಿಕವಾಗುತ್ತಾ ಕಾವ್ಯದ ದೃಶ್ಯಗಳನ್ನು ನಿರ್ಮಿಸುತ್ತಾ ಸಾಗುತ್ತದೆ. ಭಾಗವತರ ಅರ್ಥವನ್ನು ಮೀರಿಯೂ ಕೇಳಿಸಿಕೊಳ್ಳುವವರು ಕಾವ್ಯದ ಜೊತೆ ಅನುಸಂಧಾನಗೊಳ್ಳಬಲ್ಲರು. (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು-೪೩) ಆದರೆ ಲಿಖಿತ ಪರಂಪರೆಯ ಭಿತ್ತಿ ತುಂಬಾ ಸಂಕೀರ್ಣವಾದುದರಿಂದ ಅದರ ಇತರ ಸಾಂಸ್ಕೃತಿಕ ಸಾಧ್ಯತೆಗಳು ಗೌಣವೆನಿಸುತ್ತವೆ ಮತ್ತು ಲಿಖಿತ ಪರಂಪರೆ ಆ ಯಾವ ಸಂಸ್ಕೃತಿಕ ಅಂಶಗಳನ್ನೂ ಭಾಷಿಕ ನೆಲೆಯನ್ನು ಹೊರತುಪಡಿಸಿ ಒಳಗೊಂಡಿರುವುದಿಲ್ಲ. ಹಾಗಾಗಿಯೇ ಲಿಖಿತ ಪರಂಪರೆಯ ಸಂಸ್ಕೃತದಲ್ಲಿಯ ಪ್ರಧಾನ ಸಾಹಿತ್ಯವಾಹಿನಿಯು ಶ್ರುತಿ-ಸ್ಮೃತಿ-ಪುರಾಣಗಳಿಂದ ಪ್ರಪಂಚಿತವಾದ ವರ್ಣಾಶ್ರಮ ಧರ್ಮದ ಅಭಿವ್ಯಕ್ತ ರೂಪ. ಸಂಸ್ಕೃತ ಸಾಹಿತ್ಯದ ಮೇರು ಕೃತಿಗಳಾದ ರಾಮಾಯಣ, ಮಹಾಭಾರತಗಳು ಎರಡು ರಾಜವಂಶಗಳ ಮುಖ್ಯವಾಹಿನಿಯಲ್ಲಿ ಬರುವ ಅನೇಕ ತಲೆಮಾರಿನ ಕಥೆಗಳನ್ನು ಹೇಳುತ್ತವೆ. ಅವೆಲ್ಲವೂ ವರ್ಣಾಶ್ರಮ ಪದ್ಧತಿಗೆ ಬದ್ಧವಾಗಿಯೇ ರಚಿತವಾಗಿವೆ. ಜನಸಾಮಾನ್ಯರ ಬದುಕು, ರೀತಿ, ರಿವಾಜು, ಅವರಿಗೆ ಗೌಣವೆನಿಸಿದೆ. 'ಬ್ರಾಹ್ಮಣರೇ ಭೂ ಲೋಕದ ಸುರರು' ಎಂದು ಕ್ಷತ್ರಿಯರು, 'ರಾಜಾಪ್ರತ್ಯಕ್ಷಾ ದೇವತಾ' ಎಂದು ಬ್ರಾಹ್ಮಣರು ಪರಸ್ಪರ ಹೊಗಳಿಕೊಂಡು ಬಹುಸಂಖ್ಯಾತರನ್ನು ಪ್ರಾಣಿಗಳಂತೆ ಕಂಡಿದ್ದಾರೆ. ಇದಕ್ಕೆ ಶಂಬೂಕ ವಧೆಯ ಪ್ರಕರಣ ಮತ್ತು ಏಕಲವ್ಯ ಪ್ರಕರಣಗಳನ್ನು ಉದಾಹರಿಸಬಹುದು" (ಮೂಡ್ನಾಕೂಡು ಚಿನ್ನಸ್ವಾಮಿ, ಸಂಸ್ಕೃತ ಮತ್ತು ಅದರ ಪ್ರಸ್ತುತತೆ, ಪು-೧೧೧) ಆದರೆ ಬುದ್ಧ ಯುಗದಲ್ಲಿ ಸಮಾಜದ ಎಲ್ಲಾ ವರ್ಗದವರಿಗೂ ಅಕ್ಷರ ಜ್ಞಾನದ ಅವಕಾಶ ಕಲ್ಪಿಸಿ ಅವರವರ ಪ್ರಾಂತೀಯ ಭಾಷೆಗಳನ್ನು ಪ್ರೋತ್ಸಾಹಿಸಲಾಯಿತು. ಬುದ್ಧಯುಗದ ಅವಸಾನದ ನಂತರ ಮತ್ತೆ ವೈದಿಕ ಧರ್ಮ ವರ್ಣಾಶ್ರಮಕ್ಕೆ ಅಂಟಿಕೊಂಡಿತು. ಆಗ ಮತ್ತೆ ಬಹುಸಂಖ್ಯಾತರು ಅನಕ್ಷರಸ್ಥರಾದರು. ಆದರೆ ಹದಿನೇಳು ಮತ್ತು ಹದಿನೆಂಟನೆಯ ಶತಮಾನದ ಈಚೆಗೆ ಅನೇಕ ಬಗೆಯ ಜ್ಞಾನ ಶಾಖೆಗಳು ಹುಟ್ಟಿಕೊಂಡಿವೆ. ಹೀಗೆ ಪುರೋಹಿತ ಷಾಹಿ ಧೋರಣೆ ಕೂಡ ಲಿಖಿತ ಪರಂಪರೆಯ ಹಿಮ್ಮುಖ ಚಲನೆಯಲ್ಲಿ ಪ್ರಮುಖ ಪಾತ್ರ ವಹಿಸಿರುವುದು ಗೊತ್ತಾಗುತ್ತದೆ.

### ೩.೨. ಸ್ಥಳೀಯ ಕಥನ ಪರಂಪರೆ ಹಾಗೂ ವಿಶ್ವಾತ್ಮಕ ಕಥನ ಪರಂಪರೆ

ಸ್ಥಳೀಯ ಇತಿಹಾಸವೆನ್ನುವಾಗ ನಮಗೆ ಇದನ್ನು ಒಂದು ಸೀಮಿತ ಚೌಕಟ್ಟಿನ ಮಿತಿಗೊಳಪಡಿಸುವಂತಾಗುತ್ತದೆ ಎಂಬ ಪ್ರಶ್ನೆ ಏಳುವುದು ಸಹಜವೇ ಆಗಿದೆ. ಇದು ಒಂದು ಪ್ರೇದೇಶಿಕತೆಯನ್ನು ಪ್ರತಿನಿಧಿಸಿದರೂ 'ಜಾಗತಿಕ'ವಾಗಿ ಗುರ್ತಿಸಿಕೊಳ್ಳುವಾಗ ಈ ತರಹದ ಬಿಕ್ಕಟ್ಟು ಎದುರಾಗುತ್ತದೆ. ಮತ್ತು ಇದು ಕಲ್ಪಿತವೆನ್ನುವ ಭಾವನೆಯೂ ಮೂಡುತ್ತದೆ. ಆದರೆ ಮೌಖಿ ಪರಂಪರೆಯ

ಅಸಂಖ್ಯ ಇತಿಹಾಸ ಕಥನಗಳು ಜಗತ್ತಿನುದ್ದಕ್ಕೂ ಕಂಡು ಬರುವುದರಿಂದ ಅವುಗಳ ಪ್ರಾದೇಶಿಕತೆಯಲ್ಲಿ ಸಮಾನತೆ, ಆಕರದಲ್ಲಿ ಸಾಮ್ಯತೆ ಕಾಣಿಸಿಕೊಳ್ಳುವುದರಿಂದ ಅಂತಹ ಇತಿಹಾಸವನ್ನು ಕಲ್ಪಿತ ಇತಿಹಾಸವೆಂದು ಕರೆಯುವ ಅಗತ್ಯ ಬೀಳುವುದಿಲ್ಲ. ಅಂದರೆ ಜೀವಂತವಾಗಿ ಜನಪದ ಸಮಾಜಗಳಲ್ಲಿ, ಮೌಖಿಕವಾಗಿ, ಆಚರಣಾತ್ಮಕವಾಗಿ ಸೇರಿಕೊಂಡಿರುವ ಇತಿಹಾಸ ಪ್ರಜ್ಞೆಯು ತನ್ನ ಸ್ಥಳೀಯತೆಯ ಮೂಲಕವೇ ವಿಶ್ವಾತ್ಮಕ ರೀತಿಯನ್ನು ಅನುಸರಿಸುತ್ತದೆ. ಹೀಗಾಗಿಯೇ ಸ್ಥಳೀಯ ಚರಿತ್ರೆಯ ಒಳಗಿಂದ ಹುಟ್ಟಿಕೊಳ್ಳುವ ಎಲ್ಲಾ ಸಾಂಸ್ಕೃತಿಕ ನಾಯಕರು ಒಂದೇ ಸ್ಥಿತಿಯ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುತ್ತಾರೆ ಆದಿವಾಸಿ ಬುಡಕಟ್ಟು ವೀರನಾಗಿರಲಿ, ನಮ್ಮ ದೇಶೀ ಕಾವ್ಯಗಳ ನಾಯಕನಾಗಿರಲಿ ಅಂತಿಮವಾಗಿ ಇವರೆಲ್ಲರೂ ತಮ್ಮ ಕಾಲದ ಸಮಾಜದ ಕಾಣ್ಕೆಗಳಿಗೆ ಬದ್ಧರಾದವರು. ಹಾಗಾಗಿಯೇ ಮೌಖಿಕ ಇತಿಹಾಸ ಜಗತ್ತಿನ ನೊಂದವರೆಲ್ಲರ ಇತಿಹಾಸದ ಪ್ರತಿಮೆಗಳನ್ನು, ಸಂಕೇತನಗಳನ್ನು ಈ ಕಾಲದ ಬೌದ್ಧಿಕತೆಯ ಜೊತೆಗೆ ರಾಜಕಾರಣದ ಜೊತೆಗೆ ಬೆಸುಗೆ ಮಾಡಿಕೊಳ್ಳಲು ಹೋರಾಡುತ್ತದೆ. ಯುದ್ಧಗಳೇ ಕೇಂದ್ರವಾಗಿರುವ ರಾಷ್ಟ್ರೀಯ ಇತಿಹಾಸ, ಜನಸಾಮನ್ಯರ ದೃಷ್ಟಿಕೋನದಿಂದ ದೊರೆಯುವ ಮಾಹಿತಿಗಳನ್ನು ರಾಷ್ಟ್ರೀಯ ಇತಿಹಾಸದೊಂದಿಗೆ ಹೊಂದಿಸಿ ಬರೆಯುವ 'ಪ್ರತಿಷ್ಠಿತವಾದಿ' ಇತಿಹಾಸ, ಮತ್ತು ರಾಷ್ಟ್ರದ ಅರಿವಿಲ್ಲದೆ ಸಾಂಪ್ರದಾಯಿಕ ಇತಿಹಾಸದ ತರಬೇತಿಯೂ ಇಲ್ಲದೆ ಇರುವ ಜನಪದ ಇತಿಹಾಸ, ಕೊನೆಯದಾದ ಇತಿಹಾಸಕ್ಕೆ ತನ್ನದೇ ಆದ ದೃಷ್ಟಿಕೋನವಿದ್ದು ಅದು ರಾಷ್ಟ್ರೀಯ ಇತಿಹಾಸಕ್ಕೆ ಪರ್ಯಾಯವಾಗಿರುತ್ತದೆ ಎಂದು ರಿಚರ್ಡ್ ಎಂ.ಡಾರ್ಸನ್ ಅಭಿಪ್ರಾಯ ಪಡುತ್ತಾರೆ.

ಕಥನ ಮಾದರಿಯ ಸಂದರ್ಭದಲ್ಲಿ ಸ್ಥಳೀಯವೆನ್ನಬಹುದಾದ ಒಂದು ಕಥನ ಮಾದರಿ ಅಥವಾ ಕಥನ ಪರಂಪರೆಯೇನಾದರೂ ಇದೆಯೇ ಎಂಬ ಪ್ರಶ್ನೆ ಎದುರಾಗುವುದು ಸಹಜವಾಗಿಯೇ ಇದೆ. ಮೌಖಿಕತೆಯ ಸಂದರ್ಭದಲ್ಲಂತೂ ಎಲ್ಲವೂ 'ಸ್ಥಳೀಯ'ವೆನ್ನುವ ಅನುಭವದ ಮೇಲೆಯೇ ನಿರ್ಧರಿತವಾಗುತ್ತಿರುತ್ತದೆ. ಜನಸಾಮಾನ್ಯರ ಜ್ಞಾನ ಪರಂಪರೆಗಳೆಲ್ಲವೂ ಸ್ಥಳೀಯವೆನ್ನುವ ಮಾದರಿಯನ್ನೇ ಒಳಗೊಂಡಿರುತ್ತವೆ. ಹಾಗಾಗಿ ನಾವು 'ಸ್ಥಳೀಯ' ಎಂಬ ಒಂದು ಮಾದರಿಯನ್ನಾಗಿಸಿಕೊಂಡು ಅದನ್ನು ನೋಡುವುದು ಔಚಿತ್ಯ ಪೂರ್ಣವೆನಿಸುತ್ತದೆ. ಈ 'ಸ್ಥಳೀಯ' ಮಾದರಿಯನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಲು ಪ್ರಯತ್ನಿಸುತ್ತಿರುವ ಪ್ರಸ್ತುತ ಸಂದರ್ಭದಲ್ಲಿ, ಅದರ ಸಾಮಗ್ರಿಯನ್ನು ವಿವರವಾಗಿ ಪರಿಶೀಲಿಸುವ ವೈಜ್ಞಾನಿಕ ಸತ್ಯಕ್ಕೆ ಒರೆಹಚ್ಚಿ ನೋಡುವ ಕಾರ್ಯ ಮೊದಲಿಗಿಂತಲೂ ಶಾಸ್ತ್ರೀಯವಾಗಿ, ಚುರುಕಾಗಿ ನಡೆಯಬೇಕಾಗಿದೆ. ಈಗಾಗಲೇ ಸೂಚಿತವಾಗಿರುವಂತೆ ಈ ಪ್ರಕಾರವು ಚಾರಿತ್ರಿಕ ಕಾಲದ ಸಂಸ್ಕೃತಿಯ ಎಲ್ಲ ನಡವಳಿಕೆಗಳನ್ನು ಅರಿಯಲು ನೆರವಿಗೆ ಬರುತ್ತದೆನ್ನುವುದು ಬಹಳ ಮುಖ್ಯವಾದ ವಿಚಾರವಾಗಿದೆ. ಆದರೆ ಮಾನವನ ಸಾಂಸ್ಕೃತಿಕ ಪರಂಪರೆಯನ್ನು ಗುರುತಿಸುವಲ್ಲಿ ಪುರಾಣ, ಚರಿತ್ರೆಗಳೆಂಬ ಭಾಗಗಳನ್ನಾಗಿ ಮಾಡಿಕೊಂಡು ಪ್ರತ್ಯೇಕವಾಗಿ ಅಧ್ಯಯನ ಮಾಡಲು ತೊಡಗಿದರೆ; ಆಚರಣೆ, ನಂಬಿಕೆ, ಸಂಪ್ರದಾಯಗಳನ್ನೋ,

ಸಾಹಿತ್ಯವನ್ನೇ ಆಕರವಾಗಿ ಬಳಸಿಕೊಳ್ಳುವಾಗ, ವಿವಿಧ ಸಾಂಸ್ಕೃತಿಕ ಸ್ಥರಗಳ ವೈಶಿಷ್ಟ್ಯವನ್ನಾಗಲೀ ಕಾಲಾವಧಿಯನ್ನಾಗಲೀ ಕುರಿತು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ ಎಂಬುದನ್ನು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರಾದರು ಇದನ್ನು ಮಾನವಿಕಶಾಸ್ತ್ರ ಅಥವಾ ಸಮಾಜ ವಿಜ್ಞಾನಗಳ ದೃಷ್ಟಿಯಿಂದ ನಿರ್ದಿಷ್ಟವಾಗಿ ಹೇಳಬಹುದು. ಆದರೆ ಜನಪದ ಸಾಹಿತ್ಯವನ್ನೇ ಮುಖ್ಯ ಆಕರವನ್ನಾಗಿಸಿಕೊಂಡೂ ಈ ಅಧ್ಯಯನ ಮಾಡಲು ಸಾಧ್ಯವಿದೆ. ಇದರ ಜೊತೆ ಜೊತೆಯಲ್ಲೇ ನಂಬಿಕೆ, ಸಂಪ್ರದಾಯ, ಆಚರಣೆಗಳಂತಹ ಬಹುಮುಖ್ಯ 'ಸ್ಥಳೀಯ' ಮಾದರಿಗಳು ಮುಂದೆ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ತುಂಬಾ ಸಹಾಯಕವಾಗುತ್ತವೆ. ಹೀಗೆ ಈ ಸ್ಥಳೀಯ ಕಥನ ಮಾದರಿಗಳು, ಅಥವಾ ಸ್ಥಳೀಯ ಕಥನ ಪರಂಪರೆಗಳು ಆಯಾ ಪ್ರದೇಶದ ಆಯಾ ಭಾಗದ ಸ್ಥಳೀಯ ಚರಿತ್ರೆಯನ್ನು ಪ್ರತಿಬಿಂಬಿಸುತ್ತವೆ. ಅದನ್ನು ಸ್ಥಳೀಯ ಚರಿತ್ರೆ ಎಂದು ಇತ್ತೀಚೆಗೆ ವಿದ್ವಾಂಸರು ಗುರುತಿಸತೊಡಗಿದ್ದಾರೆ.

ಈ ಸ್ಥಳೀಯ ಎನ್ನುವ ಎಲ್ಲಾ ಪರಿಕಲ್ಪನೆಗಳೂ ದೇಶೀಯ ನೆಲೆಯಲ್ಲಿಯೇ ರೂಪುಗೊಳ್ಳುತ್ತಿರುತ್ತವೆ. 'ದೇಶಿ' ಎಂಬುದು ಇಂಗ್ಲೀಷಿನ nativity ಗೆ ಸಮಾನಾರ್ಥಕವಾಗಿ ಬಳಕೆಯಾಗಿದೆ. ಅಲ್ಲದೆ ದೇಸೀ ಎಂಬುದೂ ಸಹ ಈ' ದೇಶೀ' ಗೆ ಪರ್ಯಾಯವಾಗಿ ಬಳಕೆಯಾಗುತ್ತಿರುವ ಪದ ಅಥವಾ 'ಪರ್ಯಾಯ ಪರಿಕಲ್ಪನೆ'ಯಾಗಿದೆ. ಸಾಹಿತ್ಯದ ಸಂದರ್ಭದಲ್ಲಂತೂ ಈ ದೇಸೀ ಮತ್ತು ಮಾರ್ಗದ ಕುರಿತು ಸಾಕಷ್ಟು ಚರ್ಚೆಗಳು ನಡೆದಿವೆ. nativity ಎನ್ನುವುದು ಇತ್ತೀಚೆಗೆ 'nativism' ಎಂಬ ವಾದದ ಅಥವಾ ಅಧ್ಯಯನ ವಿಧಾನದ ಹುಟ್ಟಿಗೆ ಕಾರಣವಾಗಿದೆ. ಕನ್ನಡದಲ್ಲಿ ಇದನ್ನು ದೇಸೀವಾದ ವೆಂದು ಗುರುತಿಸಲಾಗುತ್ತಿದೆ. "ಕನ್ನಡದಲ್ಲಿರುವುದೆಲ್ಲಾ 'ದೇಶಿ' ಎಂಬ ಮಾತು ಒಂದು ರೀತಿಯಲ್ಲಿ ನಿಜ. ಆದರೆ ಕನ್ನಡದಲ್ಲೇ ಮಾರ್ಗ ಪದ್ಧತಿ ಮತ್ತು ದೇಶಿ ಪದ್ಧತಿ ಇವೆ ಎಂಬುದನ್ನೂ ಮರೆಯಬಾರದು. ಕನ್ನಡ ಭಾಷೆ ಉಗಮವಾಗಿ ಅದು ಆಡು ನುಡಿಯಾಗಿ ಮಾತ್ರ ಇದ್ದು, ಮೌಖಿಕ ಪರಂಪರೆಯಲ್ಲೇ ಬಾಳುತ್ತಿದ್ದ ಕಾಲದಲ್ಲಿ ಕನ್ನಡವೆಲ್ಲಾ ದೇಸಿಯೇ ಆಗಿತ್ತು. ಆದರೆ ಮೌಖಿಕ ಪರಂಪರೆಯಿಂದ, ಸಂಸ್ಕೃತದ ಸಂಪರ್ಕದಿಂದ ಕನ್ನಡ ಶಿಷ್ಟ ಸಾಹಿತ್ಯ ಮಾರ್ಗದ ಜೊತೆ ಸಂಬಂಧವನ್ನು ಬೆಳೆಸಿಕೊಳ್ಳಬೇಕಾಯಿತು. ಕರ್ನಾಟಕದಲ್ಲಿ ಕನ್ನಡವೇ ಮಾಧ್ಯಮವಾಗಿರಬೇಕಾಗಿರುವುದು ಸಹಜವಾದರೂ ಇಂಗ್ಲೀಷ್ ಮಾಧ್ಯಮದ ಕಡೆ ಜನ ಒಲವು ತೋರಿಸುವಂತೆ ಹಿಂದಿನ ಕಾಲದಲ್ಲಿ ಸಂಸ್ಕೃತ ಸಂಪ್ರದಾಯದ ಕಡೆ ಪ್ರಬುದ್ಧ ಜನ ಒಲವು ತೋರಿಸಿರಬೇಕು. ಅದಕ್ಕೆ ಕನ್ನ ಡದಲ್ಲಿ ಲಭ್ಯವಾದ ಮೊದಲ ಶಾಸನದಲ್ಲೇ ಸಂಸ್ಕೃತದ ಪ್ರಭಾವ ನಿಚ್ಚಳವಾಗಿದೆ. ಕನ್ನಡ ಸಾಹಿತ್ಯದ ಪ್ರಾರಂಭದ ಕಾಲದಲ್ಲಿ ಮೌಖಿಕ ಸಾಹಿತ್ಯ ಇದ್ದಿರ ಬೇಕೆಂಬುದರಲ್ಲಿ ಸಂದೇಹವೇ ಇಲ್ಲ" (ಡಾ.ಆರ್ವಿಯಸ್. ದೇಶಿ- ದೇಶಿಯತೆ -ದೇಶೀವಾದ ಪು: ೧೮) "'ಕವಿರಾಜ ಮಾರ್ಗ' ಕಾರನು ಸ್ಪಷ್ಟ ಪಡಿಸಿರುವಂತೆ ಕನ್ನಡಿಗರು ಓದದೆಯೇ ಪರಿಣತ ಮತಿಗಳು ಎಂಬುದು ಮೌಖಿಕ ಸಾಹಿತ್ಯಕ್ಕೆ ಅನ್ವಯಿಸುವ ಮಾತು." ದೇಶೀ ಮುಖವಾಗಿ ಕನ್ನಡದ ಸಾಹಿತ್ಯ ವಿಕಾಸ ಹೊಂದಿದ ದೆಸೆಯಲ್ಲಿ ವಚನ, ರಗಳೆ, ಮತ್ತು ಷಟ್ಪದಿ

ಮೊದಲನೆಯ ಮಜಲಾದರೆ ಕೀರ್ತನೆ, ಯಕ್ಷಗಾನ ಮತ್ತು ಸಾಂಗತ್ಯ ಎರಡನೆಯ ಮಜಲೆಂದು ಹೇಳಬಹುದು. ವಚನದ್ದು ಮಾತನಾಡುವ ಭಾಷೆ. ಭಕ್ತಿ ಪ್ರಿಯನಾದ ಪರಶಿವನ ಜೊತೆ ಸಂಭಾಷಣೆ ನಡೆಸುವ ಹಂಬಲಕ್ಕೆ ಅನುಸಾರವಾಗಿ ಮೂಡಿಬಂದ ವಿಶಿಷ್ಟ ಪ್ರಕಾರ ವಚನ. 'ವಚನ'ಎಂಬುದಕ್ಕೆ 'ಮಾತನಾಡಿದ್ದು' ಎಂದೇ ಅರ್ಥ. ಕನ್ನಡದಲ್ಲಿ ಚಂಪೂ ಸಾಹಿತ್ಯ ರಚನೆಯಾಗುವುದಕ್ಕೆ ಮೊದಲು ಸಂಸ್ಕೃತವೇ ಮಾರ್ಗ, ಕನ್ನಡದಲ್ಲಿರುವುದೆಲ್ಲಾ ದೇಶೀ. (ಅದೇ ಪು :೩೦) ಈ ಮೇಲಿನ ಎಲ್ಲಾ ವಿವರಣೆಯಿಂದ ನಮಗೆ ಈಗ ದೇಶೀ ಎಂದರೆ ಏನು ಎಂಬುವುದರ ಒಂದು ಸ್ಪಷ್ಟ ಕಲ್ಪನೆ ಸಿಕ್ಕಂತಾಗಿದೆ. ಈ ದೇಶೀ ಎಂಬುದರ ಚರ್ಚೆ ಇತ್ತೀಚಿನ ದಶಕಗಳಲ್ಲಿ ವ್ಯಾಪಕತೆಯನ್ನು ಪಡೆದುಕೊಂಡಿದೆ ಯಾದರೂ ಸಂಗೀತ ಕ್ಷೇತ್ರದಲ್ಲಿ ಈ ಕುರಿತು ಹೆಚ್ಚು ಚರ್ಚೆಯಿದೆ. ಬಹುಶಃ ಅಲ್ಲಿಯೇ ದೇಶೀ ಮತ್ತು ಮಾರ್ಗದ ಕುರಿತ ಸ್ಪಷ್ಟ ಕಲ್ಪನೆಯಿದೆ ಮತ್ತು ಸ್ಪಷ್ಟವಾದ ನಿರ್ಧಾರವೂ ಇದೆಯೆನಿಸುತ್ತದೆ. "ದೇಶೀವಾದದ ಪರಿಕಲ್ಪನೆಯೇ ಹೊಸದು, ದೇಶಿಯ ಬಗ್ಗೆ ಸಾವಿರಾರು ವರ್ಷಗಳಿಂದ ಆಲೋಚನಾವಿಧಾನಗಳು ಬೆಳೆದಿವೆ. ಅವುಗಳಲ್ಲಿ ಭಾರತೀಯ ಆಲೋಚನೆಗಳು ಇವೆ, ಅಲ್ಲದೆ ಪಾಶ್ಚಾತ್ಯರ ಆಲೋಚನೆಗಳೂ ಸೇರಿವೆ. ಆದರೆ ದೇಶೀವಾದ ಎಂಬ ಸೈದ್ಧಾಂತಿಕ ವಿಚಾರ ಹೊಸದಾಗಿ ಸಾಹಿತ್ಯ, ಸಂಸ್ಕೃತಿ ಮುಂತಾದ ಕ್ಷೇತ್ರಗಳಲ್ಲಿ ಪ್ರವೇಶಿಸಿದೆ. ಭಾಷಾಶಾಸ್ತ್ರ, ಸಾಹಿತ್ಯಶಾಸ್ತ್ರ, ಜಾನಪದ ದಂಥ ಅಧ್ಯಯನ ವಿಭಾಗಗಳಲ್ಲಿ ಪಾಶ್ಚಾತ್ಯ ಸಿದ್ಧಾಂತಗಳನ್ನು ತಿರಸ್ಕರಿಸಿ ಅಥವಾ ಸೀಮಿತವಾಗಿ ಸ್ವೀಕರಿಸಿ ನಮ್ಮವೇ ಆದ ಸೈದ್ಧಾಂತಿಕ ಆಲೋಚನೆಗಳನ್ನು ಬೆಳೆಸಬೇಕೆಂಬ ಬಯಕೆ ಕೆಲವರಲ್ಲಿದೆ. ಇದು ಒಳ್ಳೆಯ ಆಲೋಚನೆಯೇ ಸರಿ. ಆದರೆ ಮಾರ್ಗ-ದೇಶೀಗಳಂತೆಯೇ ದೇಶೀವಾದದಲ್ಲೂ ಪಾಶ್ಚಾತ್ಯ ಮೂಲದ ದೇಶೀವಾದ, ದೇಶಿ ಮೂಲದ ದೇಶೀವಾದ ಇತ್ಯಾದಿಯಾಗಿ ವಿಭಜಿಸುವ ಅಗತ್ಯವಿದೆಯೇ? ಇದೆ ಎಂದೇ ಕೆಲವರ ಅಭಿಪ್ರಾಯವಾಗಿದೆ (ಅದೇ ಪು-೬೯). ಆದರೆ ದೇಶೀವಾದ ಎನ್ನುವ ಕೊಂಡಿಯ ಅಡಿ ನಾವಿಂದು ಅಧ್ಯಯನಕ್ಕೆ ಮುಂದಾಗಬೇಕು. ಎನ್ನುವುದು ಕೇವಲ ಪಾಶ್ಚಾತ್ಯ ಸಿದ್ಧಾಂತಗಳನ್ನು ಪರೀಕ್ಷಿಸುವುದಕ್ಕಾಗಿ ಎಂದು ಭ್ರಮಿಸಿದರೆ ತಪ್ಪು. ಒಬ್ಬ ಅಧ್ಯಯನಕಾರ ತನ್ನ ತನವನ್ನು ಕಂಡುಕೊಳ್ಳುವುದರ ಜೊತೆಗೆ ದೇಶದ ನೆಲೆಗಳನ್ನು ಕಂಡುಕೊಳ್ಳಬೇಕಾಗಿದೆ. ನಮ್ಮತನದ ಅರಿವಿನ ಪ್ರಜ್ಞೆಯನ್ನು ಹುಟ್ಟುಹಾಕಬೇಕಾಗಿದೆ. ಇದು ಏಕಕಾಲಕ್ಕೆ ಸಾಹಿತ್ಯ, ಸಮಾಜ, ಸಂಸ್ಕೃತಿ, ರಾಜಕೀಯ, ಧರ್ಮ, ಅರ್ಥ, ಭಾಷೆ ಎಲ್ಲವನ್ನೂ ತನ್ನ ತೋಳತೆಕ್ಕೆಯಲ್ಲಿ ಹಿಡಿದು ಸುಟ್ಟು, ಸೋಸಿ, ಹೊನ್ನ ತೆಗೆದು, ಹಿಡಿದು ಹೊಡೆದು ನಮಗೆ ಬೇಕಾದ ಆಕೃತಿಗೆ ಒಗ್ಗಿಸಿಕೊಳ್ಳುವುದಾಗಿದೆ." (ಡಾ.ಅರವಿಂದ ಮಾಲಗತ್ತಿ, ಪುರಾಣ ಜಾನಪದ ಮತ್ತು ದೇಶೀವಾದ, ಪು.೩೪) ಆ ಕಾರಣಕ್ಕಾಗಿಯೇ ಇಂದು ಎಲ್ಲಾ ರಂಗಗಳಲ್ಲೂ ದೇಶೀವಾದ ಪ್ರವೇಶಿಸಿದೆ. ದೇಶೀ ವಾದಕ್ಕೆ ಇಂದು ಹೊಸ ಹೊಸ ಆಯಾಮಗಳು ದೊರೆಯುತ್ತಲೇ ಇವೆ. ಇವುಗಳು ದೇಶೀವಾದಕ್ಕೆ ಹೊಸ ಹೊಸ ಆಯಾಮಗಳನ್ನು ಕೊಡುವ ಹಂಬಲ ಕೇವಲ ಅಧ್ಯಯನ ಕಾರಣಗಳಿಂದಲ್ಲದೆ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತನೆಗಳಿಂದ ಬೆಳೆಯುತ್ತಿದೆ. ಇದರಿಂದ ದೇಶೀವಾದದ

ಸ್ವರೂಪ, ನಿರ್ವಚನ ಸಂಕೀರ್ಣವಾಗುತ್ತಿದೆ. "ದೇಶೀವಾದವೆಂದರೆ ಕಳೆದು ಹೋದುದ್ದಲ್ಲ; ಬದುಕುತ್ತಿರುವ ಸ್ಥಿತಿ, ಬದುಕಬೇಕಾದ ಸ್ಥಿತಿ. ಒಂದು ವಸ್ತುವನ್ನು ನಿರ್ಬಂಧಿಸುವುದು, ಮತ್ತೊಂದು ವಸ್ತುವನ್ನು ಹರಿಬಿಟ್ಟು, ಬೆಳೆಸುವುದು, ದೇಶೀವಾದದ ಮೂಲಭೂತ ಮೌಲ್ಯದ ಪರಿಕಲ್ಪನೆಗೆ ಸಂಬಂಧಿಸಿದ್ದು, ಎಂದರೆ ದೇಶೀವಾದ ಎನ್ನುವುದು ಕೇವಲ ಒಂದು ವಾಙ್ಮಯ ರೂಪವೂ ಅಲ್ಲ, ಸಿದ್ಧ ಸ್ವರೂಪವೂ ಅಲ್ಲ. ಭವಿಷ್ಯತ್ತಿನ ಸುತ್ತ ಹಿಂದಿನದು ಇಂದಿನದು ಕೂಡಿಸಿ ಕಳೆದು ತೆಗೆದ ಮೊತ್ತ. ಭೌತಿಕವಾಗಿ ಚಿಂತಿಸಿದಾಗ ಸಂಸ್ಕೃತಿಯ ಪರಸ್ಪರ ವಿವೇಚನೆಯಲ್ಲಿ ಪ್ರತ್ಯೇಕವಾಗಿ ಎದ್ದು ಕಾಣುವಂತಹುದು. ಇದೂ ಕೂಡ ಹಲವು ಆರ್ಥಿಕ-ಸಾಮಾಜಿಕ-ರಾಜಕೀಯ-ಧಾರ್ಮಿಕ ಸ್ಥಿತ್ಯಂತರಗಳ ಪರಿಣಾಮದ ಕೂಸು ಎನ್ನುವುದನ್ನು ಮರೆಯಲಾಗದು. (ಅದೇ ಪು:೩೫-೩೬) ಈ ಸ್ಥಿತ್ಯಂತರಗಳು ಮುಂದೆ ಎಲ್ಲಾ ಅಧ್ಯಯನ ಶಿಸ್ತುಗಳ ಮೇಲೆ ಪರಿಣಾಮ ಬೀರಿದುದರ ಪ್ರತಿಫಲವಾಗಿ ಚರಿತ್ರೆ ಅಧ್ಯಯನದಲ್ಲಿ ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ, ಸ್ತ್ರೀವಾದಿ ಚರಿತ್ರೆ, ಕಪ್ಪು ಚರಿತ್ರೆ, ಹೀಗೆ ಹತ್ತು ಹಲವು ಅಧ್ಯಯನ ಕ್ರಮಗಳು, ಅಧ್ಯಯನ ಶಿಸ್ತುಗಳು ಮೂಡಿ ಬಂದಿವೆ. ಇವುಗಳು ತಮ್ಮದೇ ಆದ ಪ್ರತ್ಯೇಕತೆಗಳನ್ನು ಹೊಂದಿ, ಒಂದೊಂದು ಜ್ಞಾನ ಶಾಖೆಗಳಾಗಿ ಕವಲೊಡೆದಿವೆ. ಇದು ಅನಿವಾರ್ಯ ಕೂಡ ಆಗಿದೆ. ಯಾಕೆಂದರೆ ಇಂದು ನಮ್ಮನ್ನು ಆಳುತ್ತಿರುವ ಪ್ರಭುತ್ವದ, ಮತ್ತು ವಸಾಹಾತುಷಾಹಿ ದಬ್ಬಾಳಿಕೆಯ ವಿರುದ್ಧದ ಖಚಿತ ಮತ್ತು 'ಗಟ್ಟಿ' ಧ್ವನಿಯಾಗಬೇಕಿರುವುದು ಸಮುದಾಯಗಳಿಗೆ ಅವಶ್ಯಕವಾಗಿದೆ.

ದೇಶೀ ಮತ್ತು ಸ್ಥಳೀಯ ಕಥನ ಪರಂಪರೆ ಎಂಬುದನ್ನು ಇಲ್ಲಿ ಸ್ಥಳೀಯ ಚರಿತ್ರೆ ಎಂಬ ಹಿನ್ನೆಲೆಯನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಈ ಸ್ಥಳೀಯ ಚರಿತ್ರೆ ಎಂಬುದು ನಿರೂಪಣೆಯ ಸಂದರ್ಭದಲ್ಲಿ ಸ್ಥಳೀಯ ಕಥನವನ್ನೇ ನಿರೂಪಿಸುವುದರಿಂದಾಗಿ ಇದನ್ನು ಸ್ಥಳೀಯ ಕಥನ ಪರಂಪರೆ ಎಂದೇ ಕರೆಯಲಾಗಿದೆ. "ಚರಿತ್ರೆ ಅಧ್ಯಯನ, ಸಂಶೋಧನೆಯ ರಚನಾ ವಿಧಾನದ ಕ್ರಮಗಳಲ್ಲಿ ಸ್ಥಳೀಯ ಚರಿತ್ರೆ ಬಗೆಯು ಒಂದಾಗಿದ್ದು, ಚರಿತ್ರೆ ಅಧ್ಯಯನದ ಮಟ್ಟಿಗೆ ಇದು ವಿಶಿಷ್ಟ ಸ್ಥಾನ ಪಡೆದಿದೆ. ಏಕೆಂದರೆ, ವಿಷಯದ ಕ್ಷೇತ್ರ-ವೈಶಾಲ್ಯತೆಯಲ್ಲಿ ಚರಿತ್ರೆಯದು ಬಹು ವ್ಯಾಪಕ ಮತ್ತು ವಿಸ್ತಾರವೆಂಬುದು ನಿಜ. ಅಂತರಾಷ್ಟ್ರೀಯ, ರಾಷ್ಟ್ರೀಯ ಮತ್ತು ಪ್ರಾದೇಶಿಕ ಚರಿತ್ರೆಗಳೆಂದು ಕರೆಯುವಾಗ, ಭಾರತದ ಇತಿಹಾಸವಲ್ಲದೆ, ಪ್ರದೇಶ, ಪ್ರಾಂತ ರಾಜ್ಯ ಸಂಸ್ಥೆ ಹಾಗೂ ಜನಾಂಗಗಳ ಕತೆಯನ್ನು ನಿರೂಪಿಸುತ್ತದೆ ಸ್ಥಳೀಯ ಚರಿತ್ರೆ" (ಡಾ.ವಿರುಪಾಕ್ಷಿ ಪೂಜಾರಹಳ್ಳಿ, ಸ್ಥಳೀಯ ಚರಿತ್ರೆ ಆಕರಗಳ ಸ್ವರೂಪ ಮತ್ತು ಅಧ್ಯಯನ ವಿಧಾನ, ಪು:೧೪) ಅಂದರೆ, ಸ್ಥಳೀಯ ಚರಿತ್ರೆಯು ವ್ಯಷ್ಟಿನೆಲೆಯಲ್ಲಿಯೇ ರಚನೆಗೊಂಡಿರುತ್ತದೆ. ಕೆಳಸ್ತರದಲ್ಲಿ ಸ್ಥಳೀಯ ಚರಿತ್ರೆಯು ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಸ್ಥಳೀಯವೆಂದರೆ ಯಾವುದೇ ಒಂದು ಪ್ರದೇಶದ ಅಥವಾ ಸ್ಥಳದ ಸಮುದಾಯಗಳ ಭೌತಿಕ, ಭೌಗೋಳಿಕ ಜೀವನ ಶೈಲಿಯನ್ನು, ಬದುಕನ್ನು ರೂಪಿಸಿಕೊಳ್ಳುವ, ವ್ಯವಸ್ಥೆಯನ್ನು, ಮತ್ತು ಸಮುದಾಯಗಳ ಸ್ಥಿತ್ಯಂತರಗಳನ್ನು, ಸಾಮಾಜಿಕ, ಆರ್ಥಿಕ,

ರಾಜಕೀಯ, ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ವ್ಯವಸ್ಥಿತವಾಗಿ ಸಂಕೇತಿಸುತ್ತದೆ. ಮೂಲತಃ ಚರಿತ್ರೆಯೆನ್ನುವುದು ಯಾವುದೇ ಒಂದು ದೇಶದ, ವಿಶ್ವದ, ಜನರ ಕತೆಯಲ್ಲದೆ ಆಯಾ ರಾಷ್ಟ್ರ, ರಾಜ್ಯದ ರಾಷ್ಟ್ರೀಯ ಕಲ್ಪನೆಯೊಂದಿಗೆ ಪ್ರಾಂತೀಯ ವೆಂಬ ಸ್ಥಳೀಯ ಪ್ರಜ್ಞೆಯನ್ನು ಹೊಂದಿರುತ್ತದೆ. ರಾಷ್ಟ್ರೀಯ ಚರಿತ್ರೆ ಎನ್ನುವ ಮಾದರಿಗಿಂತ ಭಿನ್ನವಾಗಿ ಈ ಸ್ಥಳೀಯ ಚರಿತ್ರೆಯು ರೂಪುಗೊಳ್ಳುತ್ತದೆ. ರಾಷ್ಟ್ರೀಯ ಎನ್ನುವ ಮಾದರಿಯಲ್ಲಿ ರಾಜ ಮಹಾರಾಜರ ಮತ್ತು ಅವರ ಇಡೀ ಪರಿವಾರದ ಚಿತ್ರಣ ಮಾತ್ರ ದೊರೆಯುತ್ತದೆ. ಅದು ಕೇವಲ 'ರಾಜ'ಕೇಂದ್ರಿತವಾದ ಚಿತ್ರಣ ಮಾತ್ರ ಆಗಿರುತ್ತದೆ. ರಾಜನ ಒಮ್ಮುಖ ಮಾತ್ರ ದಾಖಲಾಗಿರುತ್ತದೆ. ಇಲ್ಲಿ ರಾಜನ ಬದಲೀ ಮುಖದ ಚಿತ್ರಣವಾಗಲೀ ಜನ ಸಾಮಾನ್ಯರ ಬದುಕಿನ ಸ್ಥಿತ್ಯಂತರಗಳ ಚಿತ್ರಣವಾಗಲೀ ನಮಗೆ ದೊರೆಯುವುದಿಲ್ಲ. ಆದರೆ ಸ್ಥಳೀಯ ಚರಿತ್ರೆಯ ಅಧ್ಯಯನದ ಸಂದರ್ಭದಲ್ಲಿ ನಮಗೆ 'ರಾಷ್ಟ್ರೀಯ' ಪರಿಕಲ್ಪನೆಗಿಂತ ಭಿನ್ನವಾದ ಪ್ರಾದೇಶಿಕ ಕಲ್ಪನೆಯೊಂದು ಮೂಡುತ್ತದೆ. ಈ ಪ್ರಾದೇಶಿಕ ಕಲ್ಪನೆಯೇ ಸ್ಥಳೀಯ ಮಾದರಿಯೊಂದನ್ನು ರೂಪಿಸಿಕೊಂಡು ಜನಸಮುದಾಯಗಳ ಬಗೆಗಿನ 'ಸ್ಥಳೀಯ ಚರಿತ್ರೆ'ಯನ್ನು ಅಧ್ಯಯನ ಮಾಡಲು ಸಾಧ್ಯವಾಗಿಸಿದೆ. "ಆಧುನಿಕೋತ್ತರ ಸಂದರ್ಭದ 'ಸ್ಥಳೀಯ ಚರಿತ್ರೆ' ಅಧ್ಯಯನವು ಭಾರತದ ಮಟ್ಟಿಗೆ ತೀರಾ ಅವಶ್ಯಕವೆಂದು ಚರಿತ್ರೆಕಾರರು ಪರಿಭಾವಿಸಿರುವರು, ಇವರ ಕಲ್ಪನೆಗಳು ಸಹ ಚರಿತ್ರೆಯ ಹಲವಾರು ಮಗ್ಗಲುಗಳ ಒಳನೋಟಗಳನ್ನು ಎತ್ತಿ ತೋರಿಸುವುದಾಗಿವೆ. ಒಂದು ಪ್ರದೇಶ, ಪ್ರಾಂತ್ಯ, ರಾಜ್ಯ, ಸಂಘ, ಸಂಸ್ಥೆ ಹಾಗೂ ಜನಾಂಗಗಳನ್ನೊಳಗೊಂಡ ಕಥನ ರೂಪವು ಸ್ಥಳೀಯವಾದುದಾಗಿದೆ. ಜನರ ಜೀವನ ಕ್ರಮವು ಶ್ರೇಣಿ, ವರ್ಣ, ಜಾತಿ, ವರ್ಗ, ಧರ್ಮಗಳಿಂದ ಕೂಡಿ ಜಟಿಲವಾದ ಕವಚದಂತಿದೆ. ಪ್ರಸ್ತುತತೆಗೆ ತಕ್ಕಂತೆ ನಮ್ಮ ದೇಶದ ಚರಿತ್ರೆಯು ಪ್ರಾದೇಶಿಕ (ರೀಜನಲ್) ಹಾಗೂ ಸ್ಥಳೀಯ (ಲೋಕಲ್) ಚರಿತ್ರೆಗಳಿಂದ ನಿರ್ಮಾಣವಾಗುವ ಅಗತ್ಯ ಇಂದಿನದಾಗಿದೆ." (ಅದೇ, ಪು-೧೬) ಆದರೆ "ಅನೇಕ ವಿದ್ವಾಂಸರ ಅಭಿಪ್ರಾಯದಂತೆ ಜನಾಂಗಿಕ, ಕುಟುಂಬ, ಮತ್ತು ಮಹಿಳೆಯರ ಚಾರಿತ್ರಿಕ ಸಂಗತಿಗಳನ್ನೊಳಗೊಂಡಿರುವುದೇ ಸ್ಥಳೀಯ ಚರಿತ್ರೆ, ವಿದೇಶಗಳಲ್ಲಿ ೧೯೩೦ರ ದಶಕದಲ್ಲಿ ಅಮೇರಿಕ, ಯುರೋಪ್ ಸ್ಥಳೀಯ ಚರಿತ್ರೆ ಅಧ್ಯಯನ ಆರಂಭವಾದರೂ ಭಾರತ ಹಾಗೂ ಕರ್ನಾಟಕದಲ್ಲಿ ಕಳೆದೆರಡು ಮೂರು ದಶಕಗಳಿಂದ ಗುರುತಿಸಬಹುದಾಗಿದೆ." (ಅದೇ, ಪು.೨೦) ಕರ್ನಾಟಕದ ಸಂದರ್ಭಕ್ಕೆ ಈ ಕುರಿತು ಹೆಚ್ಚಿನ ಗಮನ ಸೆಳೆದವರಲ್ಲಿ ಶ್ರೀನಿವಾಸರಿತ್ತಿ, ಡಾ.ಬಾ.ರಾ.ಗೋಪಾಲ, ಡಾ.ಜಿ.ಎಸ್.ದೀಕ್ಷಿತ್, ಡಾ.ಎಂ.ಎಂ.ಕಲಬುರ್ಗಿ, ಡಾ.ಎಸ್.ಶೆಟ್ಟರ್, ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ.ಎಂ.ವಿ.ಶ್ರೀನಿವಾಸ್, ಡಾ.ಎಚ್.ಆರ್.ರಘುನಾಥ ಭಟ್ಟ, ಪ್ರಮುಖರಾಗಿದ್ದಾರೆ. ಆದರೆ ಇವರಿಗಿಂತ ಮುಂಚೆಯೇ ಸಾಂಸ್ಕೃತಿಕವಾಗಿ ಈ ಕುರಿತು ಕೆಲಸ ಮಾಡಿದವರಲ್ಲಿ ಎಂ.ಎಚ್.ಕೃಷ್ಣ, ಆರ್.ನರಸಿಂಹಾಚಾರ್, ಆರ್.ಎಸ್.ಪಂಚಮುಖಿ, ಪಿ.ಬಿ.ದೇಸಾಯಿ, ಆಲೂರು ವೆಂಕಟರಾಯ, ಶಂಭಾಜೋಷಿ, ಎಂ.ಗೋವಿಂದ ಪೈ.ಎಂ.ವಿ.ಕೃಷ್ಣರಾವ್, ಪ್ರಮುಖರು. ಇವರಲ್ಲಿ ಕೆಲವುರು ಪಾಶ್ಚಾತ್ಯ ಶಿಕ್ಷಣವನ್ನು ಪಡೆದು, ಅದರ ಪ್ರಭಾವದೊಂದಿಗೆ ನಾಡಿನ

ಚರಿತ್ರೆಕಟ್ಟುವ ಕಾರ್ಯದಲ್ಲಿ ನಿರತರಾಗಿದ್ದರು. ಹೀಗಾಗಿ ಸಂಸ್ಕೃತಿ ಚರಿತ್ರೆಯಲ್ಲಿ ಸ್ಥಳೀಯ ಮತ್ತು ಪ್ರಾದೇಶಿಕ ಚರಿತ್ರೆಗಳಿಗೆ ವಿಶೇಷ ಮಹತ್ವವಿದೆ. ನಮ್ಮ ನಾಡಿನಲ್ಲಿ ಹಲವಾರು ಸ್ವತಂತ್ರ ರಾಜ್ಯಗಳು, ಪ್ರಾಂತ್ಯಗಳು, ರಾಜಮನೆತನಗಳು, ಪಾಳೆಯ ಪಟ್ಟುಗಳು ಅಸ್ತಿತ್ವದಲ್ಲಿದ್ದ ಬಗ್ಗೆ ಪ್ರಾಚೀನ ಕಾಲದಿಂದಲೂ ಉಲ್ಲೇಖಗಳಿವೆ. ಆದರೆ ಅವು ಸ್ಥಳೀಯವು ಎಂಬ ಹಣೆಪಟ್ಟಿಯನ್ನು ಹೊತ್ತಿಲ್ಲ. ಇಡೀ ರಾಜ್ಯ, ಸಾಮ್ರಾಜ್ಯದ ಕಲ್ಪನೆ ಅಂದಿನ ಅಧ್ಯಯನದ ಮಹತ್ವವಾಗಿತ್ತು. ಆದರೆ ಚರಿತ್ರೆಕಾರ ಮರೆಯಾದ ವೈಭವ ಇತರ ಸಾಮಾನ್ಯ ಸಂಗತಿಗಳನ್ನು ಕೆದಕಿ ಬೆಳಕಿಗೆ ತರುವಾಗ ಮೇಲಿನ ಸಂಗತಿಗಳನ್ನು ಸ್ಥಳೀಯತೆಯ ನೆಲೆಯಲ್ಲಿ ಸಂಗ್ರಹಿಸಿ, ವಿವೇಚಿಸುವ ಕ್ರಮ ಸಮಕಾಲೀನತೆಗೆ ಹೊಂದುವಂತೆ ವಿಶ್ಲೇಷಿಸಬೇಕಾಗುತ್ತದೆ. (ಅದೇ, ಪು. ೧೭) ಹೀಗೆ ವಿಶ್ಲೇಷಿಸಿದಾಗ ಮಾತ್ರ ಸ್ಥಳೀಯ ಚರಿತ್ರೆಗೊಂದು ಹೊಸ ಆಯಾಮವನ್ನು ಒದಗಿಸಿದಂತಾಗುತ್ತದೆ. ಈ ಕ್ರಮ ಮಾತ್ರ ಸ್ಥಳೀಯ ಚರಿತ್ರೆಯ ಅಧ್ಯಯನಕ್ಕೆ ದೇಶೀಯ ಮಾದರಿಯನ್ನು ಸುಲಭವಾಗಿ ಹೊಂದುವಂತೆ ಮಾಡುತ್ತದೆ.

(ಈ ಸ್ಥಳೀಯ ಕಥನ ಪರಂಪರೆಯಲ್ಲಿ ಅಥವಾ ಸ್ಥಳೀಯ ಚರಿತ್ರೆಯ ನಿರೂಪಣೆಗೆ ಹಲವಾರು ಆಕರ ಸಾಮಗ್ರಿಗಳಿವೆ. ಅವುಗಳಲ್ಲಿ ಲಿಖಿತ ಮತ್ತು ಅಲಿಖಿತ ಎಂದು ವಿಭಾಗ ಮಾಡಲಾಗಿದೆ. ಈ ಅಲಿಖಿತದಲ್ಲಿ ಮೌಖಿಕ ಸಾಹಿತ್ಯವೂ ಸೇರುತ್ತದೆ. ಇದರಲ್ಲಿ ಕಥನ ಗೀತೆಗಳು, ಲಾವಣಿಗಳು, ಐತಿಹ್ಯ, ಪುರಾಣ, ಕಥೆ, ಗಾದೆ, ನಂಬಿಕೆ, ಆಚರಣೆಗಳೆಲ್ಲವೂ ಸೇರುತ್ತವೆ. ಹಾಗಾಗಿಯೇ "ಮೌಖಿಕ ಆಕರಗಳಾಗಿರುವ 'ಕಥನಗೀತೆಗಳು' ಸ್ಥಳೀಯ ಚರಿತ್ರೆಯ ಆಕರವೆಂದು ಸ್ವೀಕಾರಾರ್ಹವಾಗಿವೆ. ಸಾಹಸ ತೋರಿದ ವ್ಯಕ್ತಿ ವೀರಮರಣ ಹೊಂದಿದ ತರುವಾಯ ಅವನ ಬಗೆಗೆ ಬೆಳೆದು ಬಂದ ಮೌಖಿಕ ಸಾಹಿತ್ಯದಲ್ಲಿ ಕಥನಗೀತೆಗಳು ರಂಜನೀಯವೆನಿಸಿವೆ. ಅರಸ, ಅಸಾಮಾನ್ಯ ವ್ಯಕ್ತಿಗಳ ಸಾಧನೆ, ವೀರ ಮರಣವನ್ನು ವೀರಗಲ್ಲು, ಮಾಸ್ತಿಕಲ್ಲುಗಳಲ್ಲಿ ಗೋಚರಿಸುವಂತೆ ಕೆತ್ತಲಾಗಿದೆ. ಎಲ್ಲಿಯೂ ದಾಖಲಾಗದವರ ವಿವರವು ಮೌಖಿಕ ಕಥಾನಕಗಳಲ್ಲಿ ವ್ಯಕ್ತಪಡುವುದು, ಸ್ಥಳೀಯ ಮಹತ್ವ ಹೊಂದಿರುವುದು ಗಮನಾರ್ಹ. ಉದಾ:- ಕುಮಾರರಾಮ, ಸರ್ಜಪ್ಪ ನಾಯಕ. (ಅದೇ, ಪು:೨೭) "ಸ್ಥಳೀಯ ಚರಿತ್ರೆಯಲ್ಲಿ ಆಸಕ್ತಿ ತಳೆದು ಬರಹ ಕೃಷಿ ಮಾಡಿರುವ ನೂರಾರು ಮಂದಿ ಹವ್ಯಾಸಿ ಮತ್ತು ವೃತ್ತಿಪರ ಚರಿತ್ರಕಾರರು ಸರ್ವೇಸಾಮಾನ್ಯವಾಗಿ ಎಲ್ಲ ಜಿಲ್ಲೆಗಳಲ್ಲೂ ಕಂಡು ಬರುತ್ತಾರೆ. ಇವರಲ್ಲಿ ಎಲ್ಲ ವಯೋಮಾನದವರೂ ಇದ್ದಾರೆ. ವಿವಿಧ ವೃತ್ತಿ, ಅನುಭವ, ದೃಷ್ಟಿ ಧೋರಣೆ, ಉದ್ದೇಶಗಳನ್ನು ಹೊಂದಿದಂಥವರಿವರು. ಕೃತಿಗಳ ಮೂಲಕ ಸಂಶೋಧನಾ ಮಾಹಿತಿಯನ್ನು ಸಂಗ್ರಹಿಸಿಕೊಟ್ಟಿರುವ ಉದಾಹರಣೆಗಳೂ ಸಾಕಷ್ಟಿವೆ. ಇನ್ನು ಬಿಡಿಬರಹಗಳಿಗೆ ಲೆಕ್ಕವಿಲ್ಲ. ತಮ್ಮ ಬಿಡಿ ಬರಹಗಳನ್ನು ಒಟ್ಟಿಗೇ ಸೇರಿಸಿ ಪುಸ್ತಕ ರೂಪದಲ್ಲಿ ತಂದಿರುವವರ ಸಂಖ್ಯೆ ಹೆಚ್ಚೇನಲ್ಲ. ಸ್ಥಳೀಯ ಚರಿತ್ರೆ ಸಂಸ್ಕೃತಿ ಕುರಿತು ನಡೆದಿರುವ ಕೆಲಸವನ್ನು ಜಿಲ್ಲಾವಾರು ವಿಂಗಡಿಸಿ ನೋಡಿದರೆ, ಕೆಲವೇ ಜಿಲ್ಲೆಗಳ ವಿನಾ ಉಳಿದೆಡೆ ನಿರೀಕ್ಷಿಸಿದಷ್ಟು ಕೆಲಸ ನಡೆದಿಲ್ಲವೆನ್ನಬಹುದು. ಚಿತ್ರದುರ್ಗ, ಬಳ್ಳಾರಿ,

ಬೆಳಗಾವಿ, ಶಿವಮೊಗ್ಗ, ಉತ್ತರ ಕನ್ನಡ, ತುಮಕೂರು, ಬೆಂಗಳೂರು (ನಗರ ಗ್ರಾಮಾಂತರ) ಮಂಡ್ಯ, ಮೈಸೂರು, ಕೊಡಗು, ಇಂಥಾ ಕೆಲವು ಜಿಲ್ಲೆಗಳಲ್ಲಿ ನಡೆದಿರುವ ಸ್ಥಳೀಯ ಚರಿತ್ರೆ ಅಧ್ಯಯನ ಪ್ರಧಾನವಾಗಿ ಕಣ್ಣಿಗೆ ಬೀಳುವಂಥಾದ್ದು, ತುಳುನಾಡಿನ ಅಧ್ಯಯನ ಇನ್ನೊಂದು ಉದಾಹರಣೆ" (ಲಕ್ಷ್ಮಣ ತೆಲಗಾವಿ,ಸ್ಥಳೀಯ ಚರಿತ್ರೆ: ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪು:೧೦) ಹೀಗೆ ಹಲವಾರು ಕಡೆಗಳಲ್ಲಿ ಸ್ಥಳೀಯ ಚರಿತ್ರೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ಆಗುತ್ತಿವೆ ಮತ್ತು ಆಗಿವೆ. "ಇದು ಸಮಗ್ರ ಚರಿತ್ರೆ ಬರವಣಿಗೆಯಲ್ಲಿ ಘಟಿಸುವ ಗಂಭೀರ ತಪ್ಪುಗಳನ್ನು ನಿವಾರಿಸಿಕೊಳ್ಳಲು ನೆರವಾಗುತ್ತದೆ. ಸ್ಥಳೀಯ ಚರಿತ್ರೆ ಅಧ್ಯಯನ ಒಂದು ವಿಧದಲ್ಲಿ ಸೂಕ್ಷ್ಮಾಧ್ಯಯನವಾದ್ದರಿಂದ, ಪ್ರತಿಯೊಂದು ಸಂಗತಿಯನ್ನು ಪುನರ್ ವ್ಯಾಖ್ಯಾನಕ್ಕೆ ಗುರಿಪಡಿಸಲು ಪ್ರೇರೇಪಿಸುತ್ತದೆ. ಕೆಲವೊಮ್ಮೆ ಚರಿತ್ರೆ ಬಗೆಗಿನ ಪಾರಂಪರಿಕ ಪರಿಕಲ್ಪನೆಯನ್ನು ಬದಲಾಯಿಸಿಕೊಂಡು, ಸಂಗತಿಗಳನ್ನು ವಾಸ್ತವ ನೆಲೆಯಲ್ಲಿ ನಿರೂಪಿಸಲು ಆಗ್ರಹಿಸುತ್ತದೆ. ಚರಿತ್ರೆಯ ಪುನಾರಚನೆಯೊಡನೆ ಸಂಸ್ಕೃತಿ ಉಪಸಂಸ್ಕೃತಿಗಳ ಮರು ವ್ಯಾಖ್ಯಾನವೂ ನಡೆಯುವುದರಿಂದ ಇಂಥಾ ಅಧ್ಯಯನದ ಮಹತ್ವವನ್ನು ಮನಗಾಣಬಹುದು." (ಅದೇ.ಪು:೧೩) ಈ ನೆಲೆಯಿಂದ ನೋಡಿದರೆ ಸ್ಥಳೀಯ ಚರಿತ್ರೆಯನ್ನು ವ್ಯಾಖ್ಯಾನಿಸುವಾಗ ತುಂಬಾ ಎಚ್ಚರಿಕೆಯಿಂದ ವ್ಯಾಖ್ಯಾನಿಸಬೇಕಾದುದು ಅಗತ್ಯವೆಂಬುದು ಗೊತ್ತಾಗುತ್ತದೆ. ಅಂದರೆ, ಯಾವುದೇ ರೀತಿಯ ಸಂಕುಚಿತತೆಗಳು ಸಲ್ಲುವುದಿಲ್ಲವೆಂಬುದು ಸತ್ಯ. ಆದರೆ ಹಿಂದಿನ ದಿನಗಳಲ್ಲಿ ಈ ಸ್ಥಳೀಯ ಚರಿತ್ರೆಯ ಅಧ್ಯಯನವು ರಾಷ್ಟ್ರೀಯತೆಯ ಭಾವನೆಗೆ ಧಕ್ಕೆ ತರುತ್ತದೆಂಬ ಅಭಿಪ್ರಾಯ ಹಲವಾರು ಜನ ವಿದ್ವಾಂಸರಲ್ಲಿದ್ದಿದ್ದು ಗೊತ್ತಾಗುತ್ತದೆ. ಈಗಲೂ ಸಹ ಈ ಅಭಿಪ್ರಾಯ ಅಲ್ಲಲ್ಲಿ ಮೂಡುತ್ತಿದೆ. ಇದಕ್ಕೆ ಬಹು ಮುಖ್ಯಕಾರಣವೆಂದರೆ ಅತೀಯಾದ ಪ್ರಾಂತೀಯ ಭಾವನೆ. ಇದು ಅತಿರೇಕಕ್ಕೆ ಹೋದಾಗ ಪ್ರಾಂತೀಯತೆ ಬಗ್ಗೆ ಅತೀ ಅಭಿಮಾನ, ಭಾಷಿಕ ಸಂಕುಚಿತತೆ, ಮೂಡಿದಾಗ ಈ ರೀತಿಯ ಭಾವನೆಗಳು ಅಂದರೆ; ಈ ಸ್ಥಳೀಯ ಚರಿತ್ರೆಯ ಅಭಿಮಾನ ಅತೀರೇಕಕ್ಕೆ ಹೋಗಿ ರಾಷ್ಟ್ರೀಯವನ್ನು ಪರಿಕಲ್ಪನೆಯೇ ಮರೆತಂತಾಗುತ್ತದೆ ಎಂಬುದನ್ನು ಹಲವಾರು ಜನ ಅಭಿಪ್ರಾಯ ಪಡುತ್ತಾರೆ. "ಆದರೆ ವ್ಯಷ್ಟಿ-ಸಮಷ್ಟಿಗಳ ಸಂಬಂಧವನ್ನು ಪ್ರಾಂತೀಯ ರಾಷ್ಟ್ರೀಯ ಸಂಬಂಧದ ಹಿನ್ನೆಲೆಯಲ್ಲಿ ಗುರುತಿಸುವುದಾದರೆ, ಇವೆರಡೂ ಪರಸ್ಪರ ಪೂರಕವೆಂಬುದನ್ನು ನಿರಾಕರಿಸಲಾಗುವುದಿಲ್ಲ. ಸ್ಥಳೀಯತೆಯನ್ನು ಮಾನ್ಯ ಮಾಡುವುದರೊಡನೆ ರಾಷ್ಟ್ರೀಯತೆಯನ್ನು ಗೌರವಿಸುವುದು ಅಗತ್ಯವೂ ಹೌದು; ಅನಿವಾರ್ಯವೂ ಹೌದು ಇರುವ ಏಕೈಕ ಸಾಧ್ಯತೆ ಕೂಡಾ" (ಅದೇ, ಪು:೧೩) ಆಗಿದೆ ಎಂಬುದನ್ನು ಅರಿವುದು ತುಂಬಾ ಅವಶ್ಯಕ. ಹೀಗೆ ಮಾಡುವುದರಿಂದ ಬಿಡಿ ಬಿಡಿಯಾದ ಸಮುದಾಯಗಳ ಪ್ರತಿನಿಧಿಗಳೆಲ್ಲರೂ ಆರ್ಥಿಕ, ಸಾಮಾಜಿಕ, ಪಲ್ಲಟಗಳ ಕಾರಣಗಳಿಂದ ಅಸ್ತಿತ್ವಕ್ಕೆ ಬಂದವರು ಎಂಬುದನ್ನು ಸುಲಭವಾಗಿ ಗ್ರಹಿಸಬಹುದಾಗಿದೆ. "ಸ್ಥಳೀಯವಾದ ಈ ಕಥನಗಳನ್ನು ಕೇಳಿ ಅದರೊಳಗೆ ಮೈ ಮರೆಯುವ ಆಯಾ ಸಮುದಾಯಗಳು ಇಂತಹ ರಮ್ಯ

ಮಾಂತ್ರಿಕ ವಿಶ್ವಾಸದಲ್ಲಿ ಲೌಕಿಕದ ತಾರತಮ್ಯಗಳನ್ನು ಮರೆಯುತ್ತ ಸ್ಥಳೀಯತೆಯನ್ನು ಮೀರಿ ವಿಶ್ವಾತ್ಮಕ ಜಗಿತಕ್ಕೆ ಪಯಣಿಸಿ ವಿರಮಿಸುತ್ತವೆ. ಇಂತಹ ಮಾಂತ್ರಿಕ ರಮ್ಯ ವಿಶ್ವಾಸವು ಅಖಂಡವಾದದ್ದು. ಎಲ್ಲರ ಹಿಂಸೆಯನ್ನು ಸಹಿಸಿ ಬಿಡುವಂತದು. ಕಾವ್ಯದ ನಾದದಲ್ಲಿ ತನ್ನ ದಣಿವನ್ನು ನಿವಾರಿಸಿಕೊಳ್ಳುತ್ತ ಎಂದೆಂದೂ ಮುಗಿಯದ ವಿಶ್ವಾಸದಲ್ಲಿ ಬದುಕುವುದು ಇಂತಹ ಕಾವ್ಯ ಸಮುದಾಯಗಳ ಬಹುದೊಡ್ಡಶಕ್ತಿ. ತನ್ನನ್ನು ತಾನು ಸಂರಕ್ಷಿಸಿಕೊಳ್ಳುವ ವಿಧಾನವೂ ಇದಾಗಿದ್ದು ಅದರ ಮೂಲಕವೇ ತನ್ನ ಪರಂಪರೆಯನ್ನು ರೂಪಿಸಲು ಸಾಧ್ಯವಾಗಿದೆ." (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು:೧೬-೧೭) ಅಂದರೆ, ಪ್ರತಿಯೊಂದು ಸಮುದಾಯವೂ ಕೂಡ 'ಸ್ಥಳೀಯತೆ' ಎಂಬ ಒಂದು ಪರಂಪರೆಯನ್ನು ಮಾದರಿಯನ್ನಾಗಿಸಿಕೊಂಡು ಅದಕ್ಕೆ ಪೂರಕವಾಗುವ ಎಲ್ಲಾ ಬಗೆಯ ಸಿದ್ಧತೆಗಳನ್ನು ಮಾಡಿಟ್ಟುಕೊಂಡೇ ಈ ಬಗೆಯ ವಿಶ್ವಾತ್ಮಕ ಮಾದರಿಗೆ ಪಯಣಿಸುವ ಕ್ರಮವನ್ನು ಅನುಸರಿಸುತ್ತಿರುತ್ತವೆ. ಹೀಗೆ ಈ ಕ್ರಮದಲ್ಲಿ ಸಮುದಾಯಗಳು ಒಂದಲ್ಲ ಒಂದು ರೀತಿಯ ಸ್ಥಿತ್ಯಂತರವನ್ನು ಅನುಭವಿಸುತ್ತವೆ. ಇದು ಸಮುದಾಯಗಳ ಸಂಕ್ರಮಣ ಸ್ಥಿತಿಯನ್ನು ಸೂಚಿಸುತ್ತದೆ. "ಇಂತಹ ಸ್ಥಿತಿಯಲ್ಲಿ ಜಾಗತೀಕರಣ ಭಾರತದ ಅಲಕ್ಷಿತ ಸಮುದಾಯಗಳ ಗದ್ಯದ ವಿಕಾಸದಲ್ಲಿ ಅತ್ಯಂತ ಕಠಿಣವಾದ ಒಂದು ಸಾಧ್ಯತೆ ಎಂಬುದನ್ನು ನಾನು ಒಪ್ಪುತ್ತೇನೆಯೇ ವಿನಃ ಜಾಗತೀಕರಣದಿಂದಾಗಿ ಕನ್ನಡ ಸಾಹಿತ್ಯಕ್ಕೂ ಅದರ ವಿಮರ್ಶೆಗೂ ಕುತ್ತು ಬಂದಿದೆ ಎಂದು ಭಾವಿಸುವುದಿಲ್ಲ. ಜಗತ್ತಿನ ವಿವೇಕದ ಗದ್ಯವು ಸಮಷ್ಠಿಯಾಗಬೇಕಾದರೆ ನಮಗೆ ಅದರ ಸಾಂಸ್ಕೃತಿಕ ಜಾಗತೀಕರಣ ಅನಿವಾರ್ಯ, ಅಲಕ್ಷಿತ ದೇಶೀ ಸಮುದಾಯಗಳು ಪ್ರಭುತ್ವವನ್ನು ಮೀರಿದ ಸಮಷ್ಠಿ ಇಚ್ಛೆಯಲ್ಲಿ ತುಂಬಾ ಬಲಶಾಲಿಗಳು ಎಂಬುದನ್ನು ಸಾವಿರಾರು ವರ್ಷಗಳ ದಾಳಿಯ ಹಿನ್ನೆಲೆಯಲ್ಲಿ ಗಮನಿಸಬಹುದು. ಯಜಮಾನ್ಯವಾದ ಯಾವುದೇ ಸಾಹಿತ್ಯ ವಿಮರ್ಶೆಗೆ ಅಥವಾ ಆಧುನಿಕತೆಗೆ ಇಲ್ಲವೇ ಜಾಗತೀಕರಣಕ್ಕೆ ನಿರ್ದಿಷ್ಟ ಅಧಿಕಾರ ಹಾಗೂ ಕಾಲವಿರುತ್ತದೆಯೆ ವಿನಃ ಸೃಜನಶೀಲವಾದ ದೇಶೀ ಸಮುದಾಯಗಳ ಸಾಂಸ್ಕೃತಿಕ ಪ್ರತಿರೋಧ ಶಕ್ತಿಗೆ ಕೊನೆಯಿಲ್ಲ. ಅಂತಹ ಅರಿವಿನ ಗಾಢವಾದ ಪಯಣದಲ್ಲಿ" (ಡಾ. ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು:೯೪) ಸಮುದಾಯಗಳು ಜಗತ್ತಿನ ಶ್ರೇಷ್ಠ ಎನ್ನಬಹುದಾದ ಆಕರಗಳನ್ನು ತಮ್ಮ ಅಸ್ತಿತ್ವದ ಕಾರಣಗಳಿಗಾಗಿ ದೇಶೀ ಚಹರೆಗಳ ಮೂಲಕವೇ ಅಖಂಡ ಜಗತ್ತಿನ ಮಾನವೀಯ ದಾಹಗಳನ್ನು ಪರಿಹರಿಸಿಕೊಳ್ಳಬೇಕಾಗಿದೆ. ಮೌಖಿಕ ಪರಂಪರೆಯ ಜಾಗತಿಕ ಅನುಸಂಧಾನವೂ ಇಂತಲ್ಲಿ ಸಮುದಾಯಗಳ ಭಾಷೆ, ಹಾಗೂ ಬದುಕಿನ ರೀತಿ ನೀತಿಗಳಿಗೆ ನೆರವಾಗಬಲ್ಲದು ಎಂಬುದನ್ನು ನಿರೀಕ್ಷಿಸಬಹುದು. ಈ ಹಿನ್ನೆಲೆಯಿಂದ ವರ್ತಮಾನದ ಸಂಸ್ಕೃತಿ ಚಿಂತನೆಯ ಹಲವಾರು ಪ್ರಶ್ನೆಗಳು ಇಲ್ಲಿ ಉದ್ಭವವಾಗುತ್ತವೆ. "ಬೌದ್ಧಿಕವಾದ ಆತ್ಮಕಥನ ನಿರೂಪಣೆಗೆ ಯಾವ ಬಗೆಯ ಭಾಷೆ ಬೇಕು ಆತ್ಮಕಥನವು ಹೇಗೆ ಸಮಕಾಲೀನತೆಯನ್ನು ಪ್ರತಿಸೃಷ್ಟಿಸುವಂತಾಗಬೇಕು? ಇಂತಹ ಕಥನವನ್ನು ನಿರೂಪಿಸುವ ಸಂಶೋಧಕನ ಅರಿವಿನ ಸ್ವರೂಪ ಎಂತದಿರಬೇಕು? (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು:೧೧೭)

ಎಂಬಂತಹವುಗಳೇ ಬಹಳ ಪ್ರಮುಖ ಪ್ರಶ್ನೆಗಳೆನಿಸುತ್ತವೆ. ಈ ಎಲ್ಲಾ ಪ್ರಶ್ನೆಗಳಿಗೆ ಬಹಳ ಮುಖ್ಯವಾದ ಉತ್ತರವೆಂದರೆ, ನಮ್ಮ ಅರಿವಿನ ವಿಸ್ತಾರ ಪಡೆಯುವಲ್ಲಿ ನಮಗೆ ನಮ್ಮ ಪರಂಪರೆಯು ನಮ್ಮ ಸಂವಾದಗಳ ಜೊತೆಗೆ ಸಂಧಾನ ಮಾಡಿಕೊಳ್ಳುವುದಾಗಿದೆ. ಹೀಗಾಗ ಬೇಕಾದರೆ ಪರಂಪರೆಯ ಬಗೆಗಿನ ನಮ್ಮ ಅರಿವಿಗೆ ಒಂದು ಬೌದ್ಧಿಕವಾದ ವಿನಯದ ಅಗತ್ಯತೆಯಿದೆ. ಇಲ್ಲದಿದ್ದಲ್ಲಿ ಯಾವುದೇ ಪರಂಪರೆಯು ನಮ್ಮ ಯಾವ ಸಂವಾದಗಳ ಜೊತೆಗೂ ಕೂಡ ಒಂದು ಚಿಕ್ಕ ಸಂಧಾನ ಮಾಡಿಕೊಳ್ಳಲು ಸಾಧ್ಯವಿಲ್ಲ. ಇದಕ್ಕೆ ಸಮಷ್ಟಿಪ್ರಜ್ಞೆ ಕಾರಣವಾಗುತ್ತದೆ. ಸ್ಥಳೀಯವಾದ ಅಥವಾ ವಿಶ್ವಾತ್ಮಕವಾದ ಈ ಕಥನ ಪರಂಪರೆಗಳೆಲ್ಲವೂ ಸಮಷ್ಟಿ ಪ್ರಜ್ಞೆಯೊಂದಿಗೆ ನಿರೂಪಿತವಾಗುವುದರಿಂದ ಇದು ಅನಿವಾರ್ಯ. ಸಮುದಾಯಗಳ ಈ ಸಮಷ್ಟಿ ಪ್ರಜ್ಞೆ ವಿಶ್ವಾತ್ಮಕ ಕಥನ ಪರಂಪರೆಗಳೆಲ್ಲ ಗೊತ್ತಾದುದು ಆತ್ಮಕಥನಗಳ ಸಾಹಿತ್ಯಕ ಪಠ್ಯಗಳಿಂದ. ಅಂಕಲ್ 'ಟಾಮ್ಸ್ ಕ್ಯಾಬಿನ್' ಹಾಗು 'ರೂಟ್ಸ್' ಕೃತಿಗಳಿಂದ ಇಡೀ ಆಫ್ರಿಕಾ ಖಂಡದ ಆ ಸಮುದಾಯವೆ ಹೇಗೆ ಗುಲಾಮಗಿರಿಯ ನರಕಯಾತನೆಯ ಬದುಕಿನಿಂದ ಸಾಗಿ ಬಂದಿತು ಎಂಬುದು ಚಾರಿತ್ರಿಕವಾಗಿ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಅಲಿಖಿತ ಸಮುದಾಯಗಳ ಕಥನಗಳೆಲ್ಲವೂ ಚಾರಿತ್ರಿಕವಾದ ತಮ್ಮ ಬದುಕಿನ ಸ್ಥಿತಿಗತಿಗಳನ್ನು ಪ್ರತಿನಿಧಿಸುವ ನಿರೂಪಗಳೂ ಆಗುತ್ತವೆ. ದೇಶಿ ಕಾವ್ಯಗಳಲ್ಲೆಲ್ಲ ದಟ್ಟವಾದ ಬಿಡಿ ಬಿಡಿ ಆತ್ಮಕಥನಗಳ ವಿವರ ಹಬ್ಬಿವೆ. ಇವುಗಳ ಮೂಲಕವೂ ದೇಶಿ ಸಂವೇದನೆಯನ್ನು ಈ ಕಾಲದ ವೈಚಾರಿಕ ನಿರೂಪಕ್ಕೆ ಪ್ರತಿಸೃಷ್ಟಿಸಿಕೊಳ್ಳಲು ಸಾಧ್ಯ." (ಡಾ.ಮೊಗಳ್ಳಿ ಗಣೇಶ್, ಮೌಖಿ ಕಥನ, ಪು:೧೧೭) ಆಗ ಮಾತ್ರ ಈ ಕಾಲದ ಕಥನ ಪರಂಪರೆಯೊಂದು ನಮ್ಮ ಸಂವಾದಗಳ ಜೊತೆ ಸಂಧಾನ ಮಾಡಿ ಕೊಂಡಂತಾಗುತ್ತದೆ.

ಸ್ಮೃತಿಯೊಳಗಣ ಪರಿಕರ ಪುನರಾವರ್ತನೆಯಾಗುತ್ತಲೇ ಇರುತ್ತದೆ. ಅದು ಬಂಡೆ ಮೇಲಿನ, ಲೋಹದ ತಗಡಿನ ಮೇಲಿನ ಅಕ್ಷರಗಳಂತೆ ನಿಶ್ಚಲವಲ್ಲ. ಅದು ಅನೇಕ ಆಯಾಮಗಳಲ್ಲಿ ಪುನರ್‌ಸೃಷ್ಟಿಗೊಳ್ಳುತ್ತದೆ. ಹೀಗೆ ಪುನರ್‌ಸೃಷ್ಟಿಗೊಳ್ಳುವ ಕ್ರಮವೂ ಒಂದೇ ಮಾದರಿಯಲ್ಲಿರುತ್ತದೆ ಎಂದು ಸರಳವಾಗಿ ಹೇಳಲಾಗುವುದಿಲ್ಲ. ಹೀಗಾಗಿ ಮೌಖಿಕ ಸಂಪ್ರದಾಯದ ಒಳಗೆ ಪುರಾಣರೂಪಿ ಕತೆಗಳು ಜನಾಂಗ ಮತ್ತು ಸಂಸ್ಕೃತಿಯ ಒಡಲಲ್ಲಿ ಹುಟ್ಟಿಕೊಂಡ ಕನಸು, ಆದರ್ಶಗಳನ್ನು ಹೊಂದಿಕೊಂಡಿವೆ. ಅಷ್ಟೇ ಅಲ್ಲ ಅದರಿಂದಾಗಿ ಅವುಗಳ ಅಂತರಾಳದಲ್ಲಿ ಪ್ರತೀಕಗಳು, ಸಂಕೇತಗಳು, ರೂಪಕಗಳು ಹೇಳುವ ಅನೇಕ ವಿವರಗಳು ಸರಳ ರೇಖಾತ್ಮಕ ಮಾದರಿಗಳಲ್ಲ, ಜನಾಂಗೀಯ, ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಒತ್ತಡಗಳಿಗನುಸಾರವಾಗಿ ಬೇರೆ ಬೇರೆ ಅನ್ವಯಗಳಿಗೆ ಗುರಿಯಾಗುತ್ತವೆ. ಈ ಅನ್ವಯಗಳು ಸಂಸ್ಕೃತಿಯ ವಿಭಿನ್ನ ಆಶಯಗಳಿಗೆ ಸಂಬಂಧಿಸಿರುವಂತೆ ರೂಪಿತವಾಗುತ್ತವೆ. ಹೀಗಾಗಿಯೇ ಪುರಾಣರೂಪಿ ಕಥಾನಕಗಳಾಗಲಿ, ಪರಿಭಾಷೆಯಾಗಲಿ, ಏಕರೂಪದ ಸರಳ ರೇಖಾತ್ಮಕ ಮಾದರಿಯಲ್ಲಿ ಹರಿದು ಬಂದಿಲ್ಲ" (ಡಾ.ಕೆ.ಕೇಶವಶರ್ಮ. ಶಬ್ದರೇಖೆ ಪು :೭) "ಜನಪದ ಕಾವ್ಯಗಳಲ್ಲಿ ಸಮುದಾಯಗಳ ಅಂತಃಸಾಕ್ಷಿ

ಅಡಕವಾಗಿರುವಂತೆಯೇ ಆಯಾ ಸಮುದಾಯಗಳ ಅನೇಕ ತಲೆಮಾರುಗಳ ಸ್ಮೃತಿ ಪ್ರಪಂಚ ರೂಪಕ, ಪ್ರತಿಮೆ, ಸಂಕೇತ ಹಾಗೂ ಧ್ವನಿ ಮತ್ತು ಆಶಯಗಳಲ್ಲಿ ಕಾಣಿಸಿಕೊಂಡಿರುತ್ತವೆ "(ಡಾ.ಮೊಗಳ್ಳಿ ಗಣೇಶ್. ಸೊಲ್ಲು. ಪು: ೩೩). ಆ ಕಾರಣಕ್ಕಾಗಿ ಈ ಕಥನಗಳ ಒಳಗೇ ಹುಟ್ಟುವ ವಿವಿಧ ಅರ್ಥಗಳಲ್ಲಿ ಈ ಅಸಹಾಯಕ ಸಮುದಾಯಗಳು ಬಚ್ಚಿಟ್ಟ ನೋವು ಮತ್ತು ಕನಸುಗಳೇ ಗೋಚರಿಸುತ್ತವೆ. ಅದಕ್ಕಾಗಿ ನಾವು ಈ ಕಥನಗಳನ್ನು ನಮ್ಮಲ್ಲಿಯ ಸಾಂಸ್ಕೃತಿಕ ರಾಜಕಾರಣದ ಸಂಕೀರ್ಣ ದಬ್ಬಾಳಿಕೆಯ ಪ್ರತಿಯಾಗಿ ಹುಟ್ಟಿದ ಕೆಳ ಸಮುದಾಯಗಳ ತಲ್ಲಣಗಳೇ ಆಗಿವೆ ಎಂಬಂತೆ ನೋಡುವ ಅವಶ್ಯಕತೆಯಿದೆ. "ಜಾನಪದ ಪುರಾಣ ಐತಿಹ್ಯಗಳಲ್ಲಿ ಸಾಮಾಜಿಕ ವ್ಯವಸ್ಥೆಯ ವಿಚಾರಗಳೇ ಮುಖ್ಯವಾಗುತ್ತವೆ. ಎಂದು ಹೇಳಿದರೂ ಆರಂಭದ ಪ್ರಗತಿಪರ ವಿಚಾರಗಳು ಧರ್ಮಪರವೂ ಆಗಿರದೆ, ಅವು ಮನುಷ್ಯಪರವಾದ ಮೌಲ್ಯಗಳಾಗಿರುತ್ತವೆ. ಒಂದು ಸಂಸ್ಕೃತಿ ಸಂಘರ್ಷದ ಸ್ವರೂಪವನ್ನು ಹೇಳುವಂತವುಗಳಾಗಿರುತ್ತವೆ." (ಅರವಿಂದ ಮಾಲಗತ್ತಿ, ಜಾನಪದ ಮತ್ತು ದೇಶೀವಾದ. ಪು:೮೨). ಒಂದು ಸಾಂಸ್ಕೃತಿಕ ಪ್ರಭುತ್ವಕ್ಕೆ ಪ್ರತಿಯಾಗಿ ಬಂಡೆದ್ದ ಅನೇಕ ಆಧ್ಯಾತ್ಮಿಕ ದಂಗೆಗಳು ಇಂದು ನಮ್ಮ ಸಮುದಾಯಗಳ ಪ್ರಜ್ಞೆಯಾಳದಲ್ಲಿ ಜೀವಂತವಾಗಿವೆ. ಈ ಕಥನಗಳು ನಿಸ್ಸಂಶಯವಾಗಿ ಸಾಂಸ್ಕೃತಿಕ ಪ್ರಭುತ್ವದ ವಿರುದ್ಧ ಶೋಷಿತ ವರ್ಗಗಳು ನೆಡೆಸಿದ ಸೃಜನಶೀಲ ತಾತ್ವಿಕ ಹೋರಾಟಗಳೇ ಆಗಿವೆ. ಇವು ತಿರಸ್ಕೃತ ಸಮುದಾಯಗಳ ಸಾಂಸ್ಕೃತಿಕ ಆತ್ಮ ಕಥನಗಳೂ ಆಗಿವೆ. ಏಕೆಂದರೆ ಇವುಗಳು ಸಾಂಸ್ಕೃತಿಕ ವಿಸ್ತರಣೆ ಮತ್ತು ಅನನ್ಯತೆಯನ್ನು ಬಲವಾಗಿ ಪ್ರತಿಪಾದಿಸುತ್ತವೆ. ಹೀಗಾಗಿ ಅಧೀನ ಸಮುದಾಯಗಳ ಸೃಷ್ಟಿಶೀಲ ಚೈತನ್ಯ ಮತ್ತು ಕಥನಗೊಳಗೆ ಅದು ರೂಪಿಸುವ ಬಲಿಷ್ಠ ಸಾಂಸ್ಕೃತಿಕ ನಾಯಕ ಮತ್ತು ಆ ಮೂಲಕ ತಾನು ಕಟ್ಟಿಕೊಳ್ಳುವ ವಿಚಾರಬದ್ಧ ಹೋರಾಟ, ಇವುಗಳೆಲ್ಲ ಸಾಂಸ್ಕೃತಿಕ ಪ್ರಭುತ್ವದ ದಬ್ಬಾಳಿಕೆಯ ತೀವ್ರತೆಯಿಂದ ರೂಪು ಪಡೆದಿರುತ್ತವೆ. ಹಾಗಾಗಿ "ಜಾನಪದ ಚರಿತ್ರೆಯ ಗತಿಯಲ್ಲಿ (ಕರ್ನಾಟಕಕ್ಕೂ ಇದು ಅನ್ವಯ ವಾಗುತ್ತದೆ ಎನ್ನುವ ನಂಬಿಕೆ ನನ್ನದು) ಸಂಸ್ಕೃತಿಯ ಸೃಜನಶೀಲ ರಹದಾರಿಗಳು ಹೊರ ಹೊಮ್ಮಿರುವುದೇ ಮಾರ್ಗದ (pan indian) ಏಕ ಮುಖ ಆಕೃತಿಯ ವಿರುದ್ಧದ ನಿಲುವಿನಲ್ಲಿ" (ಡಾ.ಬಸವರಾಜ ಕಲ್ಗುಡಿ. ಸಿರಿಗನ್ನಡ. ಪು:೧೬೩) ಎಂಬುದು ಬಹಳ ಮುಖ್ಯವಾದ ವಿಚಾರವಾಗಿದೆ. ಇಂದು ನಮಗೆ ಚರಿತ್ರೆ ಬರೆಯಲು, ಇಸ್ವಿಗಳನ್ನು ಗುರುತಿಸಲು ಮೂರ್ತ ಆಕರಗಳಿವೆ. ಆದರೆ ಸಮುದಾಯಗಳು ತಮ್ಮ ಗತವನ್ನು ದಾಖಲಿಸಲು ಕನಸುಗಳನ್ನು ಸ್ಮೃತಿ ಶಕ್ತಿಯನ್ನು ಅವಲಂಭಿಸಿರುವುದು, ಸಾಂಸ್ಕೃತಿಕ ರಾಜಕಾರಣ ಸೃಷ್ಟಿಸಿದ ಸಾಮಾಜಿಕ ವಿಷಮತೆಯೇ ಕಾರಣವೆನ್ನಬೇಕಾಗುತ್ತದೆ. ಇವತ್ತು ನಾವು ಕರ್ನಾಟಕ ಚರಿತ್ರೆ,ಧರ್ಮ, ಸಂಸ್ಕೃತಿ ಎಂಬ ಘೋಷಣೆಗಳಡಿಯಲ್ಲಿ ನಮ್ಮ ಶಾಲಾ ಕಾಲೇಜುಗಳಲ್ಲಿ ಓದುವ ಪಠ್ಯಗಳು ರೂಪುಗೊಂಡಿರುವುದು, ಪ್ರಭುತ್ವ ನಿರ್ಮಿಸಿ, ಉಳಿಸಿ ಬೆಳೆಸಿಕೊಂಡು ಬಂದ ಸ್ಥಾವರ ಆಕರಗಳಿಂದ" (ಡಾ.ಎ.ಎಸ್ ಪ್ರಭಾಕರ. ಮ್ಯಾಸಬೇಡರ ಕಥನಗಳು, ಪು:೧೫) ಎಂಬುದನ್ನು ಮನಗಾಣಬೇಕಾಗಿದೆ. ಸಮುದಾಯಗಳ ಸ್ಥಳೀಯ ಮತ್ತು ವಿಶ್ವಾತ್ಮಕ ಕಥನಗಳೆ ಭಗ್ನಗೊಳಿಸಿ, ತಮ್ಮದೇ ನೆಲೆಯ ಹೊಸ ನಿರೂಪಣೆಗಳಲ್ಲಿ ತೊಡಗಿರುತ್ತವೆ. ಇವುಗಳೆಲಲ ತಮ್ಮ ಅನುಭವದ ವಿಕ್ಷಿಪ್ತ ಲೋಕವೊಂದನ್ನು ನಮ್ಮೆದುರಿಗೆ ತೆರೆದಿಡುತ್ತವೆ. ಆದರೆ

ಸಂಸ್ಕೃತಿಯ ಕುರಿತು ಆರಂಭದಲ್ಲಿ ವ್ಯಾಖ್ಯಾನ ಬರೆದ ಅನೇಕ ಪಂಡಿತರಿಗೆ ಈ ಕನಸಿನ ವಿಕ್ಷಿಪ್ತ ನೋವುಗಳ ಲೋಕ ಕಣ್ಣಿಗೆ ಬಿದ್ದಿಲ್ಲ. ಈ ತಿರಸ್ಕೃತ ಲೋಕದ ಕನಸುಗಳ ಒಳಗೆ ತವಕಿಸುವಂತಹ ಸ್ಮೃತಿಗಳು ಕಟ್ಟಿಕೊಂಡ ಚರಿತ್ರೆಯೇ ಬೇರೆ ರೀತಿಯದ್ದಾಗಿದೆ. ಭಾರತೀಯ ಇತಿಹಾಸ ಯಾವುದನ್ನು ನೇರವಾಗಿಯೇ ತಿರಸ್ಕರಿಸಿದೆಯೋ ಅದನ್ನು ಈ ಸ್ಥಳೀಯ ಮತ್ತು ವಿಶ್ವಾತ್ಮಕ ಕಥನ ಪರಂಪರೆಯಲ್ಲಿ ಸಮರ್ಥ ರೀತಿಯಲ್ಲಿ ದಾಖಲಾಗಿರುವುದನ್ನು ಕಾಣುತ್ತೇವೆ. ಇದಕ್ಕೆ ಮುಖ್ಯ ಕಾರಣವೆಂದರೆ, ಜನಪದರ ಸ್ಮೃತಿಗಳು ಗತವನ್ನು ಸಮಕಾಲೀನಗೊಳಿಸುವ ಸಾಧನಗಳಾಗಿರುವುದು. ಈ ಸಮಕಾಲೀನಗೊಳಿಸುವ ಪ್ರಕ್ರಿಯೆಯಲ್ಲಿ ಯುಗ ಯುಗಳೇ ಪರಂಪರೆಯ ಮೂಲಕ ಸಮಕಾಲೀನಗೊಳ್ಳುತ್ತಿರುತ್ತವೆ. ಈ ಪ್ರಕ್ರಿಯೆಯು ಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯನ್ನು ರೂಪಿಸುತ್ತದೆ. ಆ ಮುಖಾಂತರ ಸಮುದಾಯಗಳೆಲ್ಲ ತಮ್ಮ ತಮ್ಮ ಕಥನ ಪರಂಪರೆಯ ಮೂಲಕ ಒಂದೊಂದು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಂಡಂತಾಗುತ್ತದೆ. ಹಾಗೆ ನೋಡಿದರೆ "ಬಹಳ ಸಾಮಾನ್ಯ ಎನಿಸುವ ಈ ಕನಸುಗಳ ಸಾಂಸ್ಕೃತಿಕ ಚರಿತ್ರೆಯೇ ಇನ್ನು ಶೋಧಿತವಾಗಿಲ್ಲ. (ಡಾ.ಮೊಗಳ್ಳಿಗಣೇಶ್, ಸೊಲ್ಲು, ಪು: ೪೧) "ಈ ಸಂಗತಿಗಳನ್ನು ಲೌಕಿಕ ಪ್ರಭುತ್ವವೆನ್ನುವುದು ನಾಶ ಮಾಡಲಿಕ್ಕಾಗುವುದಿಲ್ಲ. ಅವು ಸಮುದಾಯದ ಸಮಸ್ತ ಪ್ರಜ್ಞೆಯಿಂದ ರೂಪಗೊಂಡ ಸಂಗತಿಗಳು, ಕನಸುಗಳಲ್ಲಿ ಕಥೆಯಾಗಿ ಪರ್ಯಾವಾಸನಗೊಂಡ ಆದಿಮ ಪ್ರಜ್ಞೆಯ ಪ್ರತಿಮೆಗಳು ಇವು ಅಧೀನ ಸಮುದಾಯವೊಂದು ಇತಿಹಾಸವನ್ನು ಪರಿಭಾವಿಸುವ ಕ್ರಮವನ್ನು ರೂಪಿಸಿವೆ. ನಮ್ಮ ಜನಪದ ಅನುಭಾವಿಗಳು ಕಥನದ ರೂಪದಲ್ಲಿ ಕಟ್ಟುವ ಸಂಕೀರ್ಣ ಪುರಾಣರೂಪೀ ಚರಿತ್ರೆಗೆ ಸಾಕ್ಷಿಗಳಿಲ್ಲ. ಚರಿತ್ರೆಗೆ ಸಾಕ್ಷಿಗಳಿವೆ. ಇದು ಮೂರ್ತ ಆಕರಗಳನ್ನು ನೆಮ್ಮಿಕೊಂಡು ಬರೆದ ಚರಿತ್ರೆಯಾಗಿದೆ. ಶಿಷ್ಟ ಆಕರಗಳನ್ನು ಮತ್ತು ಶಿಷ್ಟ ಪುರಾಣಗಳನ್ನು ಪ್ರಭುತ್ವವು ಮಾನ್ಯ ಮಾಡಿರುವುದರಿಂದ ಅವಕ್ಕೆ ಸಾಕ್ಷಿಗಳಿವೆ, ನಿಗಧಿತ ದಾಖಲೆ ದಿನಾಂಕಗಳಿವೆ. ಈ ಜನಪದ ಅನುಭಾವೀ ಕಥನಗಳನ್ನು ಶಿಷ್ಟ ಪಂಡಿತ ಸಮೂಹ ಗೇಲಿ ಮಾಡುತ್ತಲೇ ಬಂದಿದೆ". (ಎ.ಎಸ್. ಪ್ರಭಾಕರ, ಮ್ಯಾಸಬೇಡರ ಕಥನಗಳು, ಪು : ೧೬) "ಕನಸುಗಳು ಮತ್ತು ಅಕ್ಷರ ಜಗತ್ತುಗಳ ನಡುವಿನ ವ್ಯತ್ಯಾವನ್ನು ಅರಿತರೆ ಜನಪದ ಪುರಾಣ ಮತ್ತು ಅದರ ಅನನ್ಯತೆ ಉಳಿದ ಪುರಾಣಗಳಿಗಿಂತ ಹೇಗೆ ಭಿನ್ನ ಎಂಬ ಸರಳ ವೈರುಧ್ಯ ಅರ್ಥವಾಗುತ್ತದೆ." (ಪಿ.ಲಂಕೇಶ್, ಕುವೆಂಪು -೯೦, ಒಂದು ಸಾಂಸ್ಕೃತಿಕ ನೆನಪು. ಪು:೬) ಈ ವೈರುಧ್ಯದ ಬಗ್ಗೆ ನಮ್ಮ ಇತಿಹಾಸಕಾರರು ತಲೆ ಕೆಡಸಿಕೊಳ್ಳದಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಬಹುತೇಕ ಚರಿತ್ರಕಾರರು ಇಂಡಿಯಾದ ಬಹುರೂಪಿ ಜೀವನ ಕ್ರಮವನ್ನು ಮೂಲೆಗೆ ತಳ್ಳಿ ತಮಗೆ ತಿಳಿದ ರೀತಿಯಲ್ಲಿ ಚರಿತ್ರೆ ದಾಖಲಿಸಿದರು. ಇದಕ್ಕೆ ಪೂರಕವಾಗಿ ಪ್ರಭುತ್ವ ಕೂಡ ಈ ಚರಿತ್ರೆಯೇ ದೇಶದ ಅಧಿಕೃತ ಚರಿತ್ರೆಯೆಂಬಂತೆ ಬಿಂಬಿಸಿ ಅದನ್ನು ನಂಬುವಂತೆ ಮಾಡಿದ್ದು ದುರದೃಷ್ಟಕರ ಸಂಗತಿ.

ಜೇಮ್ಸ್ ಮಿಲ್ಲರ್ ಇತಿಹಾಸಕಾರ ಬರೆದ ಭಾರತದ ಚರಿತ್ರೆ ನಮ್ಮ ಆರಂಭದ ಇತಿಹಾಸಕಾರರಿಗೆ ಮಾದರಿಯಾಯಿತು, ಒಂದರ್ಥದಲ್ಲಿ ಬಲಿಷ್ಠ ಸಾಂಸ್ಕೃತಿಕ ನೆನಪುಗಳಿಲ್ಲದವನು ಭವ್ಯವಾದದ್ದನ್ನು ಸೃಷ್ಟಿಸಲಾರ. ಕನಸು ಯಾವತ್ತೂ ನಮ್ಮ ಅಂತರಂಗದ ಅಭಿವ್ಯಕ್ತಿ, ವ್ಯಾಪಾರ, ಅದು ಸ್ಮೃತಿಯ ಒಂದು ಅವಿಭಾಜ್ಯ

ಅಂಗ. ಪರಂಪರೆಯ ಅಂತರಂಗದ ನಿರೂಪಕ. ಚರಿತ್ರೆ ಎಂಬುದು ನಮ್ಮ ಅಂತಃಸ್ಥ ಬದುಕಿನ ಆಳಕ್ಕೆ ಯಾವತ್ತೂ ಇಳಿಯುವುದಿಲ್ಲ. ಆ ಕಾರಣಕ್ಕಾಗಿ ದಂಡ ಯಾತ್ರೆಗಳನ್ನು, ಭೀಕರ ಯುದ್ಧಗಳನ್ನು ರಾಜರ ಒಡ್ಡೋಲಗ, ಕಲಾಪಗಳನ್ನು ರಾಣಿಯರ ವಯ್ಯಾರಗಳನ್ನು ವರ್ಣಿಸುವ ಪ್ರಭುನಿಷ್ಠತೆಯಿದೆ, ಇದು ಚರಿತ್ರೆಗೆ ಅನಿವಾರ್ಯತೆ ಕೂಡ ಆಗಿದೆ. ಹಾಗಾಗಿಯೇ ಈ ಚರಿತ್ರೆ "ಒಂದಾದ ಮೇಲೊಂದರಂತೆ ಒಳಗಾದ ದಾಳಿ ಪರಾಧೀನತೆಗಳ ಇತಿಹಾಸವೇ ಆಗಿದೆ. ಭಾರತೀಯ ಸಮಾಜಕ್ಕೆ ಇತಿಹಾಸವೆಂಬುದೇ ಇಲ್ಲ. ಕೊನೆಯ ಪಕ್ಷ ಸುವಿದಿತ ಇತಿಹಾಸವಂತೂ ಇಲ್ಲ. ಅದರ ಇತಿಹಾಸ ಎಂದು ಏನನ್ನು ನಾವು ಕರೆಯುತ್ತೇವೆಯೋ ಅದು ಒಬ್ಬರಾದ ಮೇಲೊಬ್ಬರು ದಾಳಿಕಾರರು ತಮ್ಮ ಸಾಮ್ರಾಜ್ಯವನ್ನು ಆ ಪ್ರತಿಭಟಿಸದ, ಬದಲದ, ಸಮಾಜದ ಜಡ ಆಧಾರದ ಮೇಲೆ ಸ್ಥಾಪಿಸಿದ ಇತಿಹಾಸವೆ ಆಗಿದೆ". (ಮಾರ್ಕ್ಸ್ ಮತ್ತು ಎಂಗಲ್ಸ್: ಪ್ರಥಮ ಭಾರತೀಯ ಸ್ವಾತಂತ್ರ್ಯಸಂಗ್ರಾಮ. ಪು: ೪೦) ಈ ಕಾರಣಕ್ಕಾಗಿಯೇ ನಮ್ಮ ಚರಿತ್ರೆಯ ಅನೇಕ ಪಾಠಗಳು ಸಮುದಾಯಗಳನ್ನು ಆಳಿದ ಮೇಲ್ವರ್ಗಗಳ ಚಟುವಟಿಕೆಗಳ ದಾಖಲೆಗಳು ಮಾತ್ರ ಆಗಿ ಉಳಿದಿವೆ. ಇದು ಮೂರ್ತ ಅಥವಾ ಲಿಖಿತ ಆಕಾರಗಳನ್ನು, ಸಾಕ್ಷಿಗಳನ್ನು ನೆಮ್ಮಿದುದರ ಫಲ. ಇದು ಲೌಖಿಕ ಮಟ್ಟದಲ್ಲಿ ನಮ್ಮ ಪರಂಪರೆಯನ್ನು ಮೇಲ್ಪದರದಲ್ಲಿ ಮಾತ್ರ ರಚಿಸಿಕೊಡುತ್ತದೆ. ಆದರೆ ಅಮೂರ್ತ ಜಗತ್ತಿನಲ್ಲಿ ವಿಹರಿಸುಂತಹ ಜನಪದ ಕಥನ ನಮ್ಮ ಸಮಾಜದ ಅಧೀನ ಸಮುದಾಯಗಳ ಅಂತರಂಗದ ಸೂಕ್ಷ್ಮ ಲೌಕಲಾಟಗಳನ್ನು ದಾಖಲಿಸುವುದರ ಜೊತೆಗೆ ಅಂತರಂಗದ ತಲ್ಲಣಗಳನ್ನು ಗ್ರಹಿಸುತ್ತದೆ. ಈ ಗ್ರಹಿಕೆಗೆ ನಮ್ಮ ಅನೇಕ ಸ್ಥಳೀಯ ಕಥನ ಪರಂಪರೆಗಳು ಸಾಕ್ಷಿಯನ್ನೊದಗಿಸುತ್ತವೆ. ಹೀಗೆ ಆಯಾ ಸಮುದಾಯಗಳ ಕಥನ ಪರಂಪರೆಗಳು ಸ್ಥಳೀಯ ಮಟ್ಟದಲ್ಲಿ ಸಂಸ್ಕೃತಿಯೊಂದನ್ನು ರೂಪಿಸುವುದರ ಜೊತೆಗೆ ವಿಶ್ವಾತ್ಮಕ ನೆಲೆಯ ಜ್ಞಾನ ಪರಂಪರೆಗಳನ್ನು ರೂಪಿಸಿಕೊಳ್ಳುತ್ತವೆ. ಆ ಕಥನಗಳೆಲ್ಲ ಸ್ಥಳೀಯವಾಗಿ ಆಲೋಚಿಸುತ್ತಲೇ ಜಾಗತಿಕವಾಗಿ ವರ್ತಿಸುತ್ತವೆ. ಇದು ಕಥನಗಳಿಗಿರುವ ಬಹುದೊಡ್ಡ ಸಾಧ್ಯತೆಯಾಗಿದೆ. ಕೆಳವರ್ಗಗಳ "ಕನಸು, ಆದರ್ಶ ಮತ್ತು ಕಲ್ಪನೆಯಲ್ಲ ಒಂದು ಚೇತನದಲ್ಲಿ ಸೇರಿ ಮಹಾಸಾಹಿತ್ಯವಾಗಿ ಅದು ಕಲ್ಲು, ಮಣ್ಣು, ಮರ, ನದಿಗಳ ಈ ವಾಸ್ತವ ಜಗತ್ತಿಗೆ ಅರ್ಥ ಪೂರ್ಣತೆ ತರುತ್ತದೆ" (ಪಿ.ಲಂಕೇಶ್. ಕುವೆಂಪು.೯೦ ಒಂದು ಸಾಂಸ್ಕೃತಿಕ ನೆನಪು ಪು: ೬) ಈ ಅರ್ಥ ಪೂರ್ಣ ಜಗತ್ತಿನ ವಿಚ್ಛಿನ್ನ ಸ್ಮೃತಿಗಳ ಸೂತ್ರ ಹಿಡಿಯಲು ಸೃಜನಶೀಲ ಜನಪದ ಅನುಭಾವಿಯೊಬ್ಬ ಕಥನ, ಮಹಾಕಥನವನ್ನು ಸಮುದಾಯ ನಿಷ್ಠೆಯಲ್ಲಿಯೇ ಸದಾ ನಿರೂಪಿಸುತ್ತಿರುತ್ತಾನೆ. ಈ ಕಥನ ಪರಂಪರೆಯಲ್ಲಿ "ಕಲಾತೀತವಾದ ಕೆಲವು ವೈಚಾರಿಕ ಆಕೃತಿಗಳಿರುತ್ತವೆ. ಅಂದ್ರೆ ಕೆಲವು ವಿಚಾರಗಳು ಆಕಾಶದಲ್ಲಿ ಸ್ಪೇಸ್ ಒಳಗಡೆ ಚಲಿಸುತ್ತವೆ. ಚಾರಿತ್ರಿಕ ಅವಕಾಶದಲ್ಲಿ ಅಲ್ಲ. Historical ಅಲ್ಲ. ಕೆಲವಕ್ಕೆ ಒಂದು ರೀತಿಯ ಸ್ವಯಂ ಚಾಲಿತ ಗುಣ ಅನ್ನೋದಿರುತ್ತೆ". (ಡಿ.ಆರ್.ನಾಗರಾಜ್.ಕನ್ನಡ ಅಧ್ಯಯನ (ಚಳಿಸಂಚಿಕೆ) ಪು: ೬) ಈ ಯಾವ ಸಂಗತಿಗಳನ್ನೆ ಆಗಲಿ ಲೌಕಿಕ ಪ್ರಭುತ್ವವೆನ್ನುವುದು ಯಾವತ್ತಿಗೂ ನಾಶಮಾಡಲು

ಸಾಧ್ಯವಿಲ್ಲ. ಇವುಗಳೆಲ್ಲ ಸಮುದಾಯಗಳ ಸಮಸ್ತ ಪ್ರಜ್ಞೆಯಿಂದಲೇ ರೂಪು ಪಡೆದ ಸಂಗತಿಗಳಾಗಿರುತ್ತವೆ. ಆದರೆ ಸಾಂಸ್ಕೃತಿಕ ಪ್ರಭುತ್ವವು ಹುಟ್ಟಿಸಿದ ಆತ್ಮದ್ವೇಷ ಅವುಗಳ ಸ್ಮೃತಿಗಳ ಜಗತ್ತನ್ನು ಸ್ಫೋಟಿಸಲಾಗಲಿಲ್ಲ. ದೈವ ಮತ್ತು ರಾಜಪ್ರಭುತ್ವದ ಕುರಿತು ಹರಡಿಸುವಂತಹ ಭ್ರಮೆಗಳು ಕೂಡ ಈ ಸ್ಮೃತಿಗಳನ್ನು ನಾಶಮಾಡಲು ಸಾಧ್ಯಲಾಗಲಿಲ್ಲ. ನ್ಯಾಯ, ಸಾಂಖ್ಯ, ಲೋಕಾಯತಗಳೆಂಬ ಭೌತವಾದೀ ಕಥನ ಧಾರೆಗಳ ಹುಟ್ಟಿಗೆ ಕಾರಣವಾದ ಈ ಸಮುದಾಯಗಳಿಗೆ ತಮ್ಮ ಸೃಜನಶೀಲ ಚೈತನ್ಯದ ಅನಾವರಣಕ್ಕೆ ಅಡ್ಡಿಯಾಗಿದ್ದು ಪುರೋಹಿತಷಾಹಿ ಪ್ರಣೀತ ದೈವ ಮತ್ತು ರಾಜತ್ವದ ಕುರಿತ ಅತೀಯಾದ ಭಾವುಕತೆ. ಈ ಎರಡು ಸಂಗತಿಗಳು ಇವುಗಳಿಗಿರುವ ಆರ್ಥಿಕ ಮತ್ತು ಸಾಮಾಜಿಕ ಅಧಿಕಾರಗಳಿಂದ ವಂಚಿಸಿ, ಒಂದು ರೀತಿಯಲ್ಲಿ ಬೌದ್ಧಿಕ ಶೂನ್ಯತೆಯನ್ನು ನಿರ್ಮಿಸಿದ್ದವು. ಸಮುದಾಯಗಳು ಬಲಿಯಾಗುವಿಕೆಯ ಈ ರೀತಿಯ ಎಷ್ಟೋ ಸಂಗತಿಗಳು ನಮ್ಮ ಚರಿತ್ರೆಯಲ್ಲಿ ನಡೆದು ಹೋಗಿವೆ. 'ವೇಲೆ ವಾಳಿ' ಮತ್ತು 'ಲೆಂಕವಾಳಿ' ಎಂಬಂತಹ ಅನೇಕ ಅವೈಚಾರಿಕ ಪದ್ಧತಿಗಳೇ ಇದಕ್ಕೆ ಬಹುದೊಡ್ಡ ಉದಾಹರಣೆ.

* * *

## ಅಧ್ಯಾಯ – ೪

# ಚರಿತ್ರೆ ರಚನೆ ಮತ್ತು ಕಥನ ಗೀತೆಗಳು

೧. ಸಾಮಾಜಿಕ ಸಂಬಂಧಗಳು

೨. ಆರ್ಥಿಕ ಸಂಬಂಧಗಳು

೩. ಸಾಂಸ್ಕೃತಿಕ ಸಂಬಂಧಗಳು

## ಅಧ್ಯಾಯ ೪

# ಚರಿತ್ರೆ ರಚನೆ ಮತ್ತು ಕಥನ ಗೀತೆಗಳು

ಇತಿಹಾಸವು ಎಲ್ಲಾ ಜ್ಞಾನ ಶಾಖೆಗಳಂತೆ ಮಾನವನ ಜ್ಞಾನದ ಒಂದು ಅವಿಭಾಜ್ಯ ಅಂಗ ಅಥವಾ ಜ್ಞಾನಶಿಸ್ತಾಗಿದೆ. ಬಹುಶಃ ಇತಿಹಾಸ ಮಾತ್ರ ತುಂಬಾ ದ್ವಂದ್ವಗಳಿಂದ ಕೂಡಿದ ಜ್ಞಾನ ಶಿಸ್ತಾಗಿದೆ. ಕಾರಣ ಇತಿಹಾಸಕ್ಕೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಯಾವುದೇ ರೀತಿಯ ಒಮ್ಮತಾಭಿಪ್ರಾಯಗಳಿಲ್ಲದಿದ್ದುದೇ ಇದಕ್ಕೆ ಕಾರಣ. ಇತಿಹಾಸ ಎಂಬುದು ಮೇಲ್ನೋಟಕ್ಕೆ ದಾಖಲೆಗಳ ಮೊತ್ತವಾಗಿ ಕಾಣುತ್ತದೆ. ನಮ್ಮ ಮುಂದಿನ ಪೀಳಿಗೆಗೆ 'ಇಂದನ್ನು' 'ನಾಳೆಗೆ' ಉಳಿಸಿಡುವ ಅಥವಾ ದಾಖಲಿಸಿಡುವ ಪ್ರಕ್ರಿಯೆಯೇ ಇತಿಹಾಸ. ಇವುಗಳು ಸಂಕ್ಷಿಪ್ತವಾಗಿಯೂ ಇರಬಹುದು ಅಥವಾ ವಿವರಣಾತ್ಮಕವಾಗಿಯಾದರೂ ಇರಬಹುದು. ರಾಜರು, ಅವರ ಪರಿವಾರ, ಅವರ ಆಡಳಿತ ವೈಖರಿ, ಆರ್ಥಿಕತೆ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಪ್ರತಿಯೊಂದು ವಿಷಯವೂ ಕೂಡ ಮಾನವ ಇತಿಹಾಸದ ಒಂದು ಭಾಗವಾಗೇ ಕಾಣುತ್ತದೆ. ಅಲ್ಲದೆ ಇತಿಹಾಸವೆನ್ನುವುದು ನಮ್ಮ ಚಿಂತನಾ ಪ್ರಕ್ರಿಯೆಯ ತಾತ್ವಿಕತೆಯಲ್ಲಿಯೂ ಅಡಗಿದೆ. ಇತಿಹಾಸವೆನ್ನುವುದು ಮಾನವನ ಮನಸ್ಸಿನ ಕುತೂಹಲವನ್ನು ತೃಪ್ತಿಗೊಳಿಸುವುದರ ಜೊತೆಗೆ ಬದಲಾಗುತ್ತಿರುವ ಪ್ರಪಂಚಕ್ಕೆ ಹೊಂದಾಣಿಕೆ ಮಾಡಿಕೊಳ್ಳಲು ನೆರವಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ವರ್ತಮಾನ ರೂಪುಗೊಡ ಬಗೆಯನ್ನು ತಿಳಿದುಕೊಳ್ಳಬಹುದು. ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ನೆನಪುಗಳು; ತನ್ನ ಸ್ವಂತ ಅನುಭವಗಳ ನೆನಪುಗಳಂತೂ ಅತೀ ಮುಖ್ಯ. ಈ ನೆನಪುಗಳು ಆತನಿಗೆ ಸಮಾಜದಲ್ಲಿ ತನ್ನ ಅಂತಃಶಕ್ತಿಯ ಅರಿವನ್ನು ಮೂಡಿಸುತ್ತವೆ. ನೆನಪುಗಳಿಲ್ಲದ ಹೊರತಾಗಿ ಅವನು ಏನನ್ನೂ ಮಾಡಲಾರ. ಇದೇ ರೀತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ನೆನಪುಗಳ ಮುಖಾಂತರ ಪೂರ್ವಿಕರ ಸಾಧನೆಗಳನ್ನು ಅರಿತು ತಾನು ಬದುಕುವ ಪರಿಸರವನ್ನು ರೂಪಿಸಿಕೊಳ್ಳುತ್ತಾನೆ. ಹೀಗೆ ಪ್ರತಿ ವ್ಯಕ್ತಿ ಅವರವರ ಪೂರ್ವಿಕರನ್ನು ಅರಿತು ಬಾಳುವಲ್ಲಿ ಇತಿಹಾಸ ಎಂಬುದು ಅತೀ ಮುಖ್ಯ ಪಾತ್ರ ವಹಿಸುತ್ತದೆ. ಕಾಲಾನುಕ್ರಮದಲ್ಲಿಯ ಘಟನೆಗಳನ್ನು,

ಅನುಭವದ ಸಂಗತಿಗಳನ್ನು ಒಟ್ಟಾರೆಯಾಗಿ ಈ ಇತಿಹಾಸವೆಂಬುದು ಹಿಡಿದಿಡುತ್ತದೆ. ಹಾಗಾಗಿಯೇ ನಾವು ಇತಿಹಾಸದ ಅಧ್ಯಯನ ಮಾಡುವುದು ಅನಿವಾರ್ಯ. ಮತ್ತು ಕಾರಣದಿಂದಾಗಿಯೇ ಇತಿಹಾಸ ಒಂದು ವಿಶಿಷ್ಟ ಜ್ಞಾನ ಶಿಸ್ತಾಗಿ ಬೆಳೆದಿದೆ.

'ಇತಿಹಾಸ'ವೆಂಬುಕ್ಕೆ ಆಯಾ ಭಾಷೆಗಳು ಅದರದೇ ಆದ ರೀತಿಯಲ್ಲಿ ಅರ್ಥವಿವರಣೆ ಮಾಡಿವೆ, ವ್ಯಾಖ್ಯಾನಗಳನ್ನು ನೀಡಿವೆ. ಗ್ರೀಕರೇ ಇದಕ್ಕೆ ಒಂದು ಹೊಸ ಅರ್ಥವನ್ನು ಸೂಚಿಸದರೆಂದರೆ ತಪ್ಪಲ್ಲ, ಥೂಸಿಡೈಡ್ಸ್ ಎಂಬ ಗ್ರೀಕ್ ಇತಿಹಾಸಜ್ಞ ಇತಿಹಾಸಕ್ಕೊಂದು ವ್ಯಾಖ್ಯಾನವನ್ನು ಕೊಟ್ಟ. "ತನಿಖೆಯ ಫಲಿತಾಶಂಗಳ ಕಥನ ಅಥವಾ ದಾಖಲೆ"[1] ಎಂಬುದು ಗ್ರೀಕರು ಮೊದಲ ಬಾರಿಗೆ ಇತಿಹಾಸದ ಕುರಿತು ಮಾಡಿದ ತೀರ್ಮಾನವಾಗಿದೆ. ನಂತರ ಇದು ರೋಮನ್, ಹಾಗೂ ಇತರ ಭಾಷೆಗಳಿಗೆ ವಿಸ್ತಾರವಾಯಿತು. ಅಲ್ಲದೆ ಆಯಾ ಭಾಷೆಗೆ ತಕ್ಕಂತೆ ವ್ಯಾಖ್ಯಾನಕ್ಕೂ ಒಳಗಾಯಿತು. "ನಾವು ಸಾಮಾನ್ಯವಾಗಿ ಇತಿಹಾಸ ಎಂಬ ಪದವನ್ನು ಎರಡಕ್ಕಿಂತ ಹೆಚ್ಚು ಭಾವನೆಗಳಲ್ಲಿ ಉಪಯೋಗಿಸುತ್ತೇವೆ. ಒಂದು, ಏನು ನಡೆಯಿತೆಂಬುದರ ಕಥನ ಎಂಬ ಅರ್ಥದಲ್ಲಿ, ಎರಡು, ಗಮನಾರ್ಹವಾದ ಘಟನೆ ಎಂಬ ಅರ್ಥದಲ್ಲಿ, ಅಂದರೆ ಅದು ಕಥೆಯಲ್ಲ, ಆದರೆ ಏನು ನಡೆಯಿತೆಂಬುದರ ಸಾರಾಂಶ ಮಾತ್ರ ಮತ್ತು ಪ್ರಮುಖ ಸಂಗತಿಗಳ ವಿವರಣೆ ಎಂದಾಗುತ್ತದೆ." (ಎಚ್.ವಿ.ಶ್ರೀನಿವಾಸ ಮೂರ್ತಿ, ಚರಿತ್ರೆ ಸಂಶೋಧನೆ ಮತ್ತು ಚರಿತ್ರೆ ಲೇಖನ, ಪು:೩) ಜರ್ಮನ್ ಭಾಷೆಯಲ್ಲೂ 'ಗೆಸ್‌ಛಿಟಟೆ' ಶಬ್ದದಿಂದ ಕರೆಯಲ್ಪಡುತ್ತದೆ. ಸಂಸ್ಕೃತದಲ್ಲಿ ಇತಿ ಎಂದರೆ 'ಹೀಗೆ,' 'ಹ' ಎಂದರೆ 'ಖಚಿತವಾಗಿ,' 'ಆಸ್' ಎಂದರೆ ನಡಿಯಿತು; ಖಚಿತವಾಗಿ ಹೀಗೇ ನಡೆಯಿತು ಎಂಬುದನ್ನು ಕುರಿತು ಹೇಳುವ ಶಾಸ್ತ್ರವೇ ಇತಿಹಾಸವೆಂದು ಸಂಸ್ಕೃತದಲ್ಲಿ ದಾಖಲಾಗಿದೆ. ಆದ್ದರಿಂದ ಇತಿಹಾಸ ಎಂಬ ಪದದ ಅರ್ಥವನ್ನು ಯಾವ ಕ್ಷೇತ್ರದಲ್ಲಿಯೇ ಆಗಲಿ ನಡೆದು ಹೋದ ಘಟನೆಗಳ ವರ್ಣನೆ ಎಂಬುದಕ್ಕೆ ಸೀಮಿತಗೊಳಿಸುವುದು ಸಾಮಾನ್ಯವಾಗಿದೆ. (ಎಚ್.ವಿ.ಶ್ರೀನಿವಾಸ ಮೂರ್ತಿ, ಚರಿತ್ರೆ ಸಂಶೋಧನೆ ಮತ್ತು ಚರಿತ್ರೆ ಲೇಖನ, ಪು,೪) ಈ ಮೊದಲೇ ಹೇಳಿದಂತೆ ಇತಿಹಾಸವೆಂಬುದು ಮಾನವನ ಅನುಭದ ಎಲ್ಲ ಕಥನಗಳನ್ನು ಕ್ರೋಢೀಕರಿಸುವ ಅಧ್ಯಯನ ಮಾದರಿ. ಇದೊಂದು ಸಮಾಜ ವಿಜ್ಞಾನ ಅಥವಾ ಸಮಾಜ ವಿಜ್ಞಾನದ ಕೇಂದ್ರ ಬಿಂದು ಮತ್ತು ಅದರ ವಸ್ತು ವಿಷಯ ಇತಿಹಾಸವು ಒಟ್ಟಾರೆಯಾಗಿ ಇಡೀ ಮಾನವ ಕುಲ ಬೆಳವಣಿಗೆಯನ್ನು ಗ್ರಹಿಸಲು ತುಂಬಾ ಅನುಕೂಲವಾದ ಒಂದು ಅಧ್ಯಯನ ಶಿಸ್ತಾಗಿ ರೂಪುಗೊಂಡಿರುವುದರ ಜೊತೆಗೆ ಜೀವಿಗಳ ಕಾರ್ಯ ಸಾಧನೆಯ ಕಥನವಾಗಿದೆ.(ಸಾಹಿತ್ಯ ಮತ್ತು ತತ್ವ ಶಾಸ್ತ್ರಗಳಂತಹ ವಿಷಯಗಳಿಗೂ ಇತಿಹಾಸ ಮೂಲ ಉದ್ದೇಶ ಈಡೇರಿಕೆಯ ಬಹು ಮುಖ್ಯ ಸಾಧನವಾಗಿದೆ. ಇದು ಭೂತಕಾಲ ಮತ್ತು ವರ್ತಮಾನ ಕಾಲಗಳನ್ನು ಒಂದು ಕಡೆ ಬೆಸೆಯುವ ಸರಪಳಿಯ ಕೊಂಡಿಯಂತೆ. ಈ ಜಗತ್ತಿನಲ್ಲಿ ಮಾನವ ಜೀವಿಸಲು ಪ್ರಾರಂಭಿಸಿದುದರಿಂದ ಇಂದಿನವರೆಗೆ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಹಿತ್ಯಕ, ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆತನ ಸಾಧನೆಗಳು

ಮತ್ತು ವಿಫಲತೆಯ ಯಥಾರ್ಥ ನಿರೂಪಣೆಯೇ ಇತಿಹಾಸ. ಈ ನಿರೂಪಣೆಯು ಕಾಲಾನುಕ್ರಮದ ನೆಲೆಯ ಮೇಲೆ ಸತ್ಯಕ್ಕೆ ಚ್ಯುತಿ ಬರದಂತೆ ಇರಬೇಕು. ಅನಾಗರೀಕತೆಯಿಂದ ನಾಗರೀಕತೆಯತ್ತ ಮಾನವನ ಮುನ್ನಡೆಯನ್ನು ಇತಿಹಾಸ ನಿರೂಪಿಸುತ್ತದೆ. ಇತಿಹಾಸವು ಒಂದು ಸಾಮಾಜಿಕ ಪ್ರವೃತ್ತಿ. ಮಾನವ ಸಮಾಜದ ವಿಕಾಸ ಹೇಗೆ ತುಂಬಾ ಸರಳ ರೀತಿಯಿಂದ ಪ್ರಾರಂಭವಾಗಿ ಸಂಕೀರ್ಣವಾದ ಅನೇಕತೆಯಲ್ಲಿ ಕೊನೆಗೊಂಡಿದೆ ಎಂಬ ಸ್ಪಷ್ಟವಾದ ಚಿತ್ರಣ ನಮಗೆ ಇಲ್ಲಿ ದೊರೆಯುತ್ತದೆ." (ಎಚ್.ವಿ.ಶ್ರೀನಿವಾಸಮೂರ್ತಿ, ಚರಿತ್ರೆ ಸಂಶೋಧನೆ ಮತ್ತು ಚರಿತ್ರೆ ಲೇಖನ, ಪು:೪) ಈ ಚಿತ್ರಣವನ್ನು ಗಮನಿದರೆ ಇತಿಹಾಸ ಅಧ್ಯಯನಗಳನ್ನು ವಿವಾದ ಅಸ್ತ್ರಗಳಾಗಿ ಬಳಸಿರುವ ಉದಾಹರಣೆಗಳು ದೊರೆಯುತ್ತವೆ. ಹದಿನಾರನೆಯ ಶತಮಾನದಲ್ಲಿ ಪಶ್ಚಿಮ ಯುರೋಪಿನಲ್ಲೂ ಉದಯಿಸಿದ ಪ್ರೊಟಸ್ಟಂಟ್ ಸುಧಾರಣೆಯು ಮಾಡಿದ ಕಟು ಟೀಕೆಯು ಸಾಹಿತ್ಯಾತ್ಮಕ ವಿವಾದಕ್ಕೆ ಕಾರಣವಾಯಿತು. ಕ್ಯಾಥೋಲಿಕ್ ಇತಿಹಾಸಕಾರರು ಮಾರ್ಟಿನ್ ಲೂಥರರ ನಡತೆ ಅಥವಾ ಶೀಲವನ್ನು ಕುರಿತಾಗಿ ಆಳವಾಗಿ ಬರೆಯಲಾರಂಭಿಸಿದರು. ಅವರ ಚಾರಿತ್ರ್ಯವಧೆಯ ಉದ್ದೇಶವನ್ನುಳ್ಳವಾಗಿದ್ದ ಈ ಬರಹಗಳು ಅವರು ಪಾದ್ರಿ ಸ್ಥಾನಕ್ಕೆ ಅನರ್ಹರೆಂದೂ, ದೋಷಿಯೆಂದೂ ಮತ್ತು ಈ ಕಾರಣಗಳಿಗಾಗಿ ಚರ್ಚಿನ ವಿಭಜನೆಯಾಯಿತೆಂದೂ ಆರೋಪಿಸಿದರು. ಇದಕ್ಕೆ ಪ್ರತಿಯಾಗಿ ಪ್ರೊಟೆಸ್ಟಂಟ್ ಬರಹಗಾರರು ಪುನರುಜ್ಜೀವನ ಕಾಲದ ಹಲವಾರು ಪೋಪುಗಳ ದುರ್ಬಲತೆಗಳು ಮತ್ತು ನೀತಿಗೆಟ್ಟ ನಡತೆಗಳನ್ನು ಎತ್ತಿ ತೋರಿ, ಕ್ಯಾಥೋಲಿಕ್ ಚರ್ಚಿನ ನಾಯಕತ್ವವನ್ನು ಖಂಡಿಸಿ, ಮಧ್ಯಕಾಲೀನ ಚರ್ಚಿನೊಡನೆ ಪ್ರೊಟೆಸ್ಟಂಟ್ ಪರವಶತೆ ಕ್ರಮಬದ್ಧವೆಂದು ಸಾರಿದರು. ಹೀಗೆ ಚರ್ಚಿನ ಈ ಎರಡು ಗುಂಪುಗಳು ಇತಿಹಾಸವನ್ನು ದುರುಪಯೋಗ ಪಡಿಸಿಕೊಂಡವು. ಹತ್ತೊಂಬತ್ತನೆಯ ಶತಮಾನದಲ್ಲಿ ಉದಯಿಸಿದ ರಾಷ್ಟ್ರೀಯತೆಯು ಮತ್ತೊಂದು ಐತಿಹಾಸಿಕ ವಿವಾದ ಬೆಳೆಯಲು ಕಾರಣವಾಯಿತು. ತಮ್ಮ ಜನರು ರಾಜಕೀಯ ಸ್ವಾತಂತ್ರ್ಯ ಪಡೆಯಲು ಐತಿಹಾಸಿಕ ಹಕ್ಕನ್ನು ಪಡೆದಿದ್ದಾರೆ ಎಂಬುದನ್ನು ಸಮರ್ಥಿಸಲು ಅನೇಕ ವಿದ್ವಾಂಸರು ತಮ್ಮ ಮೇಧಾಶಕ್ತಿಯನ್ನು ಬಳಸಿಕೊಂಡಿದ್ದಾರೆ. ವಿಶೇಷವಾಗಿ ಪೂರ್ವ ಮತ್ತು ದಕ್ಷಿಣ ಯುರೋಪಿನಲ್ಲಿ ರಾಷ್ಟ್ರೀಯವಾದಿ ಇತಿಹಾಸವು ಒಂದು ಅಲ್ಪ ಸಂಖ್ಯಾತರ ಸ್ಥಾನ ಮಾನವನ್ನು ಇತರರ ಮೇಲೆ ಎತ್ತಿ ಹಿಡಿಯಿತಲ್ಲದೆ ಹೆಚ್ಚಿನ ಬೆಂಬಲವನ್ನೂ ವ್ಯಕ್ತಪಡಿಸಿತು. ಮೊದಲನೆಯ ಜಾಗತಿಕ ಯುದ್ಧದ ನಂತರ ಅನೇಕ ಸ್ವತಂತ್ರ ರಾಷ್ಟ್ರಗಳು ಅಸ್ತಿತ್ವಕ್ಕೆ ಬಂದರೂ ಈ ವಿವಾದಕ್ಕೆ ತೆರೆ ಬೀಳಲಿಲ್ಲ. ಸೋವಿಯತ್ ಒಕ್ಕೂಟದ ವಿಭಜನೆಯ ನಂತರ ಜೆಕ್ಸ್ ಮತ್ತು ಸ್ಲೋವಕ್ಸ್ ಹಾಗೂ ಕ್ರೋಟ್ಸ್ ಮತ್ತು ಯುಗೋಸ್ಲಾವ್ ಜನಾಂಗಗಳ ಸಂಘರ್ಷಗಳು ಪತ್ರಿಕೆಗಳಲ್ಲಿ ಶಿರೋನಾಮ ಪಡೆದುದನ್ನು ಇಲ್ಲಿ ಸ್ಮರಿಸಬಹುದು. ನಿಷ್ಪಕ್ಷಪಾತವಾದ ಇತಿಹಾಸ ಸಾಹಿತ್ಯ ರಚನೆಗೆ ಈ ವಿವಾದಗಳ ಕಾವು ಅಡ್ಡವಾಗಿದೆ." (ಎಚ್.ವಿ.ಶ್ರೀನಿವಾಸ ಮೂರ್ತಿ, ಚರಿತ್ರೆ ಸಂಶೋಧನೆ ಮತ್ತು ಚರಿತ್ರೆ ಲೇಖನ, ಪು:೬) ಆದರೆ ಮೊದಲಿಗೆ ಇತಿಹಾಸವನ್ನು ಸ್ಮರಣಯೋಗ್ಯ ಘಟನೆಗಳ ಕಥನ ಎಂಬಂತೆ ನಂಬಲಾಗಿತ್ತು. ಇದರ ಜೊತೆಗೆ

ಇತಿಹಾಸವೆಂಬುದೊಂದು ನಿಯಮವಾಗಿ ಅಥವಾ ಮಾದರಿಯಾಗಿ ಒದಗುವ ತೀರ್ಮಾನಗಳ ಸಂಗ್ರಹವೆಂದೂ ಭಾವಿಸಲಾಗಿತ್ತು. ಅಲ್ಲದೆ ಇತಿಹಾಸದ ತಿಳಿವು ರಾಜಕೀಯ, ಮಿಲಿಟರಿ, ಮತ್ತು ಪೌರ ಜೀವನಗಳಿಗೆ ಪ್ರಾಯೋಗಿಕ ವಿಷಯ ವಸ್ತು ಪ್ರಧಾನವಾಗಿ ರಾಜಕೀಯ ಘಟನೆಗಳು, ಯುದ್ಧಗಳು ಮತ್ತು ಕ್ರಾಂತಿಗಳನ್ನು ಒಳಗೊಂಡಿದ್ದಿತು. ಇತಿಹಾಸಕಾರನ ಗುರಿಯು ಓದುಗರನ್ನು ಸಂತೋಷ ಪಡಿಸುವುದು ಅಥವಾ ಬೋಧಿಸುವುದು ಅಥವಾ ಏಕಕಾಲದಲ್ಲಿ ಬೋಧಿಸುವುದು; ಸಂತೋಷ ಪಡಿಸುವುದು ಆದುದರಿಂದ ಇತಿಹಾಸವೆಂಬುದು ಸಾಹಿತ್ಯದ ಒಂದು ಶಾಖೆಯಾಗಿತ್ತು. ಇಲ್ಲಿ ಸಮರ್ಥನೆಗಳಿಗೆ ಹೆಚ್ಚು ಪ್ರಾಮುಖ್ಯತೆಗಳಿರಲಿಲ್ಲ. ಪುನರುಜ್ಜೀವನ ಯುಗದ ಬರಹಗಾರರು ಪ್ರಾಚೀನ ಬರಹಗಾರರನ್ನು ನೇರವಾಗಿ ಅನುಕರಣೆ ಮಾಡಿದರು. ಆದರೆ ಅವರುಗಳೆಲ್ಲ ಸಮರ್ಥನೆಗೆ ಒತ್ತು ಕೊಟ್ಟರು.

ಹಾಗೆ ನೋಡಿದರೆ ಇತಹಾಸ ರಚನೆಯ ಎರಡನೆಯ ಘಟ್ಟವು ಹದಿನೆಂಟನೆಯ ಶತಮಾನದಲ್ಲಿ ಪ್ರಾರಂಭವಾಯಿತೆನ್ನಬೇಕು. ಈ ಹಂತದಲ್ಲಿ ಹಲವಾರು ದಾರ್ಶನಿಕರು ಇತಿಹಾಸವೆಂಬುದು ಕೇವಲ ಘಟನೆಗಳ ಅಧ್ಯಯನವಾಗಿರದೆ ಜನತೆಯ ರೂಢಿಗಳನ್ನೂ ಒಳಗೊಂಡಿದೆ ಎಂಬುದನ್ನು ಗ್ರಹಿಸಿದರು. ರಾಜಕೀಯ ವಿಷಯದ ಜೊತೆ ಜೊತೆಯಲ್ಲಿ ಕಲೆ, ವಿಜ್ಞಾನ, ಕೈಗಾರಿಕೆ, ಜೀವನದ ರೀತಿ ನೀತಿಗಳು, ಹಾಗೂ ಸಮಾಜದ ಸ್ಥಿತಿ-ಗತಿಗಳು ಕುರಿತಾದ ವಿಷಯಗಳಿಗೆ, ವಿಕಸನಗಳಿಗೆ, ಅವರ ಆಸಕ್ತಿ ಹೆಚ್ಚುತ್ತಾ ಹೋಯಿತು. ಈ ರೀತಿಯ ಪ್ರವೃತ್ತಿಗಳು ಮಾಂಟೆಸ್ಕೊ ಮತ್ತು ವಾಲ್ಟೇರ್ ಅವರಲ್ಲಿ ಹೆಚ್ಚಾಗಿ ವ್ಯಕ್ತವಾಗಿರುವುದನ್ನು ಕಾಣಬಹುದು. ಈ ಹಂತದಲ್ಲಿ ರಾಜಕೀಯ ಮತ್ತು ಮಿಲಿಟರಿ ಘಟನೆಗಳು ವಿವರಣಾತ್ಮಕ ಕಥನ ಇತಿಹಾಸದ ಪ್ರಧಾನ ಕಾರ್ಯವೆಂದು ಪರಿಗಣಿಸುವಂತಹ ಪರಿಪಾಠ ಇತ್ತಾದರೂ ಇದರ ಜೊತೆಗೆ ಮಾನವನ ಮಾನಸಿಕ ಬೆಳವಣಿಗೆ ಅಥವಾ ಅಭಿವೃದ್ಧಿ ಕುರಿತಾದ ವಿವರಣೆಗಳನ್ನು ಸೇರಿಸುವುದು ಹೊಸ ಪರಿಹಾರವಾಗಿ ಮೂಡಿ ಬಂದಿದ್ದು ವಿಶೇಷ ಸಂಗತಿ. ಇದೆಲ್ಲದರ ಆಧಾರದ ಮೇಲೆ ಈ ಶತಮಾನವು ತನ್ನ ಅಂತ್ಯದ ವೇಳೆಗೆ ಇತಿಹಾಸವನ್ನು 'ನಾಗರೀಕತೆಯ ಇತಿಹಾಸ' ಎಂಬ ಹೊಸ ಪರಿಭಾಷೆಯೊಂದಿಗೆ ಕರೆಯಲಾರಂಭಿಸಿತು. ಇದು ಮುಂದೆ ಹತ್ತೊಂಬತ್ತನೆಯ ಶತಮಾನದ ಸಾಹಿತ್ಯ ಕ್ರಾಂತಿಗೆ ಗುರುತನ್ನೊದಗಿಸಿತು. ಇಲ್ಲಿ ಇತಿಹಾಸ ಸಾಹಿತ್ಯವು ನವೀಕರಣಕ್ಕೆ, ಪರಿಷ್ಕರಣೆಗಳಿಗೆ ಒಳಗಾಗುತ್ತಾ ಹೋಯಿತು. ಭಾವಶೀಲ ಚಳುವಳಿಯ ಪ್ರಭಾವಕ್ಕೊಳಗಾದ ಇತಿಹಾಸಕಾರರು ಸಾರ್ವಜನಿಕರ ವಿವೇಚನಾಶಕ್ತಿಯನ್ನು ತಾಕಿಸಲು ಹಾಗೂ ಅವರ ಭಾವನೆಗಳನ್ನು ಉದ್ರೇಕಿಸಲು ಉಜ್ವಲವಾದ ವಿಧಾನಗಳಲ್ಲಿ ನಿರೂಪಿಸಲು ಪ್ರಾರಂಭಿಸಿದರು. ಕಣ್ಮರೆಯಾದ ಸತ್ಯಗಳಿಗೆ ಕವಿತೆಯ ರೂಪಕಗಳನ್ನು ಕೊಟ್ಟು ಜನಮನಗಳನ್ನು ಆಕರ್ಷಿಸಿದರು. ವಿಷಯದ ಆಯ್ಕೆ ಯೋಜನೆ, ಸಮರ್ಥನೆಗಳು, ಶೈಲಿ, ಮುಂತಾದ ವಿಚಾರಗಳಲ್ಲಿ ಸಾಹಿತ್ಯದ ಪರಿಣಾಮವನ್ನುಂಟು ಮಾಡುವುದು ಅವರ ಅಪೇಕ್ಷೆಯಾಗಿತ್ತು. ಗತಕಾಲದ ದೃಶ್ಯಗಳನ್ನು ಜೀವಂತವಾಗಿಸುವ ಅವರ ಉದ್ದೇಶದ ಪರಿಣಾಮವಾಗಿ ಇತಿಹಾಸವು ಐತಿಹಾಸಿಕ ಕಾದಂಬರಿಯ ರೂಪವನ್ನು

ತಳೆಯಿತು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಿಂದ ಮಾತ್ರ ವೈಜ್ಞಾನಿಕ ರೂಪಗಳ ಇತಿಹಾಸ ನಿರೂಪಣೆ ವಿಕಸನ ಗೊಂಡಿತು. ಈ ಪ್ರವೃತ್ತಿ ನೆಲೆಗೊಂಡಂತೆ ಇತಿಹಾಸದ ಉದ್ದೇಶವು ಕೇವಲ ತಿಳಿವು ಎಂಬ ಸಾಮಾನ್ಯ ನಿಯಮ ನೆಲೆಯೂರಿತು. ಹೀಗೆ ಇತಿಹಾಸ ನಿರೂಪಣೆಯಲ್ಲಿ ಕಾಲ ಕಾಲಕ್ಕೆ ಬದಲಾವಣೆಗಳು ಕಂಡು ಬರುತ್ತವೆ." (ಅದೇ, ಪು:೧೦) ಹಾಗೆ ನೋಡಿದರೆ ಶಾಸ್ತ್ರೀಯ ಇತಿಹಾಸದಲ್ಲಿರುವುದು ಕಾರ್ಯಕಾರಣ ಸಂಬಂಧ ಮಾತ್ರ, ಐತಿಹಾಸಿಕ ಕಾಲಕ್ರಮದಲ್ಲಿನ ಕಾರ್ಯಕಾರಣ ಸಂಬಂಧದ ತೊಡಕಿನಿಂದ ಇದು ಗೊತ್ತಾಗುತ್ತದೆ. ಹೊಸ ಸಂಬಂಧವನ್ನು ಸೃಷ್ಟಿಸಬೇಕಾದರೆ ಇದ್ದ ಸಂಬಂಧವೊಂದನ್ನು ಬಿಡಿಸಿ ನೋಡುವುದು ಅನಿವಾರ್ಯ. ನಮ್ಮ ದೇಶದಲ್ಲಿ ಈ ಶತಮಾನದ ಪ್ರಾರಂಭಕ್ಕಿಂತ ಮೊದಲು ಗಾಂಧೀಜಿಯಂತಹ ಮಹಾತ್ಮ ಹೇಗೆ ಹುಟ್ಟಿದ್ದ? ಇಂಥ ಪ್ರಶ್ನೆಗಳಿಗೆ ಉತ್ತರ ಇತಿಹಾಸದಲ್ಲಿ ದೊರೆಯುವುದಿಲ್ಲ. ಆದರೆ ಇತಿಹಾಸ ಹುಟ್ಟಿಕೊಂಡಿದೆ, ಇತಿಹಾಸವೂ ಒಂದು ಭಾಷೆ. ಆದ್ದರಿಂದ ಅದರಿಂದ ಬಿಡುಗಡೆ ಇಲ್ಲ." (ಡಾ.ಚಂದ್ರಶೇಖರ ಕಂಬಾರ, ಕರ್ನಾಟಕ ಚರಿತ್ರೆ, ಕುಲಪತಿಗಳ ಮಾತು, ಮಾಲೆ,೬) ಇಲ್ಲಿ ಅನುಭವ ಮತ್ತು ತಿಳಿವಳಿಕೆಯ ಮಧ್ಯೆ ಒಂದು ರೀತಿಯ ಕೊಳುಕೊಡೆ ಯಿರುತ್ತದೆ. ಹಾಗಾಗಿ ಅನುಭವದ ತಿಳಿವು. ತಿಳುವಳಿಕೆಯ ಅನುಭವ ನಡೆಯುವುದು ಇತಿಹಾಸದಲ್ಲಿ ಮಾತ್ರ. ಇತಿಹಾಸವೆಂದರೆ ಕೇವಲ ಗತ ಸಂಗತಿಗ ದಾಖಲೆ ಮಾತ್ರ ಅಲ್ಲ. ಮನುಷ್ಯನ ಅನುಭವ ಮತ್ತು ತಿಳುವಳಿಕೆಗಳು ಒಂದರೊಳಗೊಂದು ಕೂಡಿ ಹೋಗುವುದು ಇತಿಹಾಸದಲ್ಲಿದೆ. ಇತಿಹಾಸನೆನ್ನುವುದು ಒಂದು ಅಮೂರ್ತ ಪರಿಕಲ್ಪನೆ ಎಂಬುದು ಇದರಿಂದ ಗೊತ್ತಾಗುತ್ತದೆ. ಈ ಇತಿಹಾಸಕ್ಕೆ ಸಂಬಂಧಿಸಿದಂತೆ ಹಲವಾರು ಜನರು ತಮ್ಮ ವ್ಯಾಖ್ಯಾನ, ಅಭಿಪ್ರಾಯಗಳನ್ನು ನೀಡಿದ್ದಾರೆ. ಅವುಗಳು ಈ ಕೆಳಗಿನಂತಿವೆ.

ಜೆ.ಬಿ.ಬ್ಯೂರಿ ಇತಿಹಾಸ ಒಂದು ವಿಜ್ಞಾನ ಹೆಚ್ಚು ಅಲ್ಲ, ಕಡಿಮೆಯೂ ಅಲ್ಲ.

ಎಡ್ವರ್ಡ್ ಫ್ರಿಮನ್ ಗತಕಾಲದ ರಾಜಕೀಯ ಇಂದಿನ ಇತಿಹಾಸ ಮತ್ತು ಇಂದಿನ ರಾಜಕೀಯವೇ ಭವಿಷ್ಯದ ಇತಿಹಾಸ.

ಥಾಮಸ್ ಕಾರ್ಲೈಲ್ ವ್ಯಕ್ತಿಗಳ ಜೀವನ ಚರಿತ್ರೆಯೇ ಇತಿಹಾಸ.

ಅರ್ನಾಲ್ಡ್ ಟೈನ್‌ಬಿ ನಾಗರೀಕತೆಗಳ ಏಳು ಬೀಳಿನ ಕತೆಯೇ ಇತಿಹಾಸ.

ಪಂಡಿತ್ ನೆಹರು ಅನಾಗರೀಕ ಸ್ಥಿತಿಯಿಂದ ಮನುಷ್ಯ ನಾಗರೀಕ ಸ್ಥಿತಿಗೆ ಬೆಳೆದು ಬಂದದ್ದನ್ನು ವಿವರಿಸುವುದೇ ಇತಿಹಾಸದ ತಿರುಳು.

ವಿಲ್‌ಡುರಾಂಟ ಇತಿಹಾಸವು ಗತಕಾಲದಲ್ಲಿ ನಾಗರೀಕ ಮಾನವನು ಏನು ಚಿಂತಿಸಿದನು ಅಥವಾ ಏನು ಮಾಡಿದನು ಎಂಬುದರ ವಿವರಣೆಯಾಗಿದೆ.

ಇ.ಹೆಚ್.ಕಾರ್ ಚರಿತ್ರೆಯು ಭೂತ ಮತ್ತು ವರ್ತಮಾನ ಕಾಲದ ನಡುವಿನ ಮುಗಿಯದ ಸಂಭಾಷಣೆ.

**ಬರ್ಕ್ ಹಾರ್ಟ್** ಒಂದು ಯುಗವು ಮತ್ತೊಂದು ಯುಗದಲ್ಲಿ ಗಮನದಲ್ಲಿಡಲು ಯುಕ್ತವೆಂದು ಪರಿಗಣಿಸುವ ವರದಿಯೇ ಇತಿಹಾಸ.

**ಥೂಸಿ ಡೈಡ್ಸ್** ಇತಿಹಾಸವು ಉದಾಹರಣೆಗಳಿಂದ ಕಲಿತ ತತ್ವಶಾಸ್ತ್ರ

**ವೈಟ್** ಪ್ರಾಚೀನ ಕಾಲವನ್ನು ಒಳಹೊಕ್ಕು, ಅದರ ಅರ್ಥವನ್ನು ಗ್ರಹಿಸಿ ಅದನ್ನು ಪುನರ್ ನಿರ್ಮಿಸುವುದೇ ಇತಿಹಾಸವಾಗಿದೆ.

**ಟ್ರವರ್ ರೋಪರ್** ದೂರದಲ್ಲಿರುವ ಅನ್ಯರ ಮನಸ್ಸಿಗೆ ವಲಸೆ ಹೋಗುವ ಶಕ್ತಿ, ಇತಿಹಾಸ

**ಸಿಸಿರೊ** ನೀವು ಜನಿಸುವುದಕ್ಕೆ ಮೊದಲು ಏನು ನಡೆಯಿತೆಂಬುದನ್ನು ತಿಳಿದುಕೊಳ್ಳದಿದ್ದರೆ ನೀವು ಸದಾ ಕಾಲದಲ್ಲಿಯೂ ಶೈಶವಾವಸ್ಥೆಯಲ್ಲಿದ್ದಂತೆ.

**ಆರ್ಥರ್ ಮಾರ್ವಿಕ್** ಇತಿಹಾಸದಿಂದ ಏನು ಉಪಯೋಗ ಎಂದು ಸವಾಲು ಹಾಕುವವರಿಗೆ ಯಾವೊಬ್ಬನಿಗೂ ಇತಿಹಾಸದ ಅರಿವಿಲ್ಲದ ಸಮಾಜದಲ್ಲಿ ನಿತ್ಯ ಜೀವನ ಹೇಗೆ ಇರುತ್ತದೆಂದು ಯೋಚಿಸಲು ಪ್ರಯತ್ನಿಸಿ ಎಂದು ಸಲಹೆ ನೀಡುವುದೇ ಅವರನ್ನು ಜ್ಞಾನವಂತರನ್ನಾಗಿ ಮಾಡುವ ಚುಟುಕು ಉತ್ತರ.

ಹೀಗೆ ಇತಿಹಾಸಕ್ಕೆ ಸಂಬಂಧಿಸಿದಂತೆ ಹಲವಾರು ಜನ ವಿದ್ವಾಂಸರು, ಬೇರೆ ಬೇರೆ ಕ್ಷೇತ್ರದ ಜನ ತಮ್ಮ ನೆಲೆಯಲ್ಲಿಯೇ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಇವೆಲ್ಲವನ್ನು ಗಮನಿಸಿ ಒಟ್ಟಾರೆಯಾಗಿ ಹೇಳುವುದಾದರೆ ಇತಿಹಾಸವು ಒಂದು ಸಾಮಾಜಿಕ ಪ್ರವೃತ್ತಿ. ಮಾನವ ಸಮಾಜದ ವಿಕಾಸ ಹೇಗೆ ತುಂಬಾ ಸಗಳ ರೀತಿಯಿಂದ ಪ್ರಾಂಭವಾಗಿ ಸಂಕೀರ್ಣವಾದ ಅನೇಕತೆಯಲ್ಲಿ ಕೊನೆಗೊಂಡಿದೆ ಎಂಬ ಒಂದು ಖಚಿತ ನಿಲುವಿಗೆ ನಾವಿಲ್ಲ ಬಗಬಹುದು. ಹಾಗೆ ನೋಡಿದರೆ "ಇತಿಹಾಸವು ಯಾವ ತೀರ್ಪನ್ನು ಕೊಡುವುದಿಲ್ಲ :ಮೇಲಾಗಿ ನೀಡಲು ಇತಿಹಾಸದಲ್ಲಿ ತೀರ್ಪೂ ಇಲ್ಲ. ಮಾನವನ ಪ್ರತಿಯೊಂದು ಪೀಳಿಗೆಯೂ ತನ್ನದೇ ಆದ ಒಂದು ದೃಷ್ಟಿಕೋನವನ್ನು ಹೊಂದಿರುತ್ತದೆ. ಹಿಂದಿನ ಪೀಳಿಗೆಯೊಂದಿಗೆ ಅದರ ಪ್ರತಿಕ್ರಿಯೆಯು ವಿಭಿನ್ನವಾಗಿರುತ್ತದೆ." (ಅದೇ, ಪು:೪) ಹಾಗಾಗಿಯೆ ಕಾಲದ ಸಂದರ್ಭದ ಚರ್ಚೆಯಲ್ಲಿ ವಿಭಿನ್ನತೆ ಕಂಡುಬರುತ್ತದೆ. ಅಲ್ಲದೆ 'ಚರಿತ್ರೆ ಎಂದರೆ ದಾಖಲೆಗಳಿಂದ ಕಟ್ಟಿದಂಥದು ಎಂಬ ಮಾತು ಮೇಲೆ ಉಲ್ಲೇಖಿತವಾಯಿತಲ್ಲವೇ? ಈ ಕಟ್ಟುವಿಕೆಯ ತರ್ಕದಾಖಲೆಗಳ ಮೂಲಕ ಲಭಿಸಿದುದಾಗಿರದೆ, ನಮ್ಮ ಚಿಂತನೆಯ ಚೌಕಟ್ಟಿಗೆ ದಾಖಲೆಗಳನ್ನು ಸೆಳೆಯಲಾಗುತ್ತದೆ. ಅಂದರೆ ಚರಿತ್ರೆ ಎಂಬುದು ಆಗಿ ಹೋದುದಲ್ಲ ಹಾಗೆಂದು ನಾವು ಭಾವಿಸಿದುದು ಚರಿತ್ರೆಯು ರೇಖಾತ್ಮಕವಾಗಿ ಚಲಿಸುವ 'ಆಗಿಹೋದ' ಘಟನೆಗಳ ಸರಪಣಿಯ ಹಿಂದಿನ ತರ್ಕ ಎಂಬುದೇ ಇಲ್ಲಿನ ನಿಲುವು. 'ಆಗಿಹೋದ' ಎಂಬುದು ಮತ್ತೆ ಆಂಶಿಕ ಗ್ರಹಿಕೆಯನ್ನೇ ಹೇಳುತ್ತದೆ. ಯಾಕೆಂದರೆ ಆಗುತ್ತಿರುವ ಎಂಬ ನೆಲೆಯನ್ನು ಅದು ಮರೆಯುತ್ತದೆ. ರಾಜ ಸತ್ತೆಯ, ಧರ್ಮದ ಒಳರಚನೆಗಳನ್ನು ಅವುಗಳು ಸಮಾಜದ ಜೊತೆ ರೂಪಿಸಿಕೊಂಡ ವೈರುಧ್ಯಗಳನ್ನು ಮೇಲಿಂದ ಮೇಲೆ ಹೇಳಲಾಗಿದೆ (ಕೆ.ವಿ.ನಾರಾಯಣ. ಬೇರುಕಾಂಡ ಚಿಗುರು. ಪು:೧೬)

೧೯೫೬ ರಷ್ಟು ಹಿಂದೆಯೇ ಡಿ.ಡಿ.ಕೋಸಾಂಬಿಯವರು ಇತಿಹಾಸವನ್ನು ಹೀಗೆ ಅರ್ಥೈಸಿದರು. "ಉತ್ಪಾದನೆಯ ಸಾಧನೆಗಳು ಮತ್ತು ಸಂಬಂಧಗಳ ಅನುಕ್ರಮವಾದ ಬೆಳವಣಿಗೆಯನ್ನು ಕಾಲಕ್ರಮವಾಗಿ ಪ್ರತಿಪಾದಿಸುವುದೇ ಇತಿಹಾಸ ಎನಿಸಿಕೊಳ್ಳುತ್ತದೆ. ಇದನ್ನು ರೋಮಿಲಾ ಥಾಪರ್ ರಾಜಕೀಯ ಚರಿತ್ರೆ ಮತ್ತು ವಿವಿಧ ವಂಶಾವಳಿಗಳ ಅಧ್ಯಯನಗಳು ಇತಿಹಾಸದ ನಿರೂಪಣೆಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿರುತ್ತವೆ. ಆದರೆ ಒಂದು ಜನಸಮುದಾಯ ಮತ್ತು ಸಂಸ್ಕೃತಿ ಹೇಗೆ ರಚಿತಾಗಿರುತ್ತವೆಂಬುದರ ಹಿನ್ನೆಲೆಯಲ್ಲಿ ಇವನ್ನು ನೋಡಬೇಕು. ರಾಜಕೀಯ ಬದಲಾವಣೆ ಮತ್ತು ಆರ್ಥಿಕ ವ್ಯವಸ್ಥೆ, ಇವುಗಳ ನಡುವೆ ಅವಿಭಾಜ್ಯವಾದ ಸಂಬಂಧವಿದೆ. ತತ್ಪರಿಣಾಮವಾಗಿ ಅವು ಸಾಮಾಜಿಕ ಸಂಬಂಧಗಳನ್ನು ರೂಪಿಸುವುದರಲ್ಲೂ ಕಾರಣವಾಗುತ್ತವೆ ಎಂದು ವಿವರಿಸುತ್ತಾರೆ." ಸತೀಶ್ಚಂದ್ರ ೧೯೭೭ರ ಭಾರತೀಯ ಇತಿಹಾಸ ಸಮ್ಮೇಳನ ಅಧ್ಯಕ್ಷರಾಗಿ ಒಂದು ಮಾತು ಹೇಳಿದ್ದರು. "ಇತಿಹಾಸವೆಂದರೆ ಯುದ್ಧಗಳ, ಆಂತರಿಕ ಪ್ರಕ್ಷುಬ್ಧತೆಯ, ದಮನದ ಮತ್ತು ಕೆಲವು ವೀರರ, ಧೀರ ಕೃತಿಗಳ ದೀರ್ಘವಾದ ಪಟ್ಟಿ ಮಾತ್ರವಲ್ಲ; ಮೂಲಭೂತವಾಗಿ ಇತಿಹಾಸವು ಮಾನವನ ಸತ್ವದ ಹಾಗೂ ಮಾನವನ ನಾಗರೀಕತೆಯ ಬೆಳವಣಿಗೆಯನ್ನು ಒಟ್ಟು ಸಮಾಜದ ಬೆಳವಣಿಗೆಯಲ್ಲಿ ಅಭ್ಯಸಿಸುತ್ತದೆ. (ಡಾ.ಹೆಚ್.ಎಸ್.ಗೋಪಾಲರಾವ್, ಇತಿಹಾಸದ ಅಧ್ಯಯನ ಅಂದು-ಇಂದು, ಪು:೧೩-೧೪). ಹೀಗೆ ಸಾಂಪ್ರದಾಯಿಕ ಅಥವಾ ಶಾಸ್ತ್ರೀಯ ಇತಿಹಾಸಕ್ಕಿಂತ ತುಂಬಾ ಭಿನ್ನವಾದ, ಆರ್ಥಿಕ ಅಥವಾ ಉತ್ಪಾದನಾ ಅಂಗಗಳು, ಸಮುದಾಯಗಳನ್ನಿಟ್ಟುಕೊಂಡು ಭಿನ್ನ ದೃಷ್ಟಿಯ ಇತಿಹಾಸದ ವ್ಯಾಖ್ಯಾನಗಳೂ ಇವೆ. ಸಾಂಸ್ಕೃತಿಕ ಇತಿಹಾಸವೆನ್ನಬಹುದಾದ ಇನ್ನೊಂದು ಮಾದರಿಯ ಇತಿಹಾಸದ ಕುರಿತಾದ ವ್ಯಾಖ್ಯಾನಗಳು ಪ್ರಸ್ತುತ ಸಂದರ್ಭಕ್ಕೆ ತುಂಬಾ ಸಮಂಜಸವಾಗಿವೆ. ಮತ್ತು ಚರಿತ್ರೆ ಎಂದರೆ ನಿಜವಾಗಿ ನೋಡಬೇಕಿರುವುದು ಸಾಂಸ್ಕೃತಿಕ ಚರಿತ್ರೆಯೇ ನಿಜವಾದ ಚರಿತ್ರೆ ಎಂಬ ಅರ್ಥದಲ್ಲಿ ಮಾತ್ರ. ಆದರೆ ಸಾಂಪ್ರದಾಯಿಕ ಇತಿಹಾಸ ನಮಗೆ ಹೇಳಿಕೊಡುವುದೇನೆಂದರೆ ಯಾವಾಗಲೂ ಬಾಹ್ಯ ಪ್ರೇರಣೆಗಳಿಗಿಂತ ಆಂತರಿಕ ಪ್ರೇರಣೆಗಳು ಅತ್ಯಂತ ಬಲಿಷ್ಠವಾಗಿರುತ್ತವೆ. ಮತ್ತು ಬದಲಾವಣೆಗೆ ದಾರಿಮಾಡಿಕೊಡುತ್ತವೆ' ಎಂದು" (ಡಾ.ವೀರಣ್ಣ ದಂಡೆ, ದೇಸೀ ದೃಷ್ಟಿ, ಪು:೯) ಸಾಂಸ್ಕೃತಿಕ ಇತಿಹಾಸದಲ್ಲಿ ಈ ಯಾವ ಬಾಹ್ಯ ಮತ್ತು ಆಂತರಿಕ ಪ್ರೇರಣೆಗಳು ಕೆಲಸ ಮಾಡುವುದಿಲ್ಲ. ಜೊತೆಗೆ ಚರಿತ್ರೆಕಾರರ ಯಾವುದೇ ರೀತಿಯ ವಿಕ್ಷಿಪ್ತತೆಗಳೂ ಸಹಿತ ಗೋಚರಿಸುವುದಿಲ್ಲ. ಸಮುದಾಯಗಳೇ ಸದಾ ಇಲ್ಲಿ ತಮ್ಮ ಚರಿತ್ರೆಯನ್ನು ದಾಖಲಿಸಿಕೊಳ್ಳುತ್ತವೆ. ಪುನರ್ ರೂಪಿಸುತ್ತಿರುತ್ತವೆ. ಆದಾಗ್ಯೂ ಭಾರತೀಯ ಸಂಸ್ಕೃತಿಯ ಹೆಸರಲ್ಲಿ ರಾಮಾಯಣ ಮಹಾಭಾರತದಂಥ ಮಹಾಕಾವ್ಯಗಳನ್ನು ಮುಂದಿಟ್ಟು ಒಂದು ವರ್ಗದ ಸಾಂಸ್ಕೃತಿಕ ಇತಿಹಾಸವನ್ನು ರಾಷ್ಟ್ರೀಯ ಎನ್ನುವ ನೆಲೆಗಟ್ಟಿನಲ್ಲಿ ನೋಡುವ ಕ್ರಮಗಳಿಗೆ ಜನಪದ ಮಹಾಕಾವ್ಯಗಳು ಒಂದು ವಿರಾಮ ನೀಡಿರುವುದನ್ನು ನಾವು ಗಮನಿಸಿದ್ದೇವೆ.' (ಟಿ.ಪಿ.ವಿಜಯ್, ಜಾನಪದ ೧೯೯೬, ಪು:೧೩೯) ಇದು ಪುರೋಹಿತಷಾಹಿ

ವ್ಯವಸ್ಥೆಯ ಧೃವೀಕರಣಕ್ಕೆ ನೀಡಿರುವ ಬಹು ದೊಡ್ಡ ಪೆಟ್ಟು ಹೌದು. ಮಧ್ಯಕಾಲೀನ ಕರ್ನಾಟಕದ ಸಮಾಜದಲ್ಲಿರುವ ಎಲ್ಲಾ 'ಪ್ರಗತಿಪರ' ಎನ್ನಬಹುದಾದ ಘಟನೆಗಳು ಅಥವಾ ಸಂಗತಿಗಳು ಸಮುದಾಯ ಪರವಾಗಿದ್ದಂತಹವು, ಈ ಕಾರಣದಿಂದಾಗಿಯೇ ಸಾಂಸ್ಕೃತಿಕ ಚರಿತ್ರೆ 'ಜನಮುಖಿ ಚರಿತ್ರೆ' ಅಥವಾ 'ಸಮುದಾಯ ಚರಿತ್ರೆ'ಯಾಗಿ ರೂಪುಗೊಂಡಿರುವುದು, ಹಾಗೆನೇ ಸಾಂಪ್ರದಾಯಿಕ ಚರಿತ್ರೆಯಲ್ಲಿ ಈ ಸಾಂಸ್ಕೃತಿಕ ಚರಿತ್ರೆಯ ಭಾಗ ಎನ್ನಬಹುದಾದ ಪುರಾಣ ಮತ್ತಿತರ ಅಂಶಗಳ ರಚನೆಯನ್ನು ಕೂಡ ಚರಿತ್ರೆಯ ಭಾಗ ಎನ್ನಬಹುದಾದ ಪುರಾಣ ಮತ್ತಿತರ ಅಂಶಗಳ ರಚನೆಯನ್ನು ಕೂಡ ಕಾಣಬಹುದು. ಸಾಂಪ್ರದಾಯಿಕ ಇತಿಹಾಸ ಅಂದಾಕ್ಷಣ ಅಲ್ಲಿ ಕೇವಲ ಸಾಂಪ್ರದಾಯಿಕ ಆಕರಗಳು ಮಾತ್ರ ಇದ್ದವು ಎನ್ನಲಾಗದು. "ಶಾಸನಗಳ ರಚನೆಯ ಜೊತೆ ಜೊತೆಗೆ ಪುರಾಣಗಳ ರಚನೆಯೂ ಆಗಿರುವುದನ್ನು ಅಲಕ್ಷಿಸುವಂತಿಲ್ಲ. ಒಂದೆಡೆ ಬಹಿರಂಗವಾಗಿ ಸಾರ್ವಜನಿಕರಿಗೆಲ್ಲಾ ತಿಳಿಯುವಂತೆ ಓದು ಬರಹ ಬಲ್ಲವರ ಅರಿವಿಗಾಗಿ ಪುರಾಣಗಳು ರಚನೆಯಾಗುತ್ತಿದ್ದವು. ಇದೇ ಕಾಲಕ್ಕೆ ಚಾರಿತ್ರಿಕ ಕಾವ್ಯಗಳ ರಚನೆಯೂ ಆರಂಭವಾಯಿತು" (ಎಚ್.ಎಸ್.ಗೋಪಾಲರಾವ್, ಇತಿಹಾಸದ ಅಧ್ಯಯನ ಅಂದು-ಇಂದು, ಪು.೨೮). ಆದರೆ ಪುರಾಣ ಮತ್ತು ಇತಿಹಾಸದ ದಾಖಲೆಗಳ ಮತ್ತು ಅವುಗಳ ಸಂಬಂಧವನ್ನು ಕುರಿತು "ಇತಿಹಾಸ ಹಿಂದಿನ ಘಟನೆಗಳ ಹೊರ ದಾಖಲೆಯಾದರೆ ಪುರಾಣ ಅದೇ ಘಟನೆಗಳ ಒಳದಾಖಲೆಯಾಗಿದೆ. ಆದ್ದರಿಂದ ನನ್ನ ದೃಷ್ಟಿಯಲ್ಲಿ ಇತಿಹಾಸ ಪುರಾಣಗಳ ನಡುವೆ ದ್ವಂದ್ವಾತ್ಮಕ ಸಂಬಂಧವಿದೆ. (ಎಚ್.ಎಸ್.ಶಿವಪ್ರಕಾಶ್, ಮಹಾಚೈತ್ರ, ಪು:vii) ಎಂಬ ಅಭಿಪ್ರಾಯಗಳನ್ನು ನೋಡುತ್ತೇವೆ. ನಮಗೆ ಎರಡು ರೀತಿಯ ಪುರಾಣಗಳು ದಾಖಲಾಗಿರುವುದು ಕಂಡು ಬರುತ್ತವೆ. ಜನಪದ ಪುರಾಣಗಳು ಮತ್ತು ಶಿಷ್ಟ ಸಮುದಾಯ ಅಥವಾ ಓದುಗ ವರ್ಗಕ್ಕಾಗಿಯೇ ರಚಿತ ಗೊಂಡಿರುವ ಪುರಾಣಗಳು. ಈ ಶಿಷ್ಟ ಪುರಾಣಗಳು ಇತಿಹಾಸದ ಲಿಖಿತ ದಾಖಲೆಗಳಿಗೆ ಪೂರಕವಾದಂತಹ ಆಕರ ಸಾಮಗ್ರಿಯಾಗಿವೆಯೇ ಹೊರತು ಪರ್ಯಾಯವಾಗಲು ಸಾಧ್ಯವಿಲ್ಲ. ಆದರೆ ಜನಪದ ಪುರಾಣಗಳು ಇವಕ್ಕೆ ತೀರಾ ಭಿನ್ನವಲ್ಲದಿದ್ದರೂ ಭಿನ್ನವಾಗಿರುವ ರಚನೆಗಳಾಗಿರುವುದನ್ನು ಕಾಣುತ್ತೇವೆ. ಒಂದು ಸಂದರ್ಭಕ್ಕೆ ಈ ಜನಪದ ಪುರಾಣಗಳ ಮೇಲೂ ಪುರೋಹಿತಷಾಹಿಯ ಪ್ರಭಾವವಾಗಿರುವುದನ್ನು ಮರೆಯುವಂತಿಲ್ಲ. ಈ ಕಾರಣಗಳಿಗಾಗಿಯೇ ಸಾಂಸ್ಕೃತಿಕ ಚರಿತ್ರೆ ರಚನೆ ಸಂದರ್ಭಕ್ಕೆ ಪುರೋಹಿತಷಾಹಿಯ ಧೋರಣೆಗಳು, ನಿಲುವುಗಳೂ ಗೋಚರಿಸುವುದನ್ನು ಕಾಣಬಹುದು. ಆದರೆ "ಜನಪದರಲ್ಲಿ 'ಗತ'ವನ್ನು ಕಟ್ಟಿಕೊಳ್ಳುವ ಪ್ರಜ್ಞೆ ಚರಿತ್ರೆ, ಪುರಾಣ, ಐತಿಹ್ಯ, ಕಲ್ಪನೆಯ ವಿವರಗಳಲ್ಲಿ ಅಡ್ಡಾಡಿ ಬರುತ್ತದೆ. ಇವರ ಮಹಾಕಥನಗಳೂ ಸಹ ಇಸ್ವಿಗಳ ಸಮೇತ ಬರೆದ ಯಾವುದೊ ಒಂದು ಐತಿಹಾಸಿಕ ಘಟನೆಯೊದಿಗೆ ತನ್ನನ್ನು ಸಮೀಕರಿಸಿಕೊಂಡಂತೆ ಕಾಣುವುದಿಲ್ಲ"(Ramila Thapar, Exile and Kingdom, ಪು:೩) ಜನಪದ ಕಥನಗಳು ಮತ್ತು ಶಿಷ್ಟ ಚರಿತ್ರೆ ಎಂಬ ಎರಡು ಸಂಕಥನಗಳು ಭಿನ್ನ ಎರಡು ಸಮುದಾಯಗಳು ಗತವನ್ನು ಪರಿಭಾವಿಸುವ ಕ್ರಮಗಳು ಎಂದು ಭಾವಿಸುವುದಾರೆ ಇವುಗಳೆರಡೂ

ಪರಸ್ಪರ ವೈರುಧ್ಯದ ಅಂತರಂಗವನ್ನು ಹೊಂದಿರುತ್ತವೆ ಎಂದೇ ಅರ್ಥ. ಕಾರಣ "ಜನ ತಮ್ಮ ಸಾಂಸ್ಕೃತಿಕ ನಾಯಕರ ಬಗ್ಗೆ ಕಟ್ಟುವ 'ಚರಿತ್ರೆ'ಗಳಲ್ಲಿ ಅವರ ಸಮಕಾಲೀನ ಬಾಳಿನ ಅನೇಕ ಒತ್ತಡಗಳು ಭಾಗವಹಿಸುತ್ತವೆ. ಈ ಕಥೆಗಳು ಚರಿತ್ರೆಯ ಕಾಲ ಕಲ್ಪನೆಯನ್ನು ಮುರಿಯುತ್ತವೆ.") (ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪು:೧೪೪) ಬಹಳ ಸ್ಪಷ್ಟವಾಗಿ ಶಿಷ್ಟ ಚರಿತ್ರೆ ತನ್ನ ಕಾಲ, ಮತ್ತು ಲಿಖಿತ ಆಕರಗಳ ಮೂಲಕವೇ ಕಥನ ಕಟ್ಟಿಕೊಳ್ಳುವುದರಿಂದ ಜನಪದ ಕಥನಗಳಿಗೆ ಶಿಷ್ಟ ಚರಿತ್ರೆಯಲ್ಲಿ ಸ್ಥಾನ ಸಿಗುವುದಿಲ್ಲ. ಶಿಷ್ಟ "ಇತಿಹಾಸವು ಸಮಗ್ರವಾದುದು. ಅದು ನಿರಂತರತೆ ಮತ್ತು ಸಾರ್ವತ್ರಿಕತೆಗಳನ್ನೊಳಗೊಂಡು ಎತ್ತರ ಮತ್ತು ವಿಸ್ತಾರಗಳ ವ್ಯಾಪ್ತಿಯನ್ನುಳ್ಳದ್ದು; ಹಾಗೆಯೇ ಸಂಸ್ಕೃತಿಯೂ ಸಮಗ್ರವಾದುದು. ಮಾನವನು ಕಾಲಾಂತರಗಳಲ್ಲಿ ಒಂದೆಡೆ ನಿಂತು ಇದರಿಂದಾಚೆಗೆ ನನ್ನನ್ನು ಬಾಧಿಸುವುದೇನೂ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ, ಇತಿಹಾಸ ಮತ್ತು ಸಂಸ್ಕೃತಿಗಳ ಬೆಳವಣಿಗೆಯನ್ನು ಬದಲಾವಣೆಗಳು ನಿರ್ಧರಿಸುತ್ತವೆ. ಬದಲಾವಣೆಗಳು ಸಾಮಾನ್ಯವಾಗಿ ಜನಾಂಗೀಯ ಒತ್ತಡದ ಆಕಸ್ಮಿಕಗಳಾಗಿರುತ್ತವೆ. ಆದ್ದರಿಂದ ಸಂಸ್ಕೃತಿಯು ಸಾರ್ವತ್ರಿಕ ಪ್ರಯತ್ನದ ಫಲವಾದ ಸಾರ್ವತ್ರಿಕ ಪರಂಪರೆ ಎಂದೇ ತಿಳಿಯಬೇಕು. ಅನೇಕ ಭಾಗಗಳ ನಿರಂತರ ಸಮಾವೇಶಕ್ಕೆ ಕಾರಣವಾಗುತ್ತದೆ. ಈ ಭಾಗಗಳು ಸೇರಿ ಪೂರ್ಣತೆ ಪಡೆಯುವಂತೆ ಪೂರ್ಣತೆಯ ಒಂದು ಘಟಕವಾಗಿ ಎಲ್ಲಾ ನಿಂತರತೆಯು ವಿಶ್ವವನ್ನು ಆವರಿಸಿದೆ. ಆದರೆ ಇತಿಹಾಸವನ್ನು ವಾಸ್ತವತೆಯ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಬೇಕು. ಕಲ್ಪನೆಯೇ ವಾಸ್ತವವಾಗಲಾರದು. ಗತಕಾಲವನ್ನು ಆದರ್ಶೀಕರಿಸುವುದೇ ಇತಿಹಾಸಕಾರನ ಹಿಂದಿನ ಪ್ರವೃತ್ತಿ ಆಗಿತ್ತು. ಗತಕಾಲವನ್ನು ರಮ್ಯಗೊಳಿಸಲು ನೆನಪುಗಳನ್ನು ಬಸಿಕೊಳ್ಳಲಾಗುತ್ತಿತ್ತು. ಆದ್ದರಿಂದ ರಾಷ್ಟ್ರೀಯ ದೃಷ್ಟಿಕೋನಕ್ಕೆ ತಕ್ಕ ರಾಷ್ಟ್ರ ಘಟಕವೊಂದು ರೂಪುಗೊಳ್ಳುತ್ತಿತ್ತು. ಸಾಮಾನ್ಯವಾಗಿ ರಾಷ್ಟ್ರೀಯ ಗಡಿಗಳು ದರೋಡೆ ಮತ್ತು ಆಕ್ರಮಣಗಳ ಫಲ ಎನ್ನುವುದನ್ನು ಇತಿಹಾಸಕಾರರು ಅರ್ಥ ಮಾಡಿಕೊಂಡಿದ್ದಾರೆ. ರಾಷ್ಟ್ರೀಯತೆಯು ತನ್ನ ವಿಕೃತ ರೂಪದಲ್ಲಿ ಯುದ್ಧಗಳಿಗೆ ಆಸ್ಪದ ಕೊಟ್ಟಿದೆ." (ಎಚ್.ಎಸ್.ಗೋಪಾಲರಾವ್, ಇತಿಹಾಸದ ಅಧ್ಯಯನ; ಅಂದು-ಇಂದು, ಪು:೨೩) ಎನ್ನುವುದನ್ನು ಮರೆಯುವಂತಿಲ್ಲ. ಇತಿಹಾಸವೆಂದರೆ ಕೇವಲ ಯುದ್ಧಗಳ, ದಿಗ್ವಿಜಯಗಳ ದಾಖಲೆಯಷ್ಟೇ ಅಲ್ಲ. ಇತಿಹಾಸವು ಬದಲಾವಣೆಗಳ ಕ್ರಿಯೆ, ಆ ಬದಲಾವಣೆಯು ಉತ್ಪಾದನಾ ವಿಭಾಗದ ಬದಲಾವಣೆ, ನಿರಂತರ ಬದಲಾವಣೆಗೊಳ್ಳುವ ಸಮಾಜವನ್ನೂ ಅವಲಂಭಿಸಿರುತ್ತದೆ. ಸಮಾಜವು ಬದಲಾವಣೆಗೊಳ್ಳಲೇಬೇಕು. ಇಲ್ಲವಾದರೆ ಅದು ಮರಣಾವಸ್ಥೆಯನ್ನು ತಲುಪುತ್ತದೆ. ಮರಣಾವಸ್ಥೆಗೆ ತಲುಪಿದ ಸಮಾಜ ತನ್ನ ಗೋರಿಯನ್ನು ತಾನೇ ತೋಡಿಕೊಳ್ಳುತ್ತದೆ ಎನ್ನುವಲ್ಲಿ ಯಾವುದೇ ಅನುಮಾನವಿಲ್ಲ. ಅಂದರೆ, ಐತಿಹಾಸಿಕ ವ್ಯಾಖ್ಯಾನವು ಸಮಕಾಲೀನ ವಿಚಾರ ಧಾರೆಯಿಂದಲೆ ಉತ್ಪನ್ನವಾಗುತ್ತದೆ ಎಂಬುದು ಸತ್ಯ. ಆದರೆ "ಇತಿಹಾಸವೆಂಬುದು ಗತಿಸಿ ಹೋದ ಅಂತ್ಯರಹಿತವಾದ, ಕ್ಷೇತ್ರಗಳಲ್ಲಿ ಕಾಲಕಟ್ಟಿದ ಪ್ರಬಲವಾದ ಅನುಭವದ ಗೋಪುರ (Vanloon, Story of Mankind, page-4) ಎಂದು ವ್ಯಾನ್‌ಲೂನ್ ಅಭಿಪ್ರಾಯ

ಪಡುತ್ತಾನೆ. ಹಾಗೆ ನೋಡಿದರೆ ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಯ ತೀವ್ರ ಉತ್ಕರ್ಷವಾದ ಪ್ರಸಂಗಗಳನ್ನು ಬಿಟ್ಟರೆ ಅಖಂಡವಾದ ರಾಷ್ಟ್ರೀಯ ಪ್ರಜ್ಞೆ ಮೂಡಿದ್ದೇ ಕಡಿಮೆ. ಭಾರತವು ಇಂದಿಗೂ ಒಂದು ಅಖಂಡವಾದ, ಒಂದು ಧರ್ಮ-ಜಾತಿ-ವರ್ಗಗಳಿಂದ ಕೂಡಿದ ರಾಷ್ಟ್ರವಾಗಿಲ್ಲ ಎಂಬುದನ್ನೂ ಇತಿಹಾಸದ ಪಾಠಗಳಿಂದ, ಅನುಭವಗಳಿಂದ ತಿಳಿದ ವಿಚಾರವಾಗಿದೆ. ಇದನ್ನು ಚಾರಿತ್ರಿಕ ವಿರೋಧತೆ ಎಂದು ಕರೆಯಲು ಅಡ್ಡಿಯಿಲ್ಲ. ವರ್ತಮಾನದ ಮೇಲೆ ಒಂದು ಕಣ್ಣಿಟ್ಟುಕೊಂಡು ಗತವನ್ನು ಅಧ್ಯಯನ ಮಾಡುವುದು ಎಲ್ಲಾ ಪಾಪಗಳಿಗೂ ಕುತರ್ಕಗಳಿಗೆ ಮೂಲ ಎಂದು ಬಟರ್‌ಫೀಲ್ಡ್ ಅಭಿಪ್ರಾಯ ಪಡುತ್ತಾನೆ. ಹಾಗೆ ನೋಡಿದರೆ ಚರಿತ್ರೆಯಲ್ಲಿ 'ಸಂಖ್ಯೆ' ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಚಳುವಳಿಗೆ ನಾಯಕರಿಗಿಂತ ಅನುಯಾಯಿಗಳ ಸಂಖ್ಯೆಯೇ ಜಾಸ್ತಿಯಿರುವುದರಿಂದ ಹಾಗಾಗುತ್ತದೆ. ಅದಕ್ಕಾಗಿಯೇ ಇತಿಹಾಸದ ಆಕರಗಳ ವಿಚಾರದಲ್ಲಾಗಲೀ, ಇತಿಹಾಸರಚನೆಯ ಸಂದರ್ಭದ ಕಾಲಗಣನೆಯಲ್ಲಾಗಲೀ ಸಂಖ್ಯೆಗಳಿಗೆ ಪ್ರಮುಖವಾದ ಪಾತ್ರವಿದೆ. ಈ ಅಂಶವನ್ನು ಪರಿಗಣಿಸಿದರೆ ಆಡಳಿತಾತ್ಮಕ ಬದಲಾವಣೆಗಳು, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕವಾಗಿ ಬದಲಾವಣೆಗೊಂಡ ಅಂಶಗಳು, ಕೃಷಿ, ಕೈಗಾರಿಕೆ, ಸಾರಿಗೆ, ವಾಣಿಜ್ಯ, ಕಾನೂನು ಮುಂತಾದವುಗಳಲ್ಲಿ ಆದ ಬದಲಾವಣೆಗಳನ್ನು ಹಂತ ಹಂತವಾಗಿ ಗುರುತಿಸಿ ಅಧ್ಯಯನ ಮಾಡುವುದು ಇತಿಹಾಸದ ಪ್ರಮುಖ ವಸ್ತು ವಿಷಯ ಎಂಬಂತಾಗುತ್ತದೆ. ಒಂದು ಕಾಲದಲ್ಲಿ ಇತಿಹಾಸ ಮತ್ತು ಸಾಮಾಜಿಕ ಶಾಸ್ತ್ರ ಅಥವಾ ಸಮಾಜ ವಿಜ್ಞಾನಗಳ ಕುರಿತು ಗಂಭೀರವಾದ ಚರ್ಚೆಗಳು ಇದ್ದವು. ಆದರೆ ಈಗ ಆ ರೀತಿಯ ಯಾವುದೇ ಚರ್ಚೆಗಳು ನಡೆಯುತ್ತಿಲ್ಲ. ಇದಕ್ಕೆ ಕಾರಣ ಯಾವ ಒಂದು ಶಿಸ್ತೂ ಕೂಡ ಏಕ ಸ್ವಾಮ್ಯ ಪಡೆದಿಲ್ಲ ಎಂಬುದಾಗಿದೆ. "ಇತ್ತೀಚಿನ ದಶಕಗಳಲ್ಲಿ ಇತಿಹಾಸದ ಸೀಮೆಗಳು ವಿಸ್ತಾರಗೊಂಡಿರುವುದರಿಂದ ಇತಿಹಾಸದ ರಚನೆಗೆ ಸಂಬಂಧಿಸಿದಂತೆ ವಿಶಿಷ್ಟ ಕಾರ್ಯಗಳನ್ನು ತಾನೇ ನಿರ್ವಹಿಸುವುದು ಇತಿಹಾಸಕಾರನಿಗೆ ಸಾಧ್ಯವಾಗುತ್ತಿಲ್ಲ. ಮಿಗಿಲಾಗಿ, ಘಟನೆಗಳ ಅರ್ಥಪೂರ್ಣ ವಿಶ್ಲೇಷಣೆಗೆ ಸಮಾಜ ವಿಜ್ಞಾನಗಳ ನೆರವು ಪಡೆಯುವುದು ಇತಿಹಾಸಕಾರನಿಗೆ ತುಂಬಾ ಅಗತ್ಯವಾಗಿದೆ. ಚರಿತ್ರೆಯನ್ನು ಅರ್ಥೈಸಲು ಇಂದು ಹಲವಾರು ರೀತಿಯ ಹೊಸ ಹೊಸ ಆಯಾಮಗಳನ್ನು ಚರಿತ್ರೆಕಾರರು, ಚರಿತ್ರೆಯ ವಿದ್ಯಾರ್ಥಿಗಳು ಅನುಸರಿಸುತ್ತಿದ್ದಾರೆ. ಹಾಗಾಗಿಯೇ ಮಾನವಶಾಸ್ತ್ರ, ಪುರಾತತ್ವ, ಇತ್ಯಾದಿ ಜ್ಞಾನ ಶಿಸ್ತುಗಳನ್ನೊಳಗೊಂಡಂತೆ ಇತಿಹಾಸದ ದೃಷ್ಟಿಕೋನವನ್ನು ಬದಲಿಸಿಕೊಳ್ಳುತ್ತಿದ್ದಾನೆ. ಇದು ಮುಂದೆ ಇತಿಹಾಸ ದರ್ಶನ ಅಥವಾ ಚರಿತ್ರೆ ರಚನಾಶಾಸ್ತ್ರವಾಗಿ ಹೊರ ಬರಲು ಕಾರಣವಾಯಿತು. ಈ ಶಾಸ್ತ್ರ "ವಾಸ್ತವಿಕ ಘಟನೆಗಳು ಅವು ಸಂಭವಿಸಿದ ಕ್ರಮದಲ್ಲಿ ತೊಡಗಿ ಅವುಗಳ ಅರ್ಥ ಮತ್ತು ಉದ್ದೇಶಗಳನ್ನು ಕಂಡುಹಿಡಿಯಲು ಇತಿಹಾಸ ದರ್ಶನ ನೆರವಾಗುತ್ತದೆ. ಈ ಇತಿಹಾಸ ದರ್ಶನವನ್ನು ಹಲವು ವಿಧಗಳಲ್ಲಿ ಅರ್ಥೈಸಲಾಗಿದೆ. ಹತ್ತೊಂಬತ್ತನೆಯ ಶತಮಾನದ ಇತಿಹಾಸಕಾರರ ಪ್ರಕಾರ ಇತಿಹಾಸ ದರ್ಶನವೆಂದರೆ ವಾಸ್ತವಿಕ ಘಟನೆಗಳ ಅರ್ಥ ಮತ್ತು ಉದ್ದೇಶಗಳನ್ನು ಅವಲೋಕಿಸುವುದು. ಕೆಲವರ ಪ್ರಕಾರ, ಇತಿಹಾಸ ದರ್ಶನವು ಇತಿಹಾಸಕಾರರ ಚಿಂತನಾ

ಸ್ವರೂಪ ಮತ್ತು ಅವರು ಅನುಸರಿಸಿದ ವಿಧಾನದ ಲಕ್ಷಣಗಳನ್ನು ಸೂಚಿಸುವುದು. ಮತ್ತೆ ಕೆಲವರ ಪ್ರಕಾರ, ಪ್ರಮೇಯ ಮತ್ತು ನಿಯಮಗಳ ಒಂದು ಹೆಚ್ಚು ವ್ಯಾಪಕವಾದ ಹಾಗು ಅತಿ ಮಹಾಕಾಂಕ್ಷೆಯ ಪರಿಸ್ಥಿತಿಯೇ ಇತಿಹಾಸ ದರ್ಶನ." (ಎಚ್.ವಿ.ಶ್ರೀನಿವಾಸಮೂರ್ತಿ, ಚರಿತ್ರೆ ಸಂಶೋಧನೆ ಮತ್ತು ಚರಿತ್ರೆ ಲೇಖನ, ಪು:೭) ಮುಂದೆ ಈ ದರ್ಶನ ಬೇರೆ ಬೇರೆ ಸ್ವರೂಪವನ್ನು ಪಡೆಯುತ್ತಾ ಹೋಯಿತು. ಅದು ಪ್ರಗತಿಯ ಕಲ್ಪನೆಯ ಆಧಾರದ ಮೇಲೆ ಸಾಂಸ್ಕೃತಿಕತೆಯ ಆಧಾರದ ಮೇಲೆ ಚರಿತ್ರೆ ರಚನಾ ಶಾಸ್ತ್ರ ರೂಪುಗೊಳ್ಳುತ್ತಾ ಹೋಯಿತು. ಇಲ್ಲಿ ಮಾನವನಿಗೆ ಅಥವಾ ಮಾನವ ಸಮಾಜದ ಚಲನೆಯನ್ನು ಕೂಡ ಗ್ರಹಿಸಲಾಯಿತು. ಅದನ್ನು ವಿವರವಾಗಿ ದಾಖಲಿಸಲಾಯಿತಾದರೂ, ಅದು ಸಂಪೂರ್ಣವಾಗಿ ಸಮಾಜವನ್ನು ಗ್ರಹಿಸುವಲ್ಲಿ ವಿಫಲವಾಯಿತೆಂದೇ ಅರ್ಥ. ಕಾರಣ ಒಂದೊಂದು ಗ್ರಹಿಕೆಯಂತೆ ಸಮಾಜವು ಒಂದೊಂದು ಅಂಶದಲ್ಲಿ ಕೊನೆಗಾಣುತ್ತದೆ ಎಂಬ ನಂಬಿಕೆಯಿದೆ. ಉದಾಹರಣೆಗೆ ಚರ್ಚ್ ಇತಿಹಾಸಕಾರರ ಪ್ರಕಾರ ಸಮಾಜವು ಸ್ವರ್ಗದಲ್ಲಿ ಕೊನೆಗೊಂಡರೆ ಮಾರ್ಕ್ಸ್ ಸಿದ್ಧಾಂತ ಕೂಲಿಗಾರ ಸಮಾಜದ ಕಲ್ಪನೆಯನ್ನು ಮಂಡಿಸುತ್ತದೆ. ಹೀಗಾಗಿಯೇ ಇದು ಸಮಾಜವನ್ನು ಗ್ರಹಿಸುವಲ್ಲಿ ವಿಫಲವಾಯಿತೆನ್ನಬಹುದು.

"ಇತಿಹಾಸ ದರ್ಶನಗಳು ಒಂದು ನಿರ್ದಿಷ್ಟವಾದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಮಾನವನಿಂದ ರಚಿಸಲ್ಪಟ್ಟುದ್ದಾಗಿವೆ. ಆದ್ದರಿಂದ ಈ ಕ್ರಮಗಳು ವೈಯಕ್ತಿಕ ಅನುಭವಗಳು, ಕೆಲವು ಬಗೆಯ ಸಾಂಸ್ಕೃತಿಕ ಪಕ್ಷಪಾತಗಳು, ವ್ಯಕ್ತಿಗಳ ನಡುವಣ ಆಸಕ್ತಿಗಳು, ಅವರು ಜೀವಿಸುತ್ತಿದ್ದ ಸಮಾಜಗಳು ಮತ್ತು ಸಾಮಾಜಿಕ ಸಮಸ್ಯೆಗಳನ್ನು ಪ್ರತಿಬಿಂಬಿಸುತ್ತವೆ. (ಅದೇ, ಪು:೭)- ಆದರೆ ಆಧುನಿಕ ವಾಸ್ತವಿಕತಾ ವಿದ್ವಾಂಸರಿಗೆ ಈ ವಿಭಿನ್ನ ಪ್ರತಿಷ್ಠಿತ ಕ್ರಮದಲ್ಲಿ ವಿಶ್ವಾಸವಿಲ್ಲದಿರಬಹುದು. ಆದರೆ ಯಾವ ಒಂದು ಸ್ವಂತ ದರ್ಶನ ಅಥವಾ ಸಿದ್ಧಾಂತವಿಲ್ಲದೆ ಇತಿಹಾಸ ರಚನೆ ಸಾಧ್ಯವಾಗದು. ಯಾರೊಬ್ಬರ ಯೋಜನೆ ಅಥವಾ ಕ್ರಮವನ್ನು ವಿರೋಧಿಸುವುದು ಅಥವಾ ನಿರಾಕರಿಸುವುದು ವಾಸ್ತವತಾ ಸ್ವಭಾವದ ತೀರ್ಪಾಗಿದ್ದು, ಅದು ದರ್ಶನ ಅಥವಾ ತತ್ವದ ಪ್ರತಿಪಾದನೆಯಾಗುತ್ತದೆ. ಆದುದರಿಂದ ಇತಿಹಾಸಕಾರನಿಗೆ ಅಗತ್ಯವಾದುದು ಅಲ್ಪ ಪ್ರಮಾಣದ ದರ್ಶನವಲ್ಲ. ಆದರೆ ಅಧಿಕ ಪ್ರಮಾಣದ್ದು, ಇದು ಆತನು ಪ್ರಮಾಣವಿಲ್ಲದೆ ಅಂಗೀಕರಿಸುವ ಭಾವನೆಗಳು ಮತ್ತು ವಿಧಾನಗಳ ತೀವ್ರತರವಾದ ವಿಶ್ಲೇಷಣೆಗಳ ರೂಪವನ್ನು ತಳೆಯುತ್ತದೆ. ಅಂದರೆ ವಿಮರ್ಶಾತ್ಮಕ ಶಿಸ್ತೇ ಇತಿಹಾಸ ದರ್ಶನ (ಅದೇ, ಪು:೭) ಎಂದು ಕರೆಯಬಹುದಾಗಿದೆ. ಇದು ಚರಿತ್ರೆಯ ರಚನಾಕ್ರಮ ಅಥವಾ ಚರಿತ್ರೆ ರಚನಾಶಾಸ್ತ್ರದಲ್ಲೂ ವ್ಯಕ್ತವಾಗುತ್ತದೆ. ಈ ಕ್ರಮವು ಅನ್ವೇಷಣೆ, ವಿಮರ್ಶೆ, ಸಂಯೋಜನೆ ಮತ್ತು ನಿರೂಪಣೆ ಎಂಬ ನಾಲ್ಕು ಅಂಶಗಳ ಆಧಾರದ ಮೇಲೆ ನಿಂತಿರುವುದನ್ನು ಕಾಬಹುದು. "ಏಕೆಂದರೆ ಇತಿಹಾಸ ಲೇಖನ ಒಂದು ವಿಧದಲ್ಲಿ ಸಂಶೋಧನಾ ವಿಧಾನವೇ ಆಗಿದೆ. ಇತಿಹಾಸದ ಪರಿಕಲ್ಪನೆ ಕೇವಲ ನಿಂತ ನೀರಾಗಿರದೆ, ಕಾಲಕ್ಕನುಗುಣವಾಗಿ ಸಮಾಜದ ಆಶೋತ್ತರಗಳಿಗೆ ಸ್ಪಂದಿಸುತ್ತ ವಿಜ್ಞಾನ ಮತ್ತು ತಂತ್ರಜ್ಞಾನಗಳ ಮುನ್ನಡೆಯ ಲಾಭ ಪಡೆದು ತನ್ನ ವಿಧಾನಗಳನ್ನು ಪರಿಷ್ಕರಿಸುತ್ತಾ ಒಂದು ಶಿಸ್ತಾಗಿ

ಬೆಳೆದು ಬಂದಿದೆ ಎಂಬುದನ್ನು ಸೂಚಿಸುತ್ತದೆ. ಮಾತ್ರವಲ್ಲ ಈ ಸಮೀಕ್ಷೆ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕಾಲದ ಪ್ರಸಿದ್ಧ ಇತಿಹಾಸಕಾರರು ವ್ಯಕ್ತ ಪಡಿಸಿದ ಅಭಿಪ್ರಾಯಗಳು, ಅವುಗಳಿಗೆ ಅವರು ನೀಡುವ ಕಾರಣಗಳು ಮುಂತಾದವನ್ನು ಪರಿಚಯಿಸುತ್ತದೆ. ಇಲ್ಲಿ ನಮ್ಮ ವಿವರಣೆಗಿಂತ ಆ ಇತಿಹಾಸ ಲೇಖಕರ ಅರ್ಥ ವಿವರಣೆ ಮುಖ್ಯ. ಈ ದೃಷ್ಟಿಯಿಂದ ಇತಿಹಾಸ ಲೇಖನಗಳ ಅಧ್ಯಯನವನ್ನು ಕೆಲವರು ಸಂಕುಚಿತವಾದ, ಹೆಚ್ಚು ಆಸಕ್ತಿಯನ್ನು ಕೆರಳಿಸಿದ, ಮತ್ತು ಬುದ್ಧಿಯವರಿಗೆ ಮುದ ನೀಡುವ ಪ್ರಕ್ರಿಯೆ ಎಂದು ಪರಿಗಣಿಸಿದ್ದಾರೆ. ಇದು ಇತಿಹಾಸ ಅಧ್ಯಯನದ ಕೇವಲ ಒಂದು ಭಾಗವಾಗಿದ್ದು ಪ್ರಮುಖ ಐತಿಹಾಸಿಕ ಪಯತ್ನಕ್ಕೆ ಪೂರ್ವಭಾವಿಯಾಗಿದೆ" (ಅದೇ, ಪು:೧೨) ಎಂದು ಹೇಳಬಹುದು. ಇತಿಹಾಸ ಲೇಖನ ಪರಂಪರೆಯ ಪ್ರಾರಂಭವಾಗುವುದು ಮೊದಲಿಗೆ (ಯುರೋಪಿನವರ) ಗ್ರೀಕರಿಂದ. ಇತಿಹಾಸವನ್ನು ವಾಸ್ತವಿಕ ನೆಲೆಯಲ್ಲಿ ಮೊದಲ ಬಾರಿಗೆ ಅರ್ಥೈಸುವಲ್ಲಿ ಯಶಸ್ವಿಯಾದವರೆಂದರೆ ಗ್ರೀಕರೇ. ತತ್ವಜ್ಞಾನ, ಇತಿಹಾಸ ದಂತಹ ಪ್ರಮುಖ ವಿಷಯಗಳಿಗೆ ಜನ್ಮ ನೀಡಿದ ನೆಲ ಗ್ರೀಕ್. ಹಾಗಾಗಿಯೇ ಇಲ್ಲಿ ಇತಿಹಾಸ ಲೇಖನ ಶಾಸ್ತ್ರವು ಮೂಡಿಬರಲು ಸಾಧ್ಯವಾಯಿತು. ಥೂಸಿಡೈಡ್ಸ್, ಪ್ಲೇಟೋ ಇವರುಗಳ ಕಾಲದಲ್ಲಿ ಕ್ರಮೇಣ ಬೆಳೆದು ಬಂದು ಅರಿಸ್ಟಾಟಲ್‌ನ ಕಾಲಕ್ಕೆ ಅದು ಸಂಪೂರ್ಣತೆಯನ್ನು ಪಡೆದು ಒಂದು ಪರಂಪರೆಯು ರೋಮನ್ ಸಪ್ರದಾಯದ ಮೂಲಕ ತನ್ನ ಅಸ್ತಿತ್ವವನ್ನು ಪಡೆಯಿತು. ಅಲ್ಲಿ ಅದು ತನ್ನದೇ ಆದ ನೆಲೆಯಲ್ಲಿ ರೂಪುಗೊಳ್ಳತೊಡಗಿತು. ಇಲ್ಲಿ ಅದು ಸುಮಾರು ಐದು ತಲೆಮಾರುಗಳವರೆಗೆ ವಿಸ್ತರಣೆ ಪಡೆದಿದೆ. ಇದನ್ನು ವಿಸ್ತರಿಸಿದವರೆಂದರೆ ಗ್ರೀಕ್ ದೇಶದವರೇ ಆದ ಪೊಲಿಬಿಯಸ್ ಎಂಬುವವರು. ಇತಿಹಾಸವನ್ನು ಸಾರ್ವತ್ರಿಕ ವೌಲ್ಯಯುಳ್ಳ ಚಿಂತನೆಯ ರೂಪವೆಂಬ ಆಧುನಿಕ ಅರ್ಥದಲ್ಲಿ ಪರಿಭಾವಿಸಿದವರಲ್ಲಿ ಬಹುಶಃ ಅವರು ಮೊದಲಿಗರಿರಬೇಕೆನಿಸುತ್ತದೆ.

ಭಾರತೀಯ ಸಂದರ್ಭಕ್ಕೆ ಇತಿಹಾಸ ಲೇಖನ ಪರಂಪರೆಯ ಆರಂಭವಾಗುವುದು ವೈದಿಕ ಸಾಹಿತ್ಯದ ವಿವಿಧ ರೂಪಗಳಲ್ಲಿ, ಅವುಗಳಲ್ಲಿ ಅತಿ ಮುಖ್ಯವಾದವುಗಳೆಂದರೆ ಗಾಥಾಗಳು, ನಾರಶಂಸಿ, ಆಖ್ಯಾನ ಮತ್ತು ಪುರಾಣಗಳು. ಪುರೋಹಿತರಿಂದ ರಚಿಸಲ್ಪಟ್ಟು ಈ ಸಾಹಿತ್ಯದ ರೂಪಕಗಳು ವಿಭಿನ್ನ ಬುಡಕಟ್ಟುಗಳ ಒಳಸಂಚುಗಳನ್ನು ಒಳಗೊಂಡಿದ್ದವು. ವಾಚಿಕವಾಗಿದ್ದ ಈ ಸಾಹಿತ್ಯ ರೂಪಗಳನ್ನು ಸಭೆ ಅಥವಾ ಕೂಟಗಳಲ್ಲಿ ಹಾಡುತ್ತಿದ್ದರು, ನಂತರ ಅವುಗಳು ಲಿಖಿತ ಸಂಪ್ರದಾಯದಲ್ಲಿ ಸೇರ್ಪಡೆಯಾದವು. (ಎಚ್.ವಿ.ಶ್ರೀನಿವಾಸಮೂರ್ತಿ, ಚರಿತ್ರೆ ಸಂಶೋಧನೆ ಮತ್ತು ಚರಿತ್ರೆ ಲೇಖನ, ಪು:೧೮) ಇದರ ಪರಿಣಾಮವಾಗಿಯೇ ಮಹಾಕಾವ್ಯಗಳಲ್ಲಿ ಇತಿಹಾಸ ಮತ್ತು ಪುರಾಣ ಸಂಪ್ರದಾಯ ಮುಂದುವರಿದಿರುವುದನ್ನು ಕಾಣುತ್ತೇವೆ. ಕ್ರಿ.ಶ.ಏಳನೆಯ ಶತಮಾನದಲ್ಲಿ ಇತಿಹಾಸ, ಪುರಾಣ ರೂಪದ ಸಂಪ್ರದಾಯ ವಿಸ್ತರಣಾ ಪ್ರಕ್ರಿಯೆಗೆ ಒಳಗಾದುದು ಇದಕ್ಕೆ ಉದಾಹರಣೆ. ಅಲ್ಲದೆ ಸಣ್ಣ ಪುಟ್ಟ ಪ್ರಾದೇಶಿಕ ರಾಜ್ಯ ಹಾಗೂ ರಾಜರು ಕುರಿತಾದ ನಿಷ್ಠೆ ಆಯಾ ಪ್ರದೇಶದ ಐತಿಹಾಸಿಕ ಸಂಬಂಧಗಳಿಗೂ ಕಾರಣವಾಯಿತು. ಹೀಗೆ ಈ

ಸಂಪ್ರದಾಯವು ಬುಡಕಟ್ಟು ಮತ್ತು ಸ್ಥಳೀಯತೆಯಿಂದ ರಾಜ ಹಾಗೂ ಅವನ ಆಸ್ಥಾನದೆಡೆಗೆ ಸ್ಥಿತ್ಯಂತರಗೊಂಡಿತು. ಇಲ್ಲಿ ಆ ಸಂಪ್ರದಾಯದ ರಚನಾ ಜವಾಬ್ದಾರಿ ಹೊತ್ತವರು ಆಸ್ಥಾನ ಕವಿಗಳು. ಅವರು ರಾಜನಿಗೆ ನಿಷ್ಠೆ ತೋರಿಸುವುದು ಅನಿವಾರ್ಯವಾದುದರಿಂದ ವಾಸ್ತವಕ್ಕಿಂತ ನಾಟಕೀಯತೆಯೇ ಹೆಚ್ಚು ಹೆಚ್ಚು ಬೆಳೆಯುತ್ತಾ ಹೋಯಿತು. ಅಲ್ಲದೆ ಅವರುಗಳು ಸಂಪ್ರದಾಯ ನಿಷ್ಠರಾಗಿಯೂ ಉಳಿಯ ಬೇಕಾಯಿತು. ಸಾಂಪ್ರದಾಯಿಕ ಶೈಲಿಯಲ್ಲಿ ರಚಿತವಾದ ಈ ಕೃತಿಗಳೆಂದರೆ ಹರ್ಷಚರಿತ, ವಿಕ್ರಮಾಂಕದೇವ ಚರಿತ, ಕುಮಾರ ಪಾಲ ಚರಿತ ಮುಖ್ಯವಾದವುಗಳಾಗಿವೆ. ಮುಂದೆ ಕಲ್ಹಣನ ರಾಜ ತರಂಗಿಣಿ ಇವುಗಳಿಗಿಂತ ತುಂಬಾ ಆಧುನಿಕ, ಹಾಗೂ ಸುಧಾರಿಸಿದ ದೃಷ್ಟಿಕೋನದಲ್ಲಿ ರಚಿತಗೊಂಡಿತು. "ಆತನನ್ನು ಭಾರತೀಯ ಇತಿಹಾಸ ರಚನಾಕಾರರಲ್ಲಿ ಕಡೆಯವನು ಮತ್ತು ಆಧುನಿಕ ಇತಿಹಾಸಕಾರರಲ್ಲಿ ಪ್ರಥಮನೆಂದು ಪರಿಗಣಿಸಲಾಗಿದೆ. ಅವರು ಇತಿಹಾಸ ರಚನೆಯಲ್ಲಿ ತೋರಿದ ಉತ್ಸುಕತೆ ಇಪ್ಪತ್ತನೆಯ ಶತಮಾನದ ಇತಿಹಾಸಕಾರನಿಗೆ ಆದರ್ಶವಾಯಿತು. ಇತಿಹಾಸದ ಘಟನೆಗಳನ್ನು ವಕೀಲನಂತಲ್ಲದೆ ನ್ಯಾಯಾಧೀಶನಂತೆ ಪಕ್ಷಪಾತ ತೋರದೆ ಪರಿಶೀಲಿಸಬೇಕೆಂಬುದು ಅವರ ಬರವಣಿಗೆಯ ಪ್ರಮುಖ ಅಂಶವಾಗಿದೆ." (ಅದೇ:ಪು೯೧). ಆದರೆ ಮಧ್ಯಕಾಲೀನ ಭಾರತದಲ್ಲಿ ಇತಿಹಾಸದ ರಚನಾಕಾರ್ಯವನ್ನು ಮೊಘಲರ ಆಸ್ಥಾನದಲ್ಲಿದ್ದ ವಿದ್ವಾಂಸರು ಕೈಗೆತ್ತಿಕೊಂಡರು. ಈ ಸಂದರ್ಭದಲ್ಲಿ ರಚಿಸಲ್ಪಟ್ಟ ಇತಿಹಾಸವು ಒಂದು ಹೊಸ ಸಂಚಲನವನ್ನು ಮೂಡಿಸಿದ್ದಲ್ಲದೆ ಕೆಲವು ಸಂಪ್ರದಾಯಗಳನ್ನು ಅದರಲ್ಲೂ ಪೂರ್ವ ಸಂಪ್ರದಾಯವನ್ನು ಉತ್ತಮ ಪಡಿಸುವಂತಹ ಹೊಸ ಹೊಸ ಮೂಲ ತತ್ವಗಳನ್ನು ಅಳವಡಿಸಿಕೊಳ್ಳುತ್ತಾ ಹೋಯಿತು "ಈ ಯುಗದಲ್ಲಿ ನಮಗೆ ಕಂಡು ಬರುವುದು ಜೀವನ ಚರಿತ್ರೆಗಳು, ರಾಜಕೀಯ ವಿಷಯಗಳನ್ನೊಳಗೊಂಡ ಕೃತಿಗಳು, ಸಾರ್ವತ್ರಿಕ ಇತಿಹಾಸಗಳು, ಸ್ಥಳೀಯ ಹಾಗೂ ಪ್ರಾದೇಶಿಕ ಕಾಲ ಕ್ರಮಾಗತ ದಾಖಲೆಗಳು, ಮಧ್ಯಕಾಲೀನ ಇತಿಹಾಸ ಲೇಖನ ಪರಂಪರೆಯು ಪ್ರಾಚೀನ ಭಾರತೀಯ ನಿರರ್ಥಕತೆಗಳು ಮತ್ತು ಆಧುನಿಕ ಭಾರತೀಯ ಪರಿಪೂರ್ಣ ಇತಿಹಾಸಗಳ ನಡುವೆ ಅರ್ಧಮಾರ್ಗದ ಮನೆಯಿದ್ದಂತೆ." (ಅದೇ ಪು:೯೯) ಆಧುನಿಕ ಭಾರತದ ಇತಿಹಾಸ ಲೇಖನ ಪರಂಪರೆಯು ಯುರೋಪಿನ ಲೇಖನ ಪರಂಪರೆಯಿಂದ ತುಂಬಾ ಪ್ರಭಾವಕ್ಕೊಳಗಾಯಿತಾದರೂ ಅದರಲ್ಲಿ ಹಲವಾರು ಉತ್ತಮ ಅಂಶಗಳನ್ನು ಗ್ರಹಿಸುವಲ್ಲಿ ಅದು ಸಂಪೂರ್ಣವಾಗಿ ವಿಫಲವಾಯಿತು. ಹಾಗೆ ನೋಡಿದರೆ ಮಾರ್ಕ್ಸ್ ಸಿದ್ಧಾಂತದ ಹಿನ್ನೆಲೆಯಲ್ಲಿ ಇತಿಹಾಸ ರಚಿಸಲ್ಪಟ್ಟ ಸಂದರ್ಭ ಭಾರತಕ್ಕೊಂದು ಹೊಸ ದಿಕ್ಕನ್ನು ತೋರಿಸಿದೆ ಎಂದರೆ ಬಹುಶಃ ತಪ್ಪಲ್ಲ. ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಭಾರತೀಯ ಸಂದರ್ಭಕ್ಕೆ ಇತಿಹಾಸವನ್ನು ರಚಿಸಿದವರೆಂದರೆ ಡಿ.ಡಿ.ಕೋಸಾಂಬಿ ಮೊದಲಿಗರು. ಇವರು ಒಂದು ತತ್ವ ಮತ್ತು ಸಿದ್ಧಾಂತ ಇತಿಹಾಸ ರಚನೆಗೆ ಬಹಳ ಮುಖ್ಯ ಎಂಬುದನ್ನು ಈ ಮೂಲಕ ತೋರಿಸಿಕೊಟ್ಟಿದ್ದಾರೆ. ಇವರ ನಂತರಕ್ಕೆ ರೋಮಿಲಾಥಾಪರ್, ಇರ್ಫಾನ್ ಹಬೀಬ್, ಷೇಕ್ ಅಲಿ, ಮುಂತಾದವರು ಪ್ರಮುಖರು. ಇವರೂ ಸಹಿತ

ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿಯೇ ಗ್ರಹಿಸುವ ಪ್ರಯತ್ನ ಮಾಡಿದ್ದಾರೆ. ಎಡ ಪಂಥೀಯ ಪಂಥವೆಂದು ಇದನ್ನು ಕರೆಯುತ್ತಾರೆ. ಸಾಮ್ರಾಜ್ಯಷಾಹಿ ಪಂಥಕ್ಕಿಂತ ವಿರುದ್ಧ ದಿಕ್ಕಿನಲ್ಲಿ ಯೋಚಿಸುವ ಈ ಪಂಥ ರಾಷ್ಟ್ರೀಯತೆಯನ್ನು ಮತ್ತು ಅದರ ವ್ಯಕ್ತ ರೂಪವಾದ ರಾಷ್ಟ್ರೀಯ ಚಳುವಳಿಯನ್ನು ವಸಾಹತುಷಾಹಿಯ ಚೌಕಟ್ಟಿನೊಳಗೆಯೇ ಅಧ್ಯಯನಿಸುತ್ತದೆ. ಭಾರತೀಯ ಜನತೆ ಬ್ರಿಟೀಷ್ ಅಧಿಪತ್ಯದೊಂದಿಗೆ ಇದ್ದ ಪ್ರಾಥಮಿಕ ದ್ವಂದ್ವವನ್ನು ತನ್ನ ಸಂವಾದದ ಕೇಂದ್ರವನ್ನಾಗಿರಿಸಿಕೊಂಡಿದೆ. ಹಾಗೆಯೇ ಭಾರತೀಯ ಸಮಾಜ ಒಂದು ದೇಶವಾಗುತ್ತಿದ್ದ ಕ್ರಿಯೆಯನ್ನು ಮತ್ತು ಭಾರತೀಯ ಸಮಾಜದೊಳಗಿರುವ ಆಂತರಿಕ ವೈರುಧ್ಯ, ಸಂಘರ್ಷಗಳನ್ನು ಕುರಿತು ಪೂರ್ಣವಾದ ತಿಳುವಳಿಕೆಯನ್ನು ಹೊಂದಿದೆ. ಮಾರ್ಕ್ಸಿಸ್ಟ ಪಂಥ ರಾಷ್ಟ್ರೀಯ ಚಳುವಳಿ ಬೂರ್ಜ್ವ ವರ್ಗದ ಯಜಮಾನಿಕೆಯಲ್ಲಿತ್ತು ಎನ್ನುವ ಖಚಿತವಾದ ನಿಲುವಿನಲ್ಲಿದೆಯಲ್ಲದೆ, ರಾಷ್ಟ್ರೀಯ ಚಳುವಳಿಯನ್ನು ಕಮ್ಯೂನಿಸ್ಟ್ ಪಾರ್ಟಿಯ ಕಾರ್ಯಕ್ರಮಗಳ ಹಂದರದ ಮೇಲೆ ಚಿತ್ರಿಸುತ್ತದೆ." (ಡಾ.ಅಶ್ವತ್ಥನಾರಾಯಣ, ಚರಿತ್ರೆ ರಚನಾ ಶಾಸ್ತ್ರದ ನೆಲೆಯಲ್ಲಿ ಸ್ಥಳೀಯ ಚರಿತ್ರೆ ಅಧ್ಯಯನಗಳು,ಪು: ೭೫) ಜೊತೆಗೆ ಈ ಪಂಥದಲ್ಲಿ ರಾಷ್ಟ್ರೀಯತೆಯನ್ನು ಕುರಿತಂತೆ ಸಾಮಾನ್ಯ ಜನತೆಯ ಹೋರಾಟ, ಪ್ರತಿಭಟನೆಗಳ ಕುರಿತಾಗಿ ಒಂದು ನ್ಯಾಯಯುತವಾದ ಸ್ಥಾನವಿದೆ. ಆದರೂ ಈ ಗುಂಪು ತನ್ನ ಚರ್ಚೆ ಬರಹಗಳಲ್ಲಿ ವರ್ಗ ಕಲಹ ವೈರುಧ್ಯಗಳಂತಹ ಪರಿಭಾಷೆಗಳನ್ನು ಯಾಂತ್ರಿಕವಾಗಿ ಬಳಸುವ ಅಪಾಯವಿದೆ. ಈ ಕಾರಣದಿಂದಲೇ ಈ ಪಂಥ ವಸಾಹತುಷಾಹಿ ವಿರುದ್ಧದ ಹೋರಾಟಗಳು ವ್ಯಕ್ತಗೊಂಡ ಬೇರೆ ಬೇರೆ ರೂಪಗಳನ್ನು ಗುರುತಿಸುವ ಸಹನೆಯನ್ನು ಹೊಂದಿಲ್ಲ. ಅಲ್ಲದೆ ವರ್ಗದೊಳಗೆ ವರ್ಗದ ಯಜಮಾನಿಕೆಗಾಗಿ ವಿವಿಧ ಸಮುದಾಯಗಳ ಸೆಣಸಾಟಗಳು ವರ್ಗ, ವರ್ಗಗಳ ನಡುವಿನ ಕಲಹದ ಪರಿಕಲ್ಪನೆಯೆದುರು ಅಮುಖ್ಯವೆನಿಸುತ್ತವೆ." (ಡಾ.ಅಶ್ವತ್ಥನಾರಾಯಣ, ಚರಿತ್ರೆ ರಚನಾಶಾಸ್ತ್ರದ ನೆಲೆಯಲ್ಲಿ ಸ್ಥಳೀಯ ಚರಿತ್ರೆ ಅಧ್ಯಯನಗಳು, ಪು:೭೫). ಇದೊಂದೇ ಕಾರಣಕ್ಕಾಗಿಯೇ ಮಾರ್ಕ್ಸ್‌ವಾದಿ ಪಂಥದ ವಿರೋಧ ಮಾಡುವುದಾಗಲೀ ಅಥವಾ ಇಡೀ ಪರಿಕಲ್ಪನೆಯೇ ವಿರೋಧಾಭಾಸಗಳಿಂದ ಕೂಡಿದೆ ಎಂಬ ಅಭಿಪ್ರಾಯ ನಿಜಕ್ಕೂ ಒಪ್ಪುವಂತಹದ್ದಲ್ಲ. ವಸಾಹತುಷಾಹಿ ನೀತಿಯ ಪರಿಣಾಮವಾಗಿ ಇಡೀ ಜಾಗತಿಕ ಸಮುದಾಯವೇ ತಲ್ಲಣಗೊಂಡಂತಹ ಸ್ಥಿತಿಯಲ್ಲಿ ಮಾರ್ಕ್ಸ್‌ವಾದಿ ಚಿಂತನೆ ಸಮುದಾಯಗಳಿಗೆ ಒಂದು ಹೊಸ ಚೈತನ್ಯವನ್ನು ನೀಡಿದೆ. ಹೊಸ ಹೊಸ ಪರಿಕಲ್ಪನೆಗಳನ್ನೂ ನೀಡಿದೆ. ಆರ್ಥಿಕ ಸ್ಥಿತ್ಯಂತರಗಳೇ ಸಮಾಜವನ್ನು ರೂಪಿಸುವ, ಮತ್ತು ಇಡೀ ಸಮಾಜವನ್ನು ನಿಯಂತ್ರಿಸುವ ಅಪಾಯವನ್ನು ಮಾರ್ಕ್ಸ್‌ವಾದಿ ಚಿಂತನೆಯ ಇತಿಹಾಸ ನಮಗೆ ತೋರಿಸಿ ಕೊಟ್ಟಿದೆ. ಇದು 'ರಾಷ್ಟ್ರೀಯವಾದಿ' ಪಂಥಕ್ಕಿಂತ ತುಂಬಾ ಭಿನ್ನ ವೆಂಬುದು ಈಗಾಗಲೇ ಸಾಬೀತಾಗಿರುವುದರಿಂದ ಇದನ್ನು ಒಪ್ಪುವುದು ಅನಿವಾರ್ಯವೂ ಅವಶ್ಯಕವೂ ಆಗಿದೆ. ಈ ರಾಷ್ಟ್ರೀಯ ಪಂಥ ಬಂದಿದ್ದು ಪಾಶ್ಚಿಮಾತ್ಯ ಮಾದರಿಯಿಂದ, ಅದರಲ್ಲೂ ವಸಾಹತುಷಾಹಿ ಧೋರಣೆಯ ಮೂಲಕ. ರಾಷ್ಟ್ರೀಯ ಪಂಥ, ವಸಾಹತುಷಾಹಿಗೂ ಮತ್ತು ಸಾಮಾನ್ಯ ಜನತೆಯ ನಡುವೆ ಇದ್ದ ಪ್ರಾಥಮಿಕ

ವೈರುಧ್ಯವನ್ನು ಗುರುತಿಸಿ ಅದನ್ನು ಪರಿಗಣಿಸುತ್ತದೆ. "ಈ ಪಂಥದ ವಾದ ರಾಷ್ಟ್ರೀಯ ಚಳುವಳಿ ಇಂಗ್ಲೀಷ್ ವಿದ್ಯಾಭ್ಯಾಸದ ಫಲವಾಗಿ ಪರಿಚಯವಾದ ಉದಾರವಾದ ದಿಂದ ಪ್ರಭಾವಿತರಾದ ವಿದ್ಯಾವಂತ ವರ್ಗ ಹೋರಾಟದ ಫಲವೆನ್ನುತ್ತದೆ. ಈ ವಿದ್ಯಾವಂತರು ಇಂಗ್ಲೀಷ್ ಭಾಷೆಯನ್ನರಿತ ಮಧ್ಯಮ ವರ್ಗಕ್ಕೆ ಸೇರಿದ್ದು ಪಶ್ಚಿಮ ದೇಶಗಳಿಂದ ರಾಷ್ಟ್ರೀಯತೆ ಪ್ರಜಾ ಶಕ್ತಿ, ಇತ್ಯಾದಿಗಳನ್ನು ಎರವಲು ಪಡೆದರು. ಸಾಮಾನ್ಯ ಜನತೆಗೆ ಅವರ ಮೇಲೆ ಪರಕೀಯರು ಹೊರೆಸಿದ್ದ ದಾಸ್ಯದ ಅರಿವಿಲ್ಲದಿದ್ದುದರಿಂದ ಗಣ್ಯವಕ್ತಿಗಳೇ ಒಟ್ಟು ಭಾರತೀಯ ಸಮಾಜದ ವಿಮೋಚನೆಗಾಗಿ ರಾಷ್ಟ್ರೀಯ ಆಂದೋಳನವನ್ನು ಸಂಘಟಿಸಿದರೆಂಬುದು ಸಹ ರಾಷ್ಟ್ರೀಯ ಪಂಥದ ಅಭಿಪ್ರಾಯವಾಗಿದೆ. ಜೊತೆಗೆ ಈ ಪಂಥ ಗಣ್ಯ ವ್ಯಕ್ತಿಗಳನ್ನು ಮತ್ತು ಅವರ ಚಲನೆಗಳನ್ನು ವಸಾಹತುಷಾಹಿ ಆಳ್ವಿಕೆ ತನ್ನ ಆಡಳಿತ ವ್ಯವಸ್ಥೆಯ ಅಂಗಗಳಾದ ಕಂದಾಯ ನ್ಯಾಯಾಂಗ ಮತ್ತು ಶಿಕ್ಷಣಗಳ ಮೂಲಕ ರೂಪಿಸಿದ ಅಖಿಲ ಭಾರತೀಯ ವೇದಿಕೆಯ ಮೇಲೆ ಗುರುತಿಸುತ್ತದೆ ಎಂಬುದು ಮತ್ತೊಂದುವಿಶೇಷ." (ಡಾ.ಅಶ್ವತ್ಥನಾರಾಯಣ, ಚರಿತ್ರೆ ರಚನಾಶಾಸ್ತ್ರದ ನೆಲೆಯಲ್ಲಿ ಸ್ಥಳೀಯ ಚರಿತ್ರೆ ಅಧ್ಯಯನಗಳು, ಪು:೭೪) ಆದರೆ ರಾಷ್ಟ್ರೀತೆ ಮತ್ತು ರಾಷ್ಟ್ರೀಯ ಆಂದೋಲನಗಳಿಗೆ ಸಂಬಂಧಿಸಿದಂತೆ ಈ ಪಂಥವು ಮುಖ್ಯವಾಗಿ ಭಾರತೀಯ ಸಮಾಜದ ಆಂತರಿಕ ದ್ವಂದ್ವಗಳನ್ನು ವೈರುಧ್ಯಗಳನ್ನು ಗಮನಿಸಲಿಲ್ಲ. ಅಲ್ಲದೆ ಪ್ರಾದೇಶಿಕತೆ, ಜಾತಿ, ವರ್ಗಗಳಂತಹ ಪ್ರಭಾವಿ ಸಾಂಸ್ಕೃತಿಕ ಮತ್ತು ಸಾಮಾಜಿಕ ಘಟಕಗಳ ಬಗ್ಗೆ ಯಾವುದೇ ರೀತಿಯ ಖಚಿತ ಮತ್ತು ತಾತ್ವಿಕವೆನ್ನಬಹುದಾದ ಧೋರಣೆಗಳನ್ನು ತಾಳುವಲ್ಲಿ ಈ ಪಂಥವು ವಿಫಲವಾಯಿತು. ಇದು ಈ ಪಂಥದ ಬಹುದೊಡ್ಡ ಸೋಲು ಎಂದೇ ಹೇಳಬೇಕು. ಕಾರಣ ಈ ಮೊದಲೇ ಹೇಳಿದಂತೆ ಈ ಪಂಥವು ವಸಾಹತುಷಾಹಿ ಧೋರಣೆಯ ಇಂಗ್ಲೀಷ್ ಶಿಕ್ಷಣ ಪಡೆದ ಭಾರತೀಯರಿಂದ ರೂಪುಗೊಂಡಿದ್ದು.

ಈ ಪಂಥಗಳನ್ನೆಲ್ಲ ಗಮನಿಸಿದರೆ "ರಾಷ್ಟ್ರೀಯತೆ, ರಾಷ್ಟ್ರೀಯ ಆಂದೋಳನವನ್ನೆಲ್ಲ ಮೇಲ್ಮಟ್ಟದಲ್ಲೇ ಕೇಂದ್ರೀಕರಿಸುವ ಮನೋಭಾವವೇ ಇಲ್ಲಿಯವರೆಗಿನ ರಾಷ್ಟ್ರೀಯ ಇತಿಹಾಸ ರಚನೆಯ ಮುಖ್ಯನಿಲುವಾಗಿದೆ. ಈ ಕೇಂದ್ರೀಕೃತ ನಿಲುವು ಪ್ರಾದೇಶಿಕ ಮತ್ತು ಸ್ಥಳೀಯ ಮಟ್ಟಗಳಲ್ಲಿ ಸಾಂಸ್ಕೃತಿಕ ಅಂಶಗಳನ್ನು ಬಳಸಿಕೊಂಡು ಅಭಿವ್ಯಕ್ತಿಗೊಂಡ ವಸಾಹತುಷಾಹಿ ವಿರೋಧಿ ಭಾವನೆಗಳನ್ನು ಗಮನಿಸುವಷ್ಟು ಶಕ್ತವಾಗಿಲ್ಲ. ಇದರ ಪರಿಣಾಮವಾಗಿಯೇ ಇಲ್ಲಿಯವರೆಗಿನ ಬಹುತೇಕ ಅಧ್ಯಯನಗಳು ಅಖಿಲ ಭಾರತ ಮಟ್ಟದಲ್ಲಿ ಮೆಟ್ರೊಪಾಲಿಟನ್ ನೆಲೆಯ ಮಧ್ಯಮವರ್ಗದ ಪರಿಭಾಷೆಯಲ್ಲಿ ಹೊರಹೊಮ್ಮಿದ ಪ್ರಜ್ಞೆಯನ್ನು ಮಾತ್ರವೇ ತಮ್ಮ ಬರವಣಿಗೆಯಲ್ಲಿ ದಾಖಲಿಸಿವೆ. (ಅದೇ, ಪು:೭೫), ೧೯೩೦ರ ನಂತರಕ್ಕೆ ಈ ನಿಲುವು, ಧೋರಣೆಗಳು ಕ್ರಮೇಣ ಬದಲಾಗುತ್ತಾ ಹೋಯಿತು. ಕಾರಣ ದೇಶೀಯ ಸಂಸ್ಥಾನಗಳು ೧೯೩೦ರ ನಂತರಕ್ಕೆ ಅಂದರೆ ಅಖಿಲ ಭಾರತೀಯ ಕಾಂಗ್ರೇಸ್ ಅಧಿಕೃತವಾಗಿ ಸಂಸ್ಥಾನಗಳೊಳಕ್ಕೆ ಪ್ರವೇಶ ಪಡೆದ ನಂತರಕ್ಕೆ; ಒಂದು ರಾಷ್ಟ್ರೀಯವಾದಿ ನಿಲುವನ್ನು ತಳೆದು ರಾಷ್ಟ್ರೀಯ ಹೋರಾಟವನ್ನು ಆರಂಭಿಸಿದವು. ಆಧುನಿಕ ಭಾರತೀಯ

ಇತಿಹಾಸ ರಚನೆಯ ಈ ಸಂದರ್ಭಕ್ಕೆ ಹಲವಾರು ಕೃತಿಗಳು ಹೊರಬಂದವು. ಆದಾಗ್ಯೂ ಸಹ ಸ್ಥಳೀಯ ಹೋರಾಟ, ಮತ್ತು ಸ್ಥಳೀಯತೆಗಳಿಗೆ ಇತಿಹಾಸ ಶಾಸ್ತ್ರ ರಚನೆಯಲ್ಲಿ ಯಾವುದೇ ನೀತಿಯ ಅಧಿಕೃತವೆನ್ನುವ ಒಂದು ನೆಲೆ ಸಿಕ್ಕಿಲ್ಲ. "ಪ್ರಾದೇಶಿಕ ಮತ್ತು ಸ್ಥಳೀಯ ಮಟ್ಟದಲ್ಲೇಳುವ ಸಾಮಾಜಿಕ, ರಾಜಕೀಯ, ಭಾಷೆ, ಇನ್ನಿತರ ಸಾಂಸ್ಕೃತಿಕ ಪ್ರತಿರೋಧಗಳು ತನ್ನ ಹಿತಾಸಕ್ತಿಗೆ ವಿರುದ್ಧವಾಗಿವೆ ಎನ್ನುವುದು ಬ್ರಿಟೀಷ್ ಸಾಮ್ರಾಜ್ಯಷಾಹಿಯ ಖಚಿತ ನಂಬಿಕೆಯಾಗಿತ್ತು." (ಅದೇ, ಪು:೮೩) ಈ ನಂಬಿಕೆ ಸಹಜವಾದದ್ದೇ ಆಗಿದೆ. ಕಾರಣ ಗೆದ್ದ ರಾಜ್ಯವೊಂದು ಸೋತ ರಾಜ್ಯದ ಆರ್ಥಿಕ, ಸಾಮಾಜಿಕ, ಅಂಶಗಳನ್ನು ತನಗೆ ಬೇಕಾದ ರೀತಿಯಲ್ಲಿ ಮಾರ್ಪಡಿಸಿಕೊಳ್ಳಲು ಹವಣಿಸುವುದು ಅಥವಾ ಮಾರ್ಪಡಿಸಿಕೊಳ್ಳುವುದು ಸಹಜವೇ ಆಗಿದೆ. ಆದರೆ ಬ್ರಿಟಿಷ್ ಸಾಮ್ರಾಜ್ಯಷಾಹಿಯ ಹಿಡಿತದಿಂದ ಮುಕ್ತವಾದ ನಂತರವೂ ಕೂಡ ಸಾಮಾಜಿಕ, ಆರ್ಥಿಕ, ಅಸಮಾನತೆಗಳು ಹೋಗಲಾಡಿಸಲು ಸಾಧ್ಯವಾಗಲಿಲ್ಲ. ಇದಕ್ಕೆ ಬಹುಮುಖ್ಯ ಕಾರಣ ಭಾರತೀಯವೆನ್ನುವ ಯಾವ ಸಾಂಸ್ಕೃತಿಕ ಅಂಶವೂ ತನ್ನದೇ ಆದ ಸ್ವಂತಿಕೆಯನ್ನು ಉಳಿಸಿಕೊಳ್ಳದೇ ಎಲ್ಲವೂ ಸಾಮ್ರಾಜ್ಯಷಾಹಿಯ ಪಡಿಯಚ್ಚಂತಾಗಿ ಹೋಗಿತ್ತು. ಐತಿಹಾಸಿಕ ಪ್ರಜ್ಞೆ, ಪ್ರಾದೇಶಿಕ, ಸ್ಥಳೀಯ, ಭಾಷೆ, ಆಚಾರ, ವಿಚಾರಗಳೆಲ್ಲವೂ ಸಾಮ್ರಾಜ್ಯಷಾಹಿಗಳ ಪ್ರತಿರೂಪವಾಗಿ ಹೋಗಿದ್ದೇ ಇದಕ್ಕೆ ಕಾರಣ.

ಇತಿಹಾಸ ಮತ್ತು ಚರಿತ್ರೆ ಲೇಖನ ಪರಂಪರೆಗೆ ಸಂಬಂಧಿಸಿದಂತೆ ಇಲ್ಲಿಯೂ ಕೂಡ ಮೌಖಿಕತೆಗಿಂತ ಲಿಖಿತತೆಗೇ ಹೆಚ್ಚು ಮಾನ್ಯತೆಯಿದೆ. ಅಂದರೆ, ಲಿಖಿತ ಪರಂಪರೆಯೇ ತುಂಬಾ ಖಚಿತ ಮತ್ತು ಬೆಲೆಯುಳ್ಳದ್ದಾಗಿದೆ. ಆದರೆ ಅತಿಯಾದ ಈ ಪೂಜನೀಯ ಭಾವನೆಯೇ ಲಿಖಿತ ಪರಂಪರೆಯನ್ನು ತಪ್ಪು ಮಾರ್ಗದಲ್ಲಿ ನಡೆಸುತ್ತಿದೆ ಎನ್ನುವಲ್ಲಿ ಅನುಮಾನವೇ ಇಲ್ಲ. ಯಾವುದೋ ಒಂದು ಕಾರಣಕ್ಕೆ ಲಿಖಿತ ಮತ್ತು ಮೌಖಿಕ ಪರಂಪರೆಗಳನ್ನು ಇಬ್ಭಾಗ ಮಾಡುವಲ್ಲಿ ಯಾವುದೇ ಅನಿವಾರ್ಯತೆಗಳಾಗಲೀ ಅಥವಾ ಅವಶ್ಯಕತೆಗಳಾಗಲೀ ಇಲ್ಲ. ಕೆಲವೊಮ್ಮೆ ಲಿಖಿತ ಪರಂಪರೆಯು ಮೌಖಿಕ ಪರಂಪರೆಯ ಹಲವಾರು ಅಂಶಗಳನ್ನು ತನ್ನ ಮೂಲ ಬರವಣಿಗೆಯ ಸಾಧನಗಳನ್ನಾಗಿ ಮಾಡಿಕೊಂಡ ಅನೇಕ ಉದಾಹರಣೆಗಳಿವೆ. ಮೌಖಿಕ ಪರಂಪರೆಯು ಲಿಖಿತ ಪರಂಪರೆಯ ಬಹುಮುಖ್ಯ ಮೂಲ ಲಕ್ಷಣವಾಗಿದೆ. ಹಾಗಾಗಿ ಮೌಖಿಕತೆಯ ಕುರಿತಾಗಿ ಖಚಿತತೆಯ ಬಗ್ಗೆ ಮಾತನಾಡುವುದು ಅಷ್ಟೊಂದು ಸಮಂಜಸವಾಗಲಾರದೆಂದೆನಿಸುತ್ತದೆ. ಕಾರಣ ವೇದಗಳನ್ನು ರಕ್ಷಿಸಿಕೊಂಡು ಬಂದ ಸ್ಥಿತಿಯನ್ನು ಗಮನಿಸಿದರೆ ಗೊತ್ತಾಗುತ್ತದೆ. ಶತ ಶತಮಾನಗಳಿಂದ ಅವುಗಳನ್ನು ಬಾಯಿ, ಕಿವಿ ಮಾತಿನ ಮೂಲಕ ಉಳಿಸಿಕೊಂಡು ಬರಲಾಗಿದೆ. ನಂತರಕ್ಕೆ ಅವುಗಳು ಲಿಖಿತ ರೂಪಕ್ಕೆ ಬಂದಿವೆ. ಹೀಗೆ ಮೌಖಿಕ ಪರಂಪರೆಯಲ್ಲಿ ಚರಿತ್ರೆಯು ಯಾವ ರೀತಿ ಅಡಕವಾಗಿದೆ ಎಂಬುದು ಗೊತ್ತಾಗುತ್ತದೆ. ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಂದರ್ಭಿಕವಾಗಿ ಪ್ರಕಟಗೊಂಡಿರುವ ಎರಡು ಕಥನಗೀತೆಗಳನ್ನು ಇಲ್ಲಿ ಬಳಸಿಕೊಂಡು ಚರಿತ್ರೆ ರಚನೆಯ ಆಯಾಮಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಮುಖ್ಯವಾಗಿ ಸಂಗೊಳ್ಳಿ ರಾಯಣ್ಣ ಮತ್ತು ಟಿಪ್ಪುಸುಲ್ತಾನನ ಕುರಿತಾದ ಲಾವಣಿಗಳನ್ನು ಬಳಸಿಕೊಳ್ಳಲಾಗಿದೆ.

ಕನ್ನಡದ ಸಂದರ್ಭಕ್ಕೆ ಟಿಪ್ಪುಸುಲ್ತಾನ ನಷ್ಟು ಚರ್ಚಿತವಾದ ಮತ್ತು ವಿವಾದದ ವಸ್ತುವಾದ ರಾಜ ಮತ್ತೊಬ್ಬನಿಲ್ಲ. ಇವನ ಪರ ಮತ್ತು ವಿರುದ್ಧದ ಚರ್ಚೆಗಳಂತೂ ಅನೇಕ ಬಗೆ ಬಗೆಯಲ್ಲಿ ನಡೆಯುತ್ತಿವೆ. ಟಿಪ್ಪು ನಾಯಕನೇ? ಖಳನಾಯಕನೇ? ಈ ಪ್ರಶ್ನೆಗಳಿಗೆ ಒಮ್ಮತದ ಅಭಿಪ್ರಾಯವಿಲ್ಲ. ಟಿಪ್ಪುವನ್ನು ದುಷ್ಟನೆಂದೂ, ರಾಕ್ಷಸನೆಂದೂ ಕೆಲವರು ಚಿತ್ರಿಸಿದ್ದರೆ, ಇನ್ನು ಕೆಲವರು ರಾಷ್ಟ್ರೀಯವಾದಿಯೆಂದು, ಸಾಮ್ರಾಜ್ಯಶಾಹಿ ವಿರುದ್ಧದ ಹೋರಾಟಗಾರನೆಂದೂ ಚಿತ್ರಿಸಿದ್ದಾರೆ. ಆಧುನಿಕ ಕಾಲದಲ್ಲಿ ಟಿಪ್ಪುವಿನಷ್ಟು ಚರ್ಚೆಗೆ, ವಿವಾದಕ್ಕೆ ಒಳಗಾದ ಬೇರೊಬ್ಬ ಇತಿಹಾಸದ ರಾಜನಿಲ್ಲ. ಇದಕ್ಕೆ ಕಾರಣಗಳನ್ನು ಹುಡುಕಲು ಕಷ್ಟ ಪಡಬೇಕಾಗಿಲ್ಲ. ಪ್ರಥಮತಃ ಟೀಪು ಒಬ್ಬ ಮುಸ್ಲಿಂ ರಾಜನಾಗಿದ್ದ ಎಂಬುದೇ ಅವನ ವಿರುದ್ಧದ ಟೀಕೆಗಳಿಗೆ ಮುಖ್ಯ ಕಾರಣ. ಹಿಂದೂ ಮೂಲಭೂತವಾದ ಇತ್ತೀಚಿನ ದಿನಗಳಲ್ಲಿ ತನ್ನ ಸ್ವಾಸ್ಥ್ಯವನ್ನು ಪೂರಾ ಕಳೆದು ಕೊಂಡಿದೆ. ಹಿಂದೂ ಮುಸ್ಲಿಂ ಬಾಂಧವ್ಯ ಸೂರ್ಯ ಚಂದ್ರಾದಿಗಳು ಇರುವ ತನಕ ಸಾಧ್ಯವೇ ಇಲ್ಲವೇನೋ ಎಂಬಂತೆ ಸಂಶಯದಿಂದ ನೋಡತೊಡಗಿದರು. ಅವರ ಪೀತ ಮನಸ್ಸುಗಳಿಗೆ ಎಲ್ಲಾ ಮುಸ್ಲೀಮರೂ ರಾಷ್ಟ್ರದ್ರೋಹಿಗಳಾಗಿ ಕಾಣತೊಡಗಿದ್ದಾರೆ. ಎಲ್ಲಾ ಮುಸ್ಲಿಂ ಸ್ಮಾರಕಗಳೂ ಹಿಂದೂ ದೇವಾಲಯಗಳ ಅಡಿಪಾಯದಿಂದೆದ್ದ ಅಪಾಯಗಳಾಗಿ ಗೋಚರಿಸುತ್ತಿವೆ. ಟೀಪುವಿನ ಹೆಸರನ್ನು ಕೇಳಿದರೆ ಗುಡುಗುವ, ನಡುಗುವ ಜನ ಹಿಂದೆಯೂ ಇದ್ದರು, ಈಗಲೂ ಇದ್ದಾರೆ. ಬ್ರಿಟೀಷರಿಗಾದರೆ, ಟೀಪು ಆಜನ್ಮ ವೈರಿ ಬ್ರಿಟೀಷ್ ಸಾಮ್ರಾಜ್ಯಶಾಹಿಯನ್ನು ಭಾರತದಿಂದಲೇ ಕಿತ್ತೊಗೆಯಬೇಕೆಂದಿದ್ದ ಟೀಪುವನ್ನು ಅವರು ದ್ವೇಷಿಸಿದ್ದರಲ್ಲಿ ಅರ್ಥವಿದೆ. ಆದರೆ ಅದೇ ಮನೋಭಾವವನ್ನು ಸ್ವಾತಂತ್ರ್ಯೋತ್ತರ ಭಾರತದ ಕೆಲವು ಇತಿಹಾಸಕಾರರು ಮತ್ತೆ ಮತ್ತೆ ಪ್ರತಿಪಾಸುವುದರಲ್ಲಿ ಅರ್ಥವಿಲ್ಲ. ಟೀಪುವಿನ ಬಗ್ಗೆ ಅವರು ಮತ್ತೆ ಮತ್ತೆ ಮಾಡುವ ಆಪಾದನೆಗಳಾದರೂ ಯಾವುವು ಅವನು ಹಿಂದೂ ವಿರೋಧಿಯಾಗಿದ್ದ. ಹಿಂದೂಗಳನ್ನು ಬಲತ್ಕಾರವಾಗಿ ಮತಾಂತರ ಮಾಡಿಸಿದ ಎಂಬುವು. ಇದೇ ಮಾತುಗಳನ್ನು ಮತ್ತೆ ಮತ್ತೆ ಮೂಲ ಭೂತವಾದಿಗಳೂ ಆಡುತ್ತಿದ್ದಾರೆ. ವಾಸ್ತವದ ಚಾರಿತ್ರಿಕ ಅಂಶಗಳನ್ನು ಮರೆ ಮಾಚಿ ಅವರುಗಳು ಆಡುವ ಈ ಮಾತುಗಳು" (ಲಿಂಗದೇವರು ಹಳೆಮನೆ, ಧೀರ ಟೀಪುವಿನ ಲಾವಣಿಗಳು, ಪು:೫) ಅರ್ಥಹೀನ ಎನಿಸಿವೆ. ಬ್ರಿಟೀಷರು ತಾವು ಕಾಲಿಟ್ಟಲ್ಲೆಲ್ಲಾ ತಮ್ಮ ವಿರೋಧಿಗಳನ್ನು ಭೌತಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸಂಹಾರ ಮಾಡುತ್ತಲೇ ಬಂದಿದ್ದಾರೆ. ತಾವು ಸಾಮ್ರಾಜ್ಯ ವಿಸ್ತರಣೆಗೆ ಹೋದಲೆಲ್ಲಾ ಜೊತೆಗೆ ಕಾರಕೂನರನ್ನು ಕರೆದುಕೊಂಡು ಹೋಗುತ್ತಿದ್ದುದು ವಾಡಿಕೆಯಿದೆ. ಈ ಕಾರಕೂನರೆಲ್ಲಾ ಬ್ರಿಟೀಷರ ಆಣತಿಯಂತೆ ಬರೆಯುತ್ತಿದ್ದುದು ಸಹಜವೇ ಆಗಿದೆ. ಒಮ್ಮೊಮ್ಮೆ ಕಾರಕೂನರು ಇಲ್ಲದೇ ಇದ್ದಾಗ ಕರ್ನಲ್‌ರುಗಳೇ ಆ ಕೆಲಸಗಳನ್ನು ಮಾಡಿದ ಉದಾಹರಣೆಗಳಿವೆ. ಈ ಕರ್ನಲ್‌ರುಗಳೆಲ್ಲ ಮುಂದೆ ಬಹುದೊಡ್ಡ ಇತಿಹಾಸಕಾರರಾಗಿದ್ದಾರೆ. ಅವರುಗಳಲ್ಲಿ ಬೀಟ್‌ಸನ್, ಕಿರ್ಕ್ ಪ್ಯಾಟ್ರಿಕ್‌ಸನ್, ಕರ್ನಲ್ ಮೆಕೆಂಜಿ, ಕರ್ನಲ್ ಮಾರ್ಕ್ಸ್ ವಿಲ್ಕ್ಸ್ ಮುಂತಾದವರು ಪ್ರಮುಖರಾಗಿದ್ದಾರೆ. "ಮೊದಲಿಗೆ ಬ್ರಿಟಿಷ್ ಇತಿಹಾಸಕಾರರು

ಟೀಪುವನ್ನು ಹೇಗೆ ಕಂಡಿದ್ದಾರೆ ಎಂದು ನೋಡಬಹುದು. ಟೀಪುವಿನ ಮರಣಾನಂತರ ಅವನನ್ನು ದುಷ್ಟನೆಂದು ಬಣ್ಣಿಸುವುದರಲ್ಲಿ ಬೀಟಸನ್, ಕಿರ್ಕ್‌ಪ್ಯಾಟ್ರಿಕಸನ್, ಕರ್ನಲ್ ಮಾರ್ಕ್ಸ್‌ವಿಲ್ಕ್ಸ್, ಮುಂತಾದವರು ಒಬ್ಬರಿಗೊಬ್ಬರು ಸ್ಪರ್ಧಿಸುತ್ತಾ ಹೋದರು. ಕಿರ್ಕ್ ಪ್ಯಾಟ್ರಿಕ್‌ಸನ್ ಟೀಪುವನ್ನು ಅಸಹಿಷ್ಣುತೆಯ ಮತದ್ವೇಷಿ ಅಥವಾ ಪ್ರಕೋಪದ ಹುಚ್ಚನೆಂದು ಕರೆದಿದ್ದಾನೆ. ವಿಲ್ಕ್ಸನ್ ತನ್ನ 'ಹಿಸ್ಟರಿ ಆಫ್ ಮೈಸೂರ್'ನಲ್ಲಿ ಬಲವಂತದ ಮತ ಪರಿವರ್ತನೆ, ಸಾಮೂಹಿಕವಾಗಿ ಜನನಾಂಗದ ಮುಂದೊಗಲನ್ನು ಕತ್ತರಿಸಿ ಹಾಕುವ ಮತಸಂಸ್ಕಾರ, ದೇವಸ್ಥಾನಗಳ ನಾಶ, ದೇವಾಲಯಗಳ ಮುಟ್ಟುಗೋಲು ಮುಂತಾದವುಗಳ ಕಥೆ ಹೇಳುತ್ತಾ ಟೀಪು ಅಸಹಿಷ್ಣುತೆಯ ಮತದ್ವೇಷಿ ಮತ್ತು ಯಾವುದೋ ಒಂದು ಕಾಲದಲ್ಲಿ ಚರಿತ್ರೆಯಲ್ಲಿರುವ ಧಾರ್ಮಿಕ ಸಚಿತ್ರ ಹಿಂಸೆಯು ಅತ್ಯಂತ ಭಯಾನಕವಾಗಿ ಟೀಪುಕಾಲದಲ್ಲಿ ಪುನರ್ ಸ್ಥಾಪನೆಯಾಯಿತು. ಎಂಬ ತೀರ್ಮಾನಕ್ಕೆ ಬಂದಿದ್ದಾನೆ." (ಲಿಂಗದೇವರು ಹಳೆಮನೆ, ಧೀರ ಟೀಪುವಿನ ಲಾವಣಿಗಳು, ಪು:೪) ಹೀಗೆ ಬಹುತೇಕ ಬ್ರಿಟೀಷ್ ಇತಿಹಾಸಕಾರರು ಬರೆದು ದಾಖಲಿಸಿರುವ ಈ ರೀತಿಯ ಚರಿತ್ರೆಯನ್ನೇ ಇತಿಹಾಸಕಾರರು ಅನುಸರಿಸುತ್ತಿರುವುದರಿಂದ ನಮ್ಮಲ್ಲಿ ಇಂದು ಈ ರೀತಿಯ ವಾತಾವರಣ ತಲೆದೋರಿದೆ. ಜೊತೆಗೆ ಬ್ರಿಟಿಷ್ ಇತಿಹಾಸಕಾರರ ಹೇಳಿಕೆಗಳನ್ನು ಆಧಾರವಾಗಿಟ್ಟುಕೊಂಡು ಟೀಪುವನ್ನು ಮತಾಂಧನೆಂದು ಚಿತ್ರಿಸುವಲ್ಲಿ ಭಾರತದ ಇತಿಹಾಸಕಾರರೇನು ಹಿಂದೆ ಬಿದ್ದಿಲ್ಲ. ಸರ್ದೇಸಾಯಿ, ಕೆ.ಎಂ.ಪಣಿಕ್ಕರ್, ಐ.ಮಾ.ಮುತ್ತಣ್ಣ, ಕೆ.ಕೆ.ಸುಬ್ಬಯ್ಯ, ಸೀತಾರಾಮ ಗೋಯಲ್ ಮುಂತಾದವರು ಟೀಪುವನ್ನು ಅಸಹಿಷ್ಣುತೆಯ ಮತದ್ವೇಷಿ, ಪ್ರಕೋಪದ ಹುಚ್ಚ ಎಂದೇ ಬರೆದಿದ್ದಾರೆ. ಇವರೆಲ್ಲರಿಗೂ ಟೀಪು ಕೇರಳದ ಮಲಬಾರ್ ಮತ್ತು ಕೊಡಗಿನಲ್ಲಿ ನಡೆಸಿದ ಮತಾಂತರದ ಅಂಶಗಳೇ ಪ್ರಧಾನವಾಗಿ ಕಂಡು ಬಂದಿವೆ. ಇತಿಹಾಸಕಾರರಾಗಿ ಇವರ್‍ಯಾರೂ, ಟೀಪುವಿನ ಸಮಗ್ರ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಿಲ್ಲ ಎನ್ನುವುದು ಸ್ಪಷ್ಟ." (ಅದೇ, ಪುಟ:೫) ಆದರೆ "ಇವರೆಲ್ಲರೂ ಮರೆತಿರುವ ಒಂದು ಅಂಶವೆಂದರೆ, ಟೀಪು ಮಲಬಾರ್ ಮತ್ತು ಕೊಡಗುಗಳಲ್ಲಿ ಅಷ್ಟೊಂದು ಕ್ರೂರವಾಗಿ ನಡೆದುಕೊಳ್ಳಲು ಇದ್ದ ರಾಜಕೀಯ ಕಾರಣಗಳು ಯಾವುವು ಎಂಬುವು. ಟೀಪು ಇದ್ದುದು ಊಳಿಗಮಾನ್ಯ ವ್ಯವಸ್ಥೆಯ ಚೌಕಟ್ಟಿನಲ್ಲಿ ಆತನಲ್ಲಿ ಸಂತ ನಿದ್ದಂತೆ ಸೈತಾನನ್ನು ಇದ್ದ. ರಾಜಕೀಯ ಕಾರಣಗಳಿಗೋಸ್ಕರ ಅವನು ಅತ್ಯಂತ ಕಠಿಣ ನಿರ್ಧಾರವನ್ನು ತೆಗೆದುಕೊಳ್ಳಲು ಹೇಸುತ್ತಿರಲಿಲ್ಲ. ದೇಶಕ್ಕಾಗಿ ತನ್ನ ಮಕ್ಕಳನ್ನೇ ಒತ್ತೆಯಿಡಲು ಹಿಂದು ಮುಂದು ನೋಡದವನು, ರಾಜಕೀಯ ದ್ರೋಹಿಗಳನ್ನು ಮೆದುವಾಗಿ ನಡೆಸಿಕೊಳ್ಳುತ್ತಾನೆಂದು ನಂಬುವುದು ಹೇಗೆ? ಇದನ್ನು ಕುರಿತು ಮೊಹಿಬ್ಬುಲ್ ಹಸನ್ ತಮ್ಮ ಟಿಪ್ಪು ಸುಲ್ತಾನನ ಇತಿಹಾಸದಲ್ಲಿ ಹೀಗೆ ಬರೆಯುತ್ತಾರೆ. ಟೀಪು ಮತದ್ವೇಷಿಯಿಲ್ಲದೆ ಪ್ರಜ್ಞಾವಂತೂ ಮತ್ತು ಸಹಿಷ್ಣವೂ ಆದ ರಾಜನಾಗಿದ್ದಿದ್ದರೆ ಕೊಡಗು ಮತ್ತು ಮಲಬಾರುಗಳಲ್ಲಿ ಹಿಂದೂಗಳನ್ನು ಬಲವಂತವಾಗಿ ಮುಸ್ಲಿಂ ಮತಕ್ಕೆ ಪರಿವರ್ತನೆ ಮಾಡಬೇಕೆಂದೇಕೆ ಅಪ್ಪಣೆಯಿತ್ತನು ಇದಕ್ಕೆ ನಿಜವಾದ ವಿವರಣೆಯೆಂದರೆ, ಅದು ಧಾರ್ಮಿಕ ಕಾರಣದಿಂದಾದುದಲ್ಲ. ಅದರ ಉದ್ದೇಶ

ರಾಜಕೀಯವಾದುದಾಗಿತ್ತು. ಮಹಮ್ಮದಿಯೇತರ ಪ್ರಜೆಗಳು ಆಗಾಗ ದಂಗೆಯೆದ್ದು ತಪ್ಪಿತಸ್ಥರಾಗಿದ್ದುದರಿಂದ ಈ ಪರಿವರ್ತನೆಯು ಒಂದು ವಿಧವಾದ ಶಿಕ್ಷೆಯೆಂದವನು ಭಾವಿಸಿದ್ದನು. ಅದರಂತೆ ಅವನು ಕೊಡಗು ಮತ್ತು ಮಲಬಾರಿನ ಜನರು ತಮ್ಮ ದಂಗೆಕೋರ ವೃತಿಯನ್ನು ಬಿಡದಾದರೆ ಅವರನ್ನು ಮತಾಂತರಗೊಳಿಸಬೇಕೆಂದು ಅಪ್ಪಣೆ ಕೊಟ್ಟನು. ಟೀಪು ತನ್ನ ಈ ಕ್ರೂರ ಶಿಕ್ಷೆಯನ್ನು ಸಮರ್ಥಿಸಿಕೊಂಡಿರುವುದು ಹೀಗೆ ಅವರು ಆರು ಸಾರಿ ದಂಗೆಯೆದ್ದರು. ನಾನು ಆರು ಬಾರಿಯೂ ಅವರನನು ಮನ್ನಿಸಿದೆ." (ಅದೇ,ಪು.೮) ಆದರೆ ಟಿಪ್ಪು ಏಳನೆ ಬಾರಿಗೆ ಅವರೆಲ್ಲ ದಂಗೆ ಎದ್ದಾಗ ಮತಾಂತರವನ್ನೇ ಒಂದು ವಿಧದಲ್ಲಿ ಅಂತಿಮ ಶಿಕ್ಷೆಯಂತೆ ಅದನ್ನು ಮಾರ್ಪಡಿಸಿ ಅವರನ್ನೆಲ್ಲಾ ಮತಪರಿವರ್ತನೆ ಮಾಡಿದ. ಆದರೆ ಭಾರತೀಯ ಮತ್ತು ಬ್ರಿಟೀಷ್ ಇತಿಹಾಸಕಾರರಲ್ಲಿ ಬಹುತೇಕರು ಟಿಪ್ಪುವಿನ ಅನ್ಯಧರ್ಮದ ಬಗೆಗಿನ ಕಾಳಜಿಯನ್ನು ಮರೆತೇ ಬಿಡುತ್ತಾರೆ. ಟಿಪ್ಪು ಶೃಂಗೇರಿ ಮಠ, ನಂಜನಗೂಡಿನ ನಂಜುಂಡೇಶ್ವರ, ಹೀಗೆ ಅನೇಕ ಹಿಂದೂ ಧಾರ್ಮಿಕ ಕ್ಷೇತ್ರಗಳ ಕುರಿತಾಗಿ ಅವನು ನಡೆದುಕೊಂಡ ರೀತಿಯನ್ನು ಇತಿಹಾಸಕಾರರೆಲ್ಲರೂ ಮರೆತೇ ಬಿಡುತ್ತಾರೆ. ಇವರೆಲ್ಲರಿಗೂ ಕಾಣುತ್ತಿರುವುದು ಬರೀ ಅವನೊಬ್ಬ ಮತಾಂಧ, ಕ್ರೂರಿ, ಪಶು, ಇತ್ಯಾದಿ ರೂಪಗಳೇ ಆಗಿವೆ. ಇದಕ್ಕೆ ಬಹುದೊಡ್ಡ ಕಾರಣವೆಂದರೆ ಅವರೆಲ್ಲರೂ ಟಿಪ್ಪುವಿನ ಬಗ್ಗೆ ಪೂರ್ವಾಗ್ರಹ ಪೀಡಿತರಾಗಿರುವುದು. ಬಹುತೇಕವಾಗಿ ಇದು ಮೂಲಭೂತವಾದಿತನದ ಮನಸ್ಸಲ್ಲದೆ ಬೇರೇನು ಅಲ್ಲ. ಅವನು ಶೃಂಗೇರಿ ಮಠಕ್ಕೆ ಬರೆದ ಪತ್ರಗಳು ಸಿಕ್ಕಿದ ನಂತರಕ್ಕೆ (೧೯೧೬ರ ನಂತರ) ಹಲವಾರು ಜನ ವಿದ್ವಾಂಸರು ಕನ್ನಡ ಸಂಸ್ಕೃತಿ, ಪರಂಪರೆಯ ರಚನೆಯ ಸಂದರ್ಭದಲ್ಲಿ ಟಿಪ್ಪುವಿನ ಅಪಾರ ಕೊಡುಗೆಯನ್ನು ಮೆಚ್ಚಿದ್ದಾರೆ. ಆದರೆ "ಇಂದು ಟೀಪುವಿನ ಬಗ್ಗೆ ಟೀಕೆ ಮಾಡುತ್ತಿರುವವರು ಅವನ ರಾಜಕೀಯ ನಿಲುವಿನ ಬಗ್ಗೆ ಮಾತಾಡುತ್ತಿಲ್ಲ. ಸಾಮ್ರಾಜ್ಯಷಾಹಿಯ ವಿರುದ್ಧ ಈ ದೇಶದ ಅಸ್ಮಿತೆಯನ್ನು ಕಾಪಾಡಿದವನು ಅವನು. ಅದನ್ನು ಇತ್ತೀಚಿನ ಇತಿಹಾಸಕಾರರು ಗುರುತಿಸುವ ಪ್ರಯತ್ನ ಮಾಡಿದ್ದಾರೆ, ಅವನನ್ನು ಸ್ವತಂತ್ರ ಕರ್ನಾಟಕದ ಹರಿಕಾರನೆಂದು ಗುರುತಿಸಿದ್ದಾರೆ. ಮೊಹಿಬ್ಬಲ್ ಹಸನ್, ಸಾಕಿ, ಷೇಕ್ ಅಲಿ, ಸ್ಯಾಮುಯಲ್, ಸ್ಟಾಂಡ್‌ಬರ್ಗ್‌ಪ್ರಾಕ್ಸಿ ಫರ್ನಾಂಡಿಸ್ ಮುಂತಾದವರು ಟೀಪುವಿನ ಸಾಮ್ರಾಜ್ಯಷಾಹಿ ವಿಸ್ತರಣೆಯ ವಿರುದ್ಧದ ಹೋರಾಟಕ್ಕೆ ಆದ್ಯತೆ ಕೊಟ್ಟು, ಅವನ ನಿಜವಾದ ವ್ಯಕ್ತಿತ್ವತ್ವವನ್ನು ಹೊರಗೆಳೆಯುವ ಪ್ರಯತ್ನ ಮಾಡಿದ್ದಾರೆ. (ಅದೇ,ಪು:೧೨) ಇಂದು ಟೀಪುವಿನ ವಿರುದ್ಧ ಟೀಕೆಗಳನ್ನು ಮಾಡುತ್ತಿರುವವರು ಅವನ ರಾಜಕೀಯ ತಂತ್ರಗಳನ್ನಾಗಲೀ ಅಥವಾ ಅವನ ಧಾರ್ಮಿಕ ಸಹಿಷ್ಣುತೆಗಳನ್ನಾಗಲೀ ಗಮನಿಸುತ್ತಿಲ್ಲ. ಬದಲಿಗೆ ಅವನ ರಾಜಕೀಯ ಅಸಹಿಷ್ಣುತೆಯನ್ನು ಇಟ್ಟುಕೊಂಡು ಮಾತನಾಡುತ್ತಿದ್ದಾರೆ. ಟೀಪುವಿನ ರಾಜ್ಯಾಡಳಿತ ಕಾಲದಲ್ಲಿ ಧಾರ್ಮಿಕ ಪಕ್ಷಪಾತ ನಡೆದಿತ್ತು ಎಂದು ಆಪಾದಿಸುವ ಪ್ರತಿಗಾಮಿ ಶಕ್ತಿಗಳು ಆತನಿಗಿದ್ದ ಮುಸ್ಲಿಂ ಮೂಲಭೂತವಾದಿ ಉದ್ದೇಶಗಳಿಗೆ ಸರಿಯಾದ ವಿವರಣೆ ಕೊಡುವುದಕ್ಕಾಗಲ್ಲ ಮಾತ್ರವಲ್ಲದೆ ಅವುಗಳಿಗೆ ಕಾರಣಗಳನ್ನು

ನೀಡಲಿಕ್ಕೂ ಸಾಧ್ಯವಾಗಿಲ್ಲ. ಹಿಂದು ದೇವಸ್ಥಾನಗಳಿಗೆ ದಾನ ದತ್ತಿಗಳನ್ನು ಆತ ಯಾಕೆ ನೀಡಿದ ತನ್ನ ಸರ್ಕಾರದ ಅತ್ಯುನ್ನತ ಶ್ರೇಣಿಗಳಲ್ಲಿ ಅಷ್ಟೊಂದು ಜನ ಹಿಂದೂಗಳನ್ನು ಯಾಕೆ ನೇಮಿಸಿಕೊಂಡಿದ್ದ? ಆತನ ಹಿಂದೂ ಪ್ರಜೆಗಳು ಆತನನ್ನು ಯಾಕಾಗಿ ಅಷ್ಟೊಂದು ಅಭಿಮಾನಿಸಿದರು? ಮುಂತಾದವುಗಳ ಬಗ್ಗೆ ಅವರಲ್ಲಿ ವಿವರಣೆಗಳಿಲ್ಲ. ಧರ್ಮವೇ ಹಿತಾಸಕ್ತಿಗಳನ್ನು ನಿರ್ಣಯಿಸುವಂತಿದ್ದರೆ ನಿಜಾಮ ಬ್ರಿಟೀಷರ ಪರ ವಹಿಸಿ ಟೀಪು ವಿರುದ್ಧ ನಿಲ್ಲುತ್ತಿರಲಿಲ್ಲ ಅಥವಾ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಮರಾಠರು ತಟಸ್ಥ ಧೋರಣೆ ಅನುಸರಿಸುತ್ತಿರಲಿಲ್ಲ. ಅದೇ ರೀತಿಯಲ್ಲಿ ಇತ್ತೀಚಿನ ಕಾಲಘಟ್ಟದಲ್ಲಿ ಜಾರಿಗೆ ಬಂದ ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿ ಕಾಣಿಸಿಕೊಳ್ಳುತ್ತಲೇ ಇರಲಿಲ್ಲ. ಹಾಗೆ ನೋಡಿದರೆ ಜರ್ಮನಿಯಲ್ಲಿ ಫ್ಯಾಸಿಸಂ ಕೊನೆಗೊಂಡ ಹಲವು ದಶಕಗಳ ನಂತರದವರೆಗೂ ಈ ವರ್ಣಭೇದ ನೀತಿ ಜಾರಿಯಲ್ಲಿತ್ತು. ಇದರ ಸರಳ ವಿವರಣೆ ಏನೆಂದರೆ, ಆತ ಕಾಲಘಟ್ಟದ ಹಲವಾರು ಆಳ್ವಿಕೆದಾರರಂತೆ ಟೀಪು ಕೂಡ ರಾಜಕೀಯ ಲಾಭಾಪೇಕ್ಷೆಗಳನ್ನು ಹೊಂದಿದವನಾಗಿದ್ದ, ಅವು ಧಾರ್ಮಿಕ ಭಾವನೆಗಳ ಬಳಕೆಯಿಂದಾಗಿರಬಹುದು ಅಥವಾ ಇತರೆ ಮೂಲಗಳಿಂದ ಒದಗಿದವುಗಳಾಗಿರಬಹುದು. (ಡಾ.ಬಂಜಗೆರೆ ಜಯಪ್ರಕಾಶ್, ಹೊನ್ನಾರು, ಜುಲೈ, ೨೦೦೭, ಪು:೧೧) ಆತ ಹಲವಾರು ಧಾರ್ಮಿಕ ಕ್ಷೇತ್ರಗಳಿಗೆ ತನ್ನ ಸಹಾಯವನ್ನು ಮಾಡಿದ್ದಾನೆ. ಮರಾಠರ ರಘುನಾಥರಾವ್ ಪಟವರ್ಧನ್ ನೇತೃತ್ವದಲ್ಲಿ ದಾಳಿಗೊಳಗಾದ ಹಾಗೂ ಲೂಟಿಗೊಳಗಾದ ಶೃಂಗೇರಿ ಮಠದ ಜೀರ್ಣೋದ್ಧಾರಕ್ಕಾಗಿ ಅನುದಾನವನ್ನು ನೀಡಿದ ಅಲ್ಲದೆ ಆ ಮಠದವರ ಕೈಗೊಂಡ ಶತ ಚಂಡಿ ಜಪ ಮತ್ತು ಸಹಸ್ರ ಚಂಡಿ ಜಪಗಳಿಗೆ ಹಣಕಾಸಿನ ಸಹಾಯ ಮಾಡಿದ, ಗಂಜೀಕೋಟೆಯಲ್ಲಿ ಆಂಜನೇಯಸ್ವಾಮಿ ದೇವಸ್ಥಾನ ನಿರ್ಮಿಸಿದ, ತ್ರಿಶೂಕನಲ್ಲಿ ವಡಕ್ಕುನಾಥನ್ ದೇವಸ್ಥಾನವನ್ನು ನಿರ್ಮಿಸಲು ಸಹಾಯ ಮಾಡಿದ, ಪೊನ್ನಾನಿನ ಗುರುವಾಯೂರು ಹೋಬಳಿಯಲ್ಲಿ ಗುರುವಾಯೂರು ದೇವಸ್ಥಾನವನ್ನು ನಿರ್ಮಿಸಲು ಹಣಕಾಸಿನ ನೆರವನ್ನು ನೀಡಿದ. ನಂಜನಗೂಡು ತಾಲೂಕಿನ ಕಳಲೆ ಗ್ರಾಮದಲ್ಲಿನ ಲಕ್ಷ್ಮೀಕಾಂತ ದೇವಸ್ಥಾನಕ್ಕೆ ಭೂಮಿದಾನ ಮತ್ತು ಹಣಕಾಸಿನ ನೆರವನ್ನು ನೀಡಿದ. "ಸಾಕಷ್ಟು ಹೊರ ವಿದ್ಯಮಾನಗಳ ಅರಿವಿದ್ದ ಟೀಪು ತನ್ನ ರಾಜ್ಯದಲ್ಲಿ ಮತಾಂಧ ಆಳ್ವಿಕೆಯನ್ನು ನೆಲೆಗೊಳಿಸಲು ಯತ್ನಿಸುವುದು ಆ ಕಾಲಘಟ್ಟದಲ್ಲಿ ಸಾಧ್ಯವಿತ್ತೇ ಎಂಬುದನ್ನು ನಾವು ಸೂಕ್ತವಾಗಿ ಪರಿಶೀಲಿಸಬೇಕಾಗಿದೆ. ಆ ಹೊತ್ತಿಗಾಗಲೇ ಬ್ರಿಟೀಷರು ಕರ್ನಾಟಕವನ್ನು ಎರಡು ಮೂರು ದಿಕ್ಕುಗಳಿಂದ ಆವರಿಸಿಕೊಳ್ಳತೊಡಗಿದ್ದರು. ಉತ್ತರ ದಿಕ್ಕಿನಲ್ಲಿ ಮರಾಠ ಪೇಶ್ವೆಗಳು ರಾಜ್ಯಭಾರ ಮಾಡುತ್ತಿದ್ದರು. ಇಂತಹ ಸನ್ನಿವೇಶದಲ್ಲಿ ಟೀಪು ಬಲತ್ಕಾರದ ಮತಾಂತರಗಳನ್ನು ಸಾಮೂಹಿಕ ಪ್ರಮಾಣದಲ್ಲಿ ನಡೆಸಲು ಪ್ರಯತ್ನಿಸಿದ್ದರೆ ಅಥವಾ ಭಿನ್ನ ಧರ್ಮೀಯರ ನಡುವೆ ತಾರತಮ್ಯವೆಸಗಿದ್ದಿದ್ದರೆ ಅದು ನೆರೆಯ ರಾಜ್ಯದ ಆಡಳಿತಗಾರರಿಗೆ ತಿಳಿಯುತ್ತಿತ್ತು ಹಾಗೂ ಅಂತಹ ದಮನಿತ ಧಾರ್ಮಿಕ ಭಾವನೆಗಳ ಸನ್ನಿವೇಶವನ್ನು ಬಳಸಿಕೊಂಡು ದಂಗೆ ಪ್ರಚೋದಿಸುವ ಪ್ರಯತ್ನವನ್ನು ಬ್ರಿಟೀಷರಂತೂ ಮಾಡಿರುತ್ತಿದ್ದರು. (ಡಾ.ಬಂಜಗೆರೆ ಜಯಪ್ರಕಾಶ, ಹೊನ್ನಾರು, ಜುಲೈ,

೨೦೦೭, ಪು:೭) ಹಾಗೆ ನೋಡಿದರೆ ಬ್ರಿಟೀಷರಿಗೆ ಟೀಪುವಿನ ಮೇಲಷ್ಟೇ ಅಲ್ಲದೆ ಟಿಪ್ಪುವಿನ ಮನೋಧರ್ಮಕ್ಕೆ ಬೆಂಬಲವಾಗಿ ನಿಂತಿದ್ದ ಮೈಸೂರು ಸಂಸ್ಥಾನದ ಜನರ ಮೇಲೆಯೂ ದ್ವೇಷ ಇತ್ತು ಎಂಬುದನ್ನು ನಾವು ಈ ಮೂಲಕ ಅರಿಯಬೇಕು. ಯುರೋಪಿಯನ್ ಮಾದರಿಯ ಪ್ರಗತಿಯನ್ನು ಅನುಸರಿಸಿ ವಿಶೇಷ ರೀತಿಯ ಆರ್ಥಿಕತೆಯನ್ನು ರೂಪಿಸಿಕೊಂಡು ಮುನ್ನಡೆಯಲ್ಲಿರುವುದರ ಜೊತೆಗೆ, ಇಲ್ಲಿಯ ವ್ಯಾಪಾರಿಗಳು ಮತ್ತು ಕುಶಲಕರ್ಮಿ ಕಸಬುದಾರರ ಸಮುದಾಯಗಳೊಂದಿಗೆ ಹೊಂದಿದ್ದ ಅಂತಃಸಂಬಂಧ ಮತ್ತು ಸ್ಥಳೀಯ ಮಾರುಕಟ್ಟೆಯ ಮೇಲಿನ ಹಿಡಿತ, ಇದು ವಸಾಹತುಷಾಹಿ ವ್ಯಾಪಾರಿಗಳಿಗೆ ಸಿಗಲಿಲ್ಲವಾದ್ದರಿಂದ ಬ್ರಿಟೀಷರಿಗೆ ಕೋಪ ಬರಲು ಕಾರಣವಾಯಿತು. ಆರ್ಥಿಕ ಪ್ರಗತಿ ಸಂರಕ್ಷಣೆಯ ಕ್ರಮಗಳೂ ಅವರಿಗೆ ನಿದ್ದೆ ಗೆಡಿಸಿದ್ದವು. ಟೀಪು ಜನಾನುರಾಗಿ ದೊರೆಯಾಗಿದ್ದ. ತನ್ನ ಕಾಲಘಟ್ಟದ ಮಿತಿಗಳ ನಡುವೆ ಉಜ್ವಲವಾಗಿ ರಾಜ್ಯಭಾರ ಮಾಡಿದ. ಜನರ ಪ್ರಗತಿ ಸಾಧನೆಗೆ, ನಾಡಿನ ಆರ್ಥಿಕ ಏಳಿಗೆಗೆ ಹಲವಾರು ಮಹಾದಾಸೆಯ ಯೋಜನೆಗಳನ್ನು ಜಾರಿಗೊಳಿಸಿದ ಎಂಬ ಐತಿಹಾಸಿಕ ವಾಸ್ತವಾಂಶಗಳು ಜನರಿಗೆ ಹೆಚ್ಚು ತಲುಪಬೇಕಾದ ಅಗತ್ಯವಿದೆ. ಟೀಪು ಒಬ್ಬ ನಿಷ್ಠಾವಂತ ಇಸ್ಲಾಂ ಅನುಯಾಯಿಯಾಗಿರಬಹುದು. ತನ್ನ ಧರ್ಮ ವಿಧಿಸಿರುವ ನೀತಿ ನಿಯಮಗಳಿಗನುಸಾರವಾಗಿ ತನ್ನ ರಾಜ್ಯದ ಪ್ರಜೆಗಳೆಲ್ಲರಿಗೆ ಅನುಕೂಲವಾಗುವುದನ್ನು ಆತ ಮಾಡಿರಬಹುದೇ ಹೊರತು, ತನ್ನ ಧಾರ್ಮಿಕ ನಿಷ್ಠೆಯ ಕಾರಣದಿಂದ ಜನಸಾಮಾನ್ಯರಿಗೆ ಕಿರುಕುಳ ನೀಡಿದ ಉದಾಹರಣೆಗಳಿಲ್ಲ. ಭಿನ್ನ ಧರ್ಮೀಯ ಜನತೆಗೆ, ಅವರ ಧಾರ್ಮಿಕಾಚರಣೆಗಳಿಗೆ ಮತ್ತು ನಂಬುಗೆಗಳಿಗೆ ಅಡ್ಡಿ ಬರುವ ಕ್ರಮಗಳನ್ನು ಆತ ಜಾರಿಗೊಳಿಸಿರಲಿಲ್ಲ. ಇದಕ್ಕೆ ಅಂದಿನ ಮೈಸೂರು ಸಂಸ್ಥಾನದ ದಾಖಲಾತಿಗಳು, ಜನರ ವಾಡಿಕೆಯ ಹಾಡು, ಗಾದೆ ಇತ್ಯಾದಿಗಳು ನಮಗೆ ಸಾಕಷ್ಟು ಮಾಹಿತಿಯನ್ನು ಒದಗಿಸುತ್ತವೆ." (ಅದೇ, ಪು:೭) ಎಂಬುದನ್ನು ಮನಗಾಣಬೇಕಿದೆ. ತನ್ನ ವಸಾಹತು ಸಾಮ್ರಾಜ್ಯವನ್ನು ವಿಸ್ತರಿಸುತ್ತಾ ಭಾರತವನ್ನು ಬ್ರಿಟೀಷ್ ಆಳ್ವಿಕೆಗೆ ಒಳಪಡಿಸಿಕೊಳ್ಳುತ್ತಿದ್ದ ವಿದೇಶೀ ಆಕ್ರಮಣಕಾರರ ವಿರುದ್ಧ ಟಿಪ್ಪು ನಡೆಸಿದ ಹೋರಾಟ ಒಂದು ರೋಮಾಂಚಕಾರಿ ಕಾಲಘಟ್ಟ. ಅದೇ ಸಮಯದಲ್ಲಿ ಅದು ಭಾರತೀಯ ರಾಜರ ನಡುವೆ ಇದ್ದ ದೂರದೃಷ್ಟಿಯ ಕೊರತೆ, ಅನೈಕ್ಯತೆ ಮುಂತಾದವುಗಳನ್ನು ಹೇಳುವ ವಿಷಾದಕರ ಕಾಲಘಟ್ಟವೂ ಹೌದು.

ಟಿಪ್ಪುವು ಆಹಾರ ವ್ಯವಹಾರಗಳಲ್ಲಿ ಸರಳ ರೀತಿಯ ಜೀವನ ನಡೆಸಿ ಬೇರೆಯವರಿಗೆ ಮಾದರಿಯಾದನು. ತನ್ನ ಗಂಭೀರವಾದ ವ್ಯಕ್ತಿತ್ವದಿಂದ ಎಲ್ಲರ ಮೇಲೂ ಪ್ರಭಾವ ಬೀರಿದ್ದನು. ವಿಜ್ಞಾನ ಮತ್ತು ವಿದ್ಯೆಯಲ್ಲಿ ಅವನಿಗೆ ಅಪಾರವಾದ ಆಸಕ್ತಿಯಿತ್ತು. ಜೊತೆಗೆ ಅವನು ಸಂಗೀತ, ನೃತ್ಯಗಳಿಗೂ ತನ್ನ ಆಸ್ಥಾನದಲ್ಲಿ ಆಶ್ರಯ ಕೊಟ್ಟು ಪ್ರೋತ್ಸಾಹಿದ್ದನು. ಅತೀಯಾದ ಆಸಕ್ತಿ, ನಾಯಕತ್ವ, ದೂರದೃಷ್ಟಿತ್ವ, ಮುಂದಾಳುತನ, ಪ್ರತಿಭೆಗಳಿಂದ ಕೂಡಿದ ಶ್ರೇಷ್ಠ ಆಡಳಿತಗಾರನಾದುದರಿಂದಲೇ ಇಡೀ ಭಾರತದಲ್ಲಿ ಮೈಸೂರು ರಾಜ್ಯವನ್ನು ಅಭಿವೃದ್ಧಿಯ ಉತ್ತುಂಗಕ್ಕೇರಿಸಿದ್ದನು. ರಾಜ್ಯದ ಎಲ್ಲ ಕಡೆಗಳಲ್ಲಿಯೂ ಉತ್ತಮ ರೀತಿಯ ರಸ್ತೆಗಳನ್ನು ಮಾಡಿಸಿದನು. ನೀರಾವರಿಗಾಗಿ ಕೆರೆ, ಕಟ್ಟೆಗಳನ್ನು ನಿರ್ಮಿಸಿದನು. ಯುರೋಪಿಯನ್ ಮಾದರಿಯ ಸೈನ್ಯವನ್ನು

ರೂಪಿಸಿಕೊಳ್ಳುವುದರ ಜೊತೆಗೆ ಆಡಳಿತದಲ್ಲೂ ಕೂಡ ಅವರ ರೀತಿ ನೀತಿಗಳನ್ನು ಅಳವಡಿಸಿಕೊಂಡು ಉತ್ತಮವಾದ ಸೈನಿಕ ವ್ಯವಸ್ಥೆಯನ್ನು ಹೊಂದಿದ್ದನು. ಹಾಗೇನೇ ಅವರ ಪ್ರಭಾವದಿಂದ ಸ್ಫೂರ್ತಿಗೊಂಡು ರಾಜ್ಯದಲ್ಲಿ ಹೊಸ ಹೊಸ ಕೈಗಾರಿಕೆಗಳನ್ನು ಸ್ಥಾಪಿಸುವುದರ ಮೂಲಕ ಆರ್ಥಿಕ ಮತ್ತು ವಾಣಿಜ್ಯ ಸ್ಥಿತಿಗಳನ್ನು ಸುಧಾರಿಸುವತ್ತ ದಾಪುಗಾಲು ಹಾಕಿದನು. ಕಚ್, ಮಾಸ್ಕ್, ಮತ್ತು ಜೆಡ್ಡಗಳಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿ ಒಮನ್, ಪರ್ಷಿಯ, ತುರ್ಕಿ ಅಧಿಕಾರಿಗಳ ಬಳಿಗೆ ವ್ಯಾಪಾರ ನಿಯೋಗಿಗಳನ್ನು ಕಳುಹಿಸಿದನು. ಯಾವುದೇ ರೀತಿಯ ಆಪತ್ತು ಎದುರಾಗಲಿ ಅಂತಹ ಪರಿಸ್ಥಿತಿಯಲ್ಲಿ ಟಿಪ್ಪುವು ಎಂದೂ ಧೈರ್ಯ ಗೆಡುತ್ತಿರಲಿಲ್ಲ, ಯುದ್ಧ ತಂತ್ರದಲ್ಲಿ ತುಂಬಾ ನಿಪುಣ; ಆದರೆ ಸಾಕಷ್ಟು ವ್ಯವಹಾರ ಕೌಶಲವಿಲ್ಲದ್ದರಿಂದ ತನ್ನ ಕೆಲವು ಅಧಿಕಾರಿಗಳನ್ನು ತೆಗೆದುಹಾಕಿದನು. ಈ ಸಂದರ್ಭಗಳನ್ನು ಕಾಯುತ್ತಿದ್ದ ಬ್ರಿಟೀಷರು ಅಂತಹ ಅಧಿಕಾರಿಗಳನ್ನು ತಮ್ಮ ಕಡೆಗೆ ಒಲಿಸಿಕೊಂಡು ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುತ್ತಿದ್ದರು. ಟಿಪ್ಪು ದುಡುಕು ಮತ್ತು ಒರಟು ಸ್ವಭಾವದವನಾದ್ದರಿಂದ ಅವನಿಗೆ ತನ್ನ ಪ್ರತಿಸ್ಪರ್ಧಿ ಮತ್ತು ವೈರಿಗಳೊಡನೆ ಸಂಧಾನಕ್ಕೆ ಬರಲು ಸಾಧ್ಯವಾಗುತ್ತಿರಲಿಲ್ಲ. ಸ್ವತಂತ್ರ ಮನೋಭಾವ, ಸ್ವಪ್ರತಿಷ್ಠೆ, ಮತ್ತು ಹಟಮಾರಿ ಧೋರಣೆಗಳು ಅವನಲ್ಲಿದ್ದುದರಿಂದ ತನ್ನ ಎದುರಾಳಿಗಳೊಂದಿಗೆ ಎಂದೂ ಕೂಡ ಶಾಂತಿ ಮತ್ತು ಸೌಹಾರ್ದಗಳಿಂದ ನಡೆದುಕೊಳ್ಳಲು ಸಾಧ್ಯವಾಗಲಿಲ್ಲ, ಕೊನೆಗೆ ಇವುಗಳಿಂದಲೆ ತನ್ನ ಅಧಃಪತನಕ್ಕೆ ತಾನೇ ಕಾರಣನಾದ ಎಂಬುದು ವಿಶೇಷ.

ಇವೆಲ್ಲವುಗಳ ಜೊತೆಗೆ ಟಿಪ್ಪುವು ಕರ್ನಾಟಕದಲ್ಲಿ ಪಾಳೆಗಾರಿಕೆಯನ್ನು ಬಹುತೇಕವಾಗಿ ನಿರ್ಮೂಲ ಮಾಡುವುದರಲ್ಲಿ ಯಶಸ್ವಿಯಾಗಿದ್ದ. ಮಠಗಳ ಅಧಿಪತ್ಯಕ್ಕೆ ಕಡಿವಾಣ ಹಾಕಿದ್ದ. ಲಾಲ್‌ಬಾಗ್ ನಂತಹ ಸುಂದರವಾದ ಸಸ್ಯ ತೋಟದ ನಿರ್ಮಾಣ, ಶ್ರೀರಂಗ ಪಟ್ಟಣದಂತಹ ನಗರಗಳ ಅಭಿವೃದ್ಧಿ, ಸೈನಿಕರಿಗೆ ಭೂ ಹಂಚಿಕೆ, ವಾಣಿಜ್ಯಾಭಿವೃದ್ಧಿ, ಕೈಗಾರಿಕೆಗಳ ಬೆಳವಣಿಗೆ, ಪ್ರಗತಿಪರ ಭೂಕಂದಾಯ ಕಾಯಿದೆಗಳು, ಮತೀಯ ಸೌಹಾರ್ದತೆ, ಧರ್ಮ ಸಹಿಷ್ಣುತೆ, ದೇವಾಲಯಗಳ ರಕ್ಷಣೆ ಇವೇ ಮುಂತಾದವುಗಳು ಟಿಪ್ಪು ಸುಲ್ತಾನನ ಅಪ್ರತಿಮ ಗಣನೀಯ ಸಾಧನೆಗಳು. ವಿಪರ್ಯಾಸವೆಂದರೆ ಇತಿಹಾಸವೆನ್ನುವುದು ರಬ್ಬರ್ ಇದ್ದಂತೆ. ಅದನ್ನು ಹೇಗೆ ಬೇಕಾದರೂ ತಿರುಚಬಹುದು. ಯಾವ ರೂಪವನ್ನಾದರೂ ಕೊಡಬಹುದು. ಭಾರತೀಯ ಸನ್ನಿವೇಶದಲ್ಲಿ ಇದು ವ್ಯವಸ್ಥಿತವಾಗಿ ನಿರೂಪಿತವಾಗಿದೆ. ಬ್ರಿಟೀಷರಿಂದ ಆರಂಭಗೊಂಡ ಈ ಪ್ರಕ್ರಿಯೆ ಈಗ ಸಂಘ ಪರಿವಾರದ ಚಾಳಿಗೆ ಬಂದಿದೆಯಷ್ಟೆ. ಬ್ರಿಟೀಷರು ರಚಿಸಿದ, ಬರೆಸಿದ ಇತಿಹಾಸದಲ್ಲಿ ಮುಸ್ಲಿಂ ದೊರೆಗಳು ಆಳಿದ ಕಾಲವನ್ನು ಮುಸ್ಲಿಂ ಯುಗವೆಂದು ಕರೆಯಲಾಯಿತಾದರೂ ಬ್ರಿಟೀಷರ ಲೋಧಿ-ಬಾಬರ್ ಆಳ್ವಿಕೆಯನ್ನು ಕ್ರೈಸ್ತಯುಗವೆಂದು ಹೇಳಿಕೊಳ್ಳಲಿಲ್ಲ. ಘಜನಿ-ಲೋಧಿ-ಬಾಬರ್ ಮುಂತಾದ ಮುಸ್ಲಿಂ ದೊರೆಗಳು ಮಾಡಿದ ಆಕ್ರಮಣ ಲೂಟಿಯನ್ನು ಇಸ್ಲಾಂಗೆ ಸಮೀಕರಿಸಿದ

ಇತಿಹಾಸಕಾರರು, ಬ್ರಿಟೀಷರು ಮಾಡಿದ ಲೂಟಿಯನ್ನು ಕೇವಲ ಸಾಮ್ರಾಜ್ಯಶಾಹಿ, ವಸಾಹತುಶಾಹಿ ಎಂದು ಕರೆದರೇ ಹೊರತು ಕ್ರೈಸ್ತ ಧರ್ಮಕ್ಕೆ ಸಮೀಕರಿಸಲಿಲ್ಲ. ಒಂದೆಡೆ ಬ್ರಿಟೀಷ್ ಇತಿಹಾಸವನ್ನು ಧಿಕ್ಕರಿಸುವ ಸಂಘಪರಿವಾರದವರು, ಬ್ರಿಟೀಷರ ಶೈಲಿಯಲ್ಲಿ ಇತಿಹಾಸವನ್ನು ವಿಶ್ಲೇಷಿಸಲು ಹೊರಟಿರುವುದು ವಿಪರ್ಯಾಸವಲ್ಲವೇ" (ನಾ.ದಿವಾಕರ, ಸಂವಾದ ಜುಲೈ, ೨೦೦೪, ಪು:೧೦) ಟಿಪ್ಪು ದೇಶಪ್ರೇಮಿಯೋ ಅಥವಾ ದೇಶದ್ರೋಹಿಯೋ ಎನ್ನುವ ಪ್ರಶ್ನೆಗಿಂತಲೂ, ಟಿಪ್ಪು ಒಂದು ಪ್ರಾಂತದ ರಾಜ ಎನ್ನುವ ಅಂಶವನ್ನು ಗಮನದಲ್ಲಿಟ್ಟುಕೊಂಡು ವಿಮರ್ಶೆಗೊಳಪಡಿಸುವುದು ಸೂಕ್ತವೆನಿಸುತ್ತದೆ. ಮೂಲತಃ ಟಿಪ್ಪು ಒಬ್ಬ ರಾಜ, ಅವನು ಸಮಾಜ ಸೇವಕನಾಗಿರಲಿಲ್ಲವೆಂಬುದನ್ನು ಅರಿಯುವುದು ತುಂಬಾ ಅವಶ್ಯವಾಗಿದೆ. ಐತಿಹಾಸಿಕ ಕಾಲಘಟ್ಟಗಳಲ್ಲಿ ಒಬ್ಬ ರಾಜನಿಂದ ನಡೆಯಬಹುದಾದ ಪ್ರಮಾದಗಳೆಲ್ಲವೂ ಟಿಪ್ಪುವಿನಿಂದಲೂ ನಡೆದಿರುವ ಸಾಧ್ಯತೆಯಂತು ಖಂಡಿತಾಯಿದೆ. ಹಾಗೆ ನೋಡಿದರೆ ಪುರುಷೋತ್ತಮ ಶ್ರೀರಾಮನೇ ಪ್ರಮಾದವೆಸಗಿದ ಉದಾಹಣೆಯಿದೆ, ಆದರೆ ಪ್ರಜಾತಾಂತ್ರಿಕ ದೃಷ್ಟಿಕೋನಗಳಿಂದ ನೋಡಿದರೆ ಟಿಪ್ಪುವಿನ ಉತ್ತಮ ಕಾರ್ಯಗಳ ಅರಿವಾಗುತ್ತದೆ. ಅವನು ಕೈಗೊಂಡ ಜನಪದ ಕಾರ್ಯಗಳನ್ನು ಪ್ರಶಂಸಿಸಲೇಬೇಕಿದೆ. ಈ ಕಾರ್ಯಗಳನ್ನು ವಿಮರ್ಶೆಗೊಳಪಡಿಸಿ ಬೇರೆ ರಾಜರುಗಳೊಂದಿಗೆ ಹೋಲಿಸಿದಾಗ ಕರ್ನಾಟಕದ ಭವ್ಯ ಇತಿಹಾಸದಲ್ಲಿ ಟಿಪ್ಪುವು ಕೃಷ್ಣದೇವರಾಯ, ಪುಲಿಕೇಶಿ, ನೃಪತುಂಗ, ಮಯೂರವರ್ಮ, ಇತರರೊಡನೆ ಸಮನಾಗಿ ನಿಲ್ಲುತ್ತಾನೆ. "ಹಾಗಾಗಿ ಟಿಪ್ಪುವನ್ನು ಕರ್ನಾಟಕದ ಶ್ರೇಷ್ಠ ದೊರೆಗಳಲ್ಲಿ ಒಬ್ಬನೆಂದು ಗೌರವಿಸಬೇಕೆ ಹೊರತು, ಆತನಿಗೆ ಧಾರ್ಮಿಕ ಲೇಪನ ಮಾಡುವ ಅವಶ್ಯಕತೆಯಿಲ್ಲ. ಯಾಕೆಂದರೆ ಟಿಪ್ಪು ಯಾವುದೇ ಜನಾಂಗದ ಅಥವಾ ಧರ್ಮದ ಖಾಸಗಿ ಆಸ್ತಿಯೂ ಅಲ್ಲ. ಒಬ್ಬ ನಿರಂಕುಶ ಪ್ರಭುವಾಗಿ ಟಿಪ್ಪು ಕೈಗೊಂಡ ಜನಪರ ಕಾರ್ಯಗಳನ್ನು ನಮ್ಮ ಪ್ರಜಾತಾಂತ್ರಿಕ ಸರ್ಕಾರಗಳು ಕೈಗೊಳ್ಳುತ್ತಿವೆಯೆ ಎಂದು ಪರಾಮರ್ಶಿಸಿದರೆ, ಅದು ನಾವು ಟಿಪ್ಪು ಮತ್ತು ಆತನಂತಹ ಮಹಾನ್ ದೊರೆಗಳಿಗೆ ನೀಡುವ ಗೌರವವಾಗುತ್ತದೆ. ಟಿಪ್ಪುವಿನ ಸುತ್ತ ವಿಷ ಬೀಜಗಳ ನೆಟ್ಟು ವಿಷದ ಹಾವುಗಳ ಹುತ್ತ ನಿರ್ಮಿಸುವ ಬದಲು, ಲಾಲ್‌ಬಾಗಿನಂತಹ ಸುಂದರ ಸಸ್ಯಕಾಶಿಗಳನ್ನು ಬೆಳೆಸುವುದು, ಸಾಮಾಜಿಕ ಕಳಕಳಿಯುಳ್ಳ ಹಾಗೂ ನಾಗರೀಕತೆಯನ್ನು ಬಯಸುವ ಪ್ರತಿಯೊಬ್ಬ ವ್ಯಕ್ತಿಯ ಧ್ಯೇಯವಾಗಲಿ, ಅದೇ ಟಿಪ್ಪುವಿಗೆ ನಾವು ನೀಡಬಹುದಾದ ಅಶ್ರು ತರ್ಪಣ" (ನಾ.ದಿವಾಕರ್, ಸಂವಾದ ಜುಲೈ,೨೦೦೪, ಪು:೧೦) ವಾಗಿದೆ ಎಂಬುದನ್ನು ಮನಗಾಣಬೇಕಿದೆ. ಬ್ರಿಟೀಷ್ ಸಾಮ್ರಾಜ್ಯಶಾಹಿಯ ಕುತಂತ್ರ ನೀತಿಯಿಂದಾಗಿ ಮೈಸೂರು ಸಂಸ್ಥಾನದಲ್ಲಿ ಒಡಕುಂಟಾಗಿ ರಾಜ್ಯ ಕೈ ಬಿಟ್ಟು ಹೋಗುವ ವಿಷಮ ಸ್ಥಿತಿ ಬಂದಾಗ ಅದಕ್ಕೆ ಆಸರೆಯಾಗಿ ನಿಂತು ಆ ರಾಜ್ಯ ಉಳಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಇದೆಲ್ಲ ಶಿಷ್ಟ ಚರಿತ್ರೆಯಲ್ಲಿ ದಾಖಲಾದ ಅಂಶಗಳಾಗಿವೆ.

ಇತಿಹಾಸದ ಇನ್ನೊಂದು ಮುಖವೇ ವಾಕ್ ಪರಂಪರೆ, ಈ ವಾಕ್ ಪರಂಪರೆಯಲ್ಲಿ ಟಿಪ್ಪುವಿಗೆ ಸಂಬಂಧಿಸಿದ ನಿರೂಪಣೆಗಳು ಭಿನ್ನ ರೀತಿಯಲ್ಲಿವೆ. ಈ ನಿರೂಪಣೆಗಳು ಇಂದು ನಮ್ಮ ಇತಿಹಾಸ, ಸಂಸ್ಕೃತಿಗಳ ಮೂಲವನ್ನು ಕುರಿತು ತುಂಬಾ ಭಿನ್ನ ಮತ್ತು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಈ ನಿರೂಪಣೆಗಳು ಟಿಪ್ಪುವನ್ನು ಕಂಡ ರೀತಿ ಬಗ್ಗೆ ಸಹಜವಾಗೇ ತುಂಬಾ ಕುತೂಹಲ ಮೂಡುತ್ತದೆ. ಟಿಪ್ಪುವನ್ನು ಕುರಿತ ಅನೇಕ ಲಾವಣಿಗಳು, ಕಥೆಗಳು ಮೈಸೂರು, ಶ್ರೀರಂಗ ಪಟ್ಟಣದ ಆಸುಪಾಸಿನಲ್ಲಿ ದೀರ್ಘಕಾಲದಿಂದ ಜನ ಪ್ರಿಯವಾಗಿವೆ. ಹೈದರ್ ಮತ್ತು ಟೀಪ್ಪು ಬಗ್ಗೆ ಅನೇಕ ಲಾವಣಿಗಳು ಪ್ರಚಲಿತವಿದ್ದುವೆಂದು ಇತಿಹಾಸದ ಪುಟಗಳು ಅಲ್ಲಲ್ಲಿ ಹೇಳುತ್ತವೆ. ಕಾಲದ ಪದಾಘಾತಕ್ಕೆ ಸಿಕ್ಕೆ ಅವುಗಳಲ್ಲಿ ಬಹಳಷ್ಟು ಮರೆಯಾಗಿ ಹೋಗಿವೆ. ಕನ್ನಡದಲ್ಲಿ ಮೊಟ್ಟ ಮೊದಲು ಐತಿಹಾಸಿಕ ಲಾವಣಿಗಳನ್ನು ಸಂಗ್ರಹಿಸಿದ ಫ್ಲೀಟರಾಗಲೀ, ಇಡೀ ರಾಜ್ಯ ಸುತ್ತಿ ಜನಪದ ಸಾಹಿತ್ಯ ಸಂಗ್ರಹಿಸಿದ ಹೆಗ್ಗಳಿಕೆ ಹೊಂದಿರುವ ಮೈಸೂರು ವಿಶ್ವವಿದ್ಯಾಲಯದ ಜಾನಪದ ವಿಭಾಗದವರಾಗಲೀ, ಟೀಪು ಬಗ್ಗೆ ಇರುವ ಸಮಗ್ರ ಲಾವಣಿಗಳನ್ನು ಸಂಗ್ರಹಿಸಿ ಅಚ್ಚು ಹಾಕಿಸದೇ ಹೋದದ್ದು ಆಶ್ಚರ್ಯಕರ" (ಲಿಂಗದೇವರು ಹಳೆಮನೆ, ಧೀರ ಟೀಪುವಿನ ಲಾವಣಿಗಳು, ಪು:೧೩) ಹೀಗೆ ಜನಪದ ಪರಂಪರೆಯಲ್ಲಿ, ಮೌಖಿಕ ಸಾಹಿತ್ಯದಲ್ಲಿ ದಾಖಲಾಗಿರುವ ಮಾಹಿತಿಯನ್ನು ಜನರಿಗೆ ಮುಟ್ಟಿಸಲು ವಿಶ್ವವಿದ್ಯಾಲಯದಂತಹ ಸಂಸ್ಥೆಗಳೇ ಹಿಂದೇಟು ಹಾಕುತ್ತಿರುವುದರ ಹಿಂದಿನ ರಾಜಕೀಯ ಹಿತಾಸಕ್ತಿಯನ್ನು ಅರ್ಥ ಮಾಡಿಕೊಳ್ಳುವುದು ತುಂಬಾ ಅವಶ್ಯಕವಾಗಿದೆ ಎನಿಸುತ್ತದೆ.

ಜೀ.ಶಂ.ಪರಮಶಿವಯ್ಯನವರು ೧೯೭೭ರಲ್ಲಿ ನಮ್ಮ 'ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು' ಎಂಬ ಕೃತಿಯಲ್ಲಿ ಮಳವಳ್ಳಿಯ ರಾಚಪ್ಪನಿಂದ ಹಾಡಿದ "ಏನು ಮೋಸವಾಯಿತು" ಎಂಬ ಲಾವಣಿಯ ಕೆಲವು ಸಾಲುಗಳನ್ನು ಉದ್ಧರಿಸುತ್ತಾರೆ. ಟೀಪುವಿನ ಲಾವಣಿಗಳನ್ನು ಕುರಿತು ಅವರು ಹೀಗೆ ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ. ಸುಪ್ರಸಿದ್ಧ ಜನಪದ ಕಲಾವಿದ ದಿ.ಮಳವಳ್ಳಿ ರಾಚಯ್ಯನವರ ಪ್ರಕಾರ ಅವರ ಬಾಲ್ಯದಲ್ಲಿ ಟೀಪುಸುಲ್ತಾನ್ ಲಾವಣಿಯನ್ನು ಪೂಣವಾಗಿ ಹಾಡಲಾಗುತ್ತಿತ್ತು. ಆ ಲಾವಣಿಯನ್ನು ಹಾಡಿಸುವ ಸಂದರ್ಭಗಳು ಹೆಚ್ಚಾಗಿ ಒದಗಿ ಬರದೆ, ಪುಣ್ಯ ಸಂದರ್ಭಗಳಲ್ಲೆಲ್ಲಾ ಶಿವ ಕತೆಗಳನ್ನೋ, ಶಿವಶರಣರ ಕತೆಗಳನ್ನೋ, ಪುಣ್ಯ ಪುರುಷರ ಕತೆಗಳನ್ನೊ ಹಾಡಿಸುವ ಸಂದರ್ಭ ಹೆಚ್ಚಾಗಿದ್ದು ನೀಲಗಾರರು ತಮ್ಮ ಅಗತ್ಯಕ್ಕೆ ತಕ್ಕಂತೆ ಲಾವಣಿಗಳನ್ನು, ಕಾವ್ಯಗಳನ್ನು ಅಭ್ಯಾಸ ಮಾಡಿಕೊಂಡರು. ಟೀಪು ಸುಲ್ತಾನ ಲಾವಣಿ ಸಂಪೂರ್ಣವಾಗಿ ಮರೆತು ಹೋಯಿತು. ಅವರ ಈ ಅಭಿಪ್ರಾಯ ಸಮರ್ಥನೀಯವಾಗಿದೆ." (ಲಿಂಗದೇವರು ಹಳೇಮನೆ, ಧೀರ ಟೀಪುವಿನ ಲಾವಣಿಗಳು, ಪು:೧೪) ಆದರೆ ಟಿಪ್ಪು ಕುರಿತು ಮೌಖಿಕ ಪರಂಪರೆಯಲ್ಲಿ ದಾಖಲಾಗಿರುವ ಅನೇಕ ಅಂಶಗಳು ಲಿಖಿತ ಅಥವಾ ಶಿಷ್ಟ ಚರಿತ್ರೆಯಲ್ಲಿ ದಾಖಲಾಗಿಲ್ಲ. ಇದೊಂದು ದುರಂತ ಮತ್ತು ವಿಪರ್ಯಾಸವೇ ಸರಿ ಉದಾಹರಣೆಗೆ ಟೀಪುವನ್ನು ಅಸಹಿಷ್ಣುತೆಯ ಮತದ್ವೇಷಿ, ಪ್ರಕೋಪದ ಹುಚ್ಚು ಎಂದು ಹೇಳಿದವರಿಗೆ ಉತ್ತರದ ರೂಪದಲ್ಲಿ ಜನಪದರು.

ಜೋಡಿಸುತ್ತಿನ ಕೋಟೆಗೆ ಟೈಗರ್

ಆಗಿ ಕಾದಿದ್ದ

ಬೇಡಿದ ದ್ವಿಜರಿಗೆ ಬಿಡದೆ

ದಾನ ನೀಡಿದ್ದ

ಟೀಪುಸುಲ್ತಾನ ಹಿಂದೂ ಮುಸಲ್ಮಾನರ

ಉದ್ಧಾರಿ ದೊರೆಯಾಗಿದ್ದ." (ಅದೇ, ಪು:೨೭)

ಎಂದು ಹೇಳುತ್ತಾರೆ. ಅಲ್ಲದೆ ಅನೇಕ ಕಥೆಗಳೂ ಕೂಡ ಮೈಸೂರು, ಶ್ರೀರಂಗಪಟ್ಟಣ ಮುಂತಾದ ಕಡೆಗಳಲ್ಲಿ ತುಂಬಾ ಪ್ರಚಲಿತದಲ್ಲಿವೆ. ಉದಾಹರಣೆಗೆ ತನ್ನ ಪ್ರೀತಿಯ ಆನೆಗೆ ಬಂದ ಖಾಯಿಲೆ ವಾಸಿಯಾಗದೇ ಇದ್ದಾಗ ಮಾವುತ ತನ್ನ ಅನುಮತಿ ಪಡೆದು ನಂಜುಂಡನಿಗೆ ಹರಕೆ ಹೊರುತ್ತಾನೆ. ಖಾಯಿಲೆಯು ವಾಸಿಯಾಗುತ್ತದೆ. ಆಗ ನಂಜುಂಡನಿಗೆ 'ಹಕೀಂ ನಂಜುಂಡ' ಎಂದು ಕರೆದು ದೇವಸ್ಥಾನಕ್ಕೆ ಕಾಣಿಕೆಗಳನ್ನು ಸಲ್ಲಿಸುತ್ತಾನೆ. "ಯಾವ ಲಾವಣಿಯೂ ಟೀಪುವನ್ನು ಮತಾಂಧ, ಹಿಂದೂದ್ವೇಷಿ ಎಂದು ವರ್ಣಿಸದೇ ಇರುವುದು, ಟೀಪು ಶ್ರೀರಂಗಪಟ್ಟಣಗಳನ್ನು ಆಳಿದ್ದು ೧೭೮೨ರಿಂದ ೧೭೯೯ರವರೆಗೆ ತನ್ನ ಹದಿನೇಳು ವರ್ಷಗಳ ಅವಧಿಯ ಆಡಳಿತದಲ್ಲಿ ಅವನು ಕುದುರೆ ಬೆನ್ನಿನಿಂದ ಇಳಿದದ್ದೇ ಕಡಿಮೆ. ಅವನು ಸದಾಯುದ್ಧದಲ್ಲಿ ನಿರತನಾಗಿರುವಂತೆ ಬ್ರಿಟೀಷರು, ಹೈದರಾಬಾದ್ ನಿಜಾಮ, ಮರಾಠರು, ಮಲಬಾರಿನ ನಾಯಕಗಳು ಅವನಿಗೆ ಕಿರುಕುಳ ಕೊಡುತ್ತಲೇ ಇದ್ದರು. ಈ ಎಲ್ಲಾ ಐತಿಹಾಸಿಕ ಅಂಶಗಳನ್ನು ಈ ಲಾವಣಿಗಳು ಒಳಗೊಂಡಿವೆ. ಟೀಪುವಿನ ಇತಿಹಾಸವನ್ನು ಗಮನಿಸುವಾಗ ಈ ಲಾವಣಿಗಳನ್ನು ನಿರ್ಲಕ್ಷಿಸಲು ಸಾಧ್ಯವೇ ಇಲ್ಲ. ಆಶ್ಚರ್ಯವೆಂದರೆ, ಲಿಖಿತ ಇತಿಹಾಸದಲ್ಲಿ ಖಳನಾಯಕನೆಂದು ಚಿತ್ರಿತವಾಗಿರುವ ಟೀಪು ಇಲ್ಲಿಯವರೆಗೆ ಲಭ್ಯವಿರುವ ಜನಪದ ಸಾಹಿತ್ಯದಲ್ಲಿ" (ಅದೇ, ಪು:೨೭) ತುಂಬಾ ಜನಾನುರಾಗಿಯಾಗಿಯೂ, ಜನಪದ ಆಡಳಿತಗಾರ, ಚಾಣಾಕ್ಷ, ಕುಶಾಗ್ರಮನೆಯಾಗಿಯೂ, ರಾಷ್ಟ್ರವೀರನೆಂದೂ ದಾಖಲಾಗಿರುವುದು ಗಮನಿಸಲೇ ಬೇಕಾದ ಸಂಗತಿಯಾಗಿದೆ.

ಟಿಪ್ಪುವನ್ನು ಕುರಿತಾದ ಕೆಲವು ಲಾವಣಿಗಳು ಈ ಕೆಳಗಿನಂತಿವೆ. ಈ ಲಾವಣಿಗಳನ್ನು ಲಿಂಗದೇವರು ಹಳೆಮನೆಯವರ ಧೀರ ಟೀಪುವಿನ ಲಾವಣಿಗಳು ಎಂಬ ಸಂಕಲನದಿಂದ ತೆಗೆದುಕೊಳ್ಳಲಾಗಿದೆ.ಪ್ರಸ್ತುತ ಇವುಗಳಲ್ಲಿ ಆರು ಲಾವಣಿಗಳು ಸಂಗ್ರಹಗೊಂಡಿವೆ. ಇವುಗಳಲ್ಲಿ 'ಮೈಸೂರು ಹುಲಿ ಟೀಪು ಸುಲ್ತಾನ್' ಮತ್ತು 'ಟೀಪು ಸುಲ್ತಾನ್' ಎಂಬ ಲಾವಣಿಗಳು ಸಮಗ್ರವಾದವುಗಳು. ಈ ಎರಡೂ ಲಾವಣಿಗಳ ಕಡೆಯಲ್ಲಿ ಅವುಗಳನ್ನು ಕಟ್ಟಿದ ಲಾವಣಿಕಾರರ ಹೆಸರುಗಳಿವೆ. 'ಮೈಸೂರು ಹುಲಿ ಟೀಪು ಸುಲ್ತಾನ್' ಲಾವಣಿಯನ್ನು ಕಟ್ಟಿದ ಲಾವಣಿಕಾರನ ಹೆಸರು ನೀಲಕಂಠ ಎಂದು. "ಟೀಪು ಸುಲ್ತಾನ್" ಲಾವಣಿಯನ್ನು ಹಾಡಿದವನು ರಾಜೋಜಿ ಎಂಬುವನು."ಮೈಸೂರು ಟೀಪು ಸುಲ್ತಾನ ಲಾವಣಿಯು ಹೈದರನ ಹಿನ್ನೆಲೆಯಲ್ಲಿ ಪ್ರಾರಂಭವಾಗುತ್ತದೆ. (ಲಿಂಗದೇವರು ಹಳೆಮನೆ, ಧೀರ ಟೀಪುವಿನ ಲಾವಣಿಗಳು, ಪು:೧೫-೧೬)

## ಮೈಸೂರು ಹುಲಿ ಟಿಪ್ಪುಸುಲ್ತಾನನ ಲಾವಣಿ

ಭೇಷಕ್ ತಮಾಷಾ ಟೌಗರ್ ನಿಶಾನಾ
ಟಿಪ್ಪುಸುಲ್ತಾನನ ಬಿರುದಾಯ್ತು|
ಮಸಲತ್ ಮಾಡಿದ ಮೀರ್ಸಾದಕನಿಗೆ
ದೇಶದ್ರೋಹಿ ಎಂಬ್ಹೆಸರಾಯ್ತು||

ಟೀಪೂ ವಂಶದ ಮೊದಲನೆ ಯೋಧನು
ಅಫರಷ ಎಂತೆಂಬವನು|
ಆ ಪರಿ ಅರಬ್ಬಿ ದೇಶವನುರ್ಜಿಸಿ
ಬಿಜಾಪುರದ ಷಾ ಬಳಿಯಿದ್ದನು||

ಟೂಪೂ ತಾತನು ಫತುಲ್ಲಖಾನನು
ಶೀರ್‍ಮಾದ ನವಾಬನ ಸೇರಿದ್ದನು|
ಈ ಪರಿ ವೀರನು ಗುಮ್ಮನ ಹಳ್ಳಿಯ
ಜಹಗೀರದಾರಿಯ ಪಡೆದಿದ್ದನು||

ಟೀಪೂ ತಂದೆಯು ಹೈದರಾಲಿಯು
ಮೈಸೂರ ಸೈನ್ಯದೊಳಿರುತ್ತಿದ್ದನು|
ಭೋಪರಿ ಶೌರ್‍ಯದಿ ದೇವನಹಳ್ಳಿ
ಮೇಣ್ ಚಿತ್ರದುರ್ಗವನ್ನು ಹಿಡಿದಿದ್ದನು||

ಟೀಪೂ ಪುತ್ರನು ಫತೆ ಹೈದರನು
ಪ್ರಬುದ್ಧ ಮಾನದಿ ಮೆರೆದಿದ್ದನು|
ಟೀಪೂಸುಲ್ತಾನನು ವೈರಿಯ ಮರ್ದಿಸಿ
ಮೈಸೂರು ಹುಲಿಯೆಂದೆನಿಸಿದ್ದನು||

ಹೈದರ ಕಾಲದಿ ಮೈಸೂರು ದೇಶ
ಮೊದಲಿಗಿಂತ ಮುಂದೊರೆದಿತ್ತು|
ಹೈದರ ಆಲಿಗೆ ಖಾನ್ ಬಹುದ್ದೂರ

ನವೆಬನೆಂಬುವ ಬಿರುದಿತ್ತು ||
ಹೈದರ ಕೈಯಲಿ ಐವತ್ತಾರು ಜನ
ಪಾಳೆಯಗಾರರ ಫೌಜಿತ್ತು
ಹೈದರನ ಚಂ ಪ್ರತಾಪದ ಕಾಲದಿ
ಲಂಡನ್ ಕೂಡ ಒಡಕಿರುತ್ತಿತ್ತು

ಇಷ್ಟಲ್ಲದೆ ಹಿಂದುಸ್ಥಾನವೆಲ್ಲಾ ಬೆದರಿತ್ತು|
ಎಷ್ಟೇಳಲು ತೀರದು ಹೈದರಾಲಿಯ ದವಲತ್ತು||
ಶ್ರೇಷ್ಠೆನಿಪ ರತ್ನ ಕೊಹಿನೂರು ಇವನಿಗೆ ಸಿಕ್ಕಿತ್ತು|
ಇಷ್ಟಾರ್ಥ ಸಿದ್ಧಿಯೊಳು ಮೆರೆಯುತ್ತಿತ್ತು ಸಂಪತ್ತು

ಸತ್ವಗುಣ ಹೈದರನೊಳಗಿತ್ತು|
ಮುತ್ಸರೊಳು ನಂಬಿಕೆ ಬಹಳಿತ್ತು||

ಸತ್ಯಪೂರ್ಣಯ್ಯನ ಪೊಂದಿತ್ತ|
ಉತ್ತಮ ವೀರರ ನಿತ್ಯ ಪ್ರತಾಪದಿ ಸತ್ವವು ಬೆರೆದಿತ್ತು||
ಮುಸಲಿಂ ಹೈದರಾಲಿಗೆ ಪ್ರೀತಿ ಇದ್ದಿತು ಜನರಲಿ|
ಭೇದವ ಬಿಟ್ಟು ಹೈದರ ಖ್ಯಾತಿ ಪೊಂದಿದನಿಳೆಯಲಿ||

ಮೈಸೂರ ಹೈದರಾಲಿಯ ಕೀತಿಯು ದೇಶವಿದೇಶದಿ ಮೆರೆದೋಯ್ತು|
ಮಸಲತ್ ಮಾಡಿದ ಮೀರ್ಸಾದಕನಿಗೆ ದೇಶದ್ರೋಹಿ ಎಂಬ್ಹೆಸರಾಯ್ತು

ಉತ್ತಮ ಹೈದರ ಚಿತ್ತದೊಳದ್ಭುತ ಶತ್ರುವ ಜಯಿಸುವ ಬಯಕಿತ್ತು
ಸುತ್ತಣ ದೇಶ ಕೈವಶವಾದರು ಚಿತ್ರದುರ್ಗ ಕೈಮೀರಿತ್ತು

ಎತ್ತಿದ ಹೈದರ ಚಿತ್ರದುರ್ಗದ ಮೇಲ್ ಲಕ್ಷ ಫೌಜೊರಟಿತ್ತು
ಹೊತ್ತನು ಕಳೆಯದೆ ಚಿತ್ರದುರ್ಗವನು ಮುತ್ತಿದನಾಕ್ಷಣ ಸುತ್ತು ಮುತ್ತು

ಇತ್ತು ಕೇಳಿ ಏಳ್ ಸುತ್ತಿನ ಕೋಟೆಯ ಚಿತ್ರದುರ್ಗ ಬಲ್ ಕಡಿದಿತ್ತು
ಮುತ್ತಿ ದುರ್ಗ ಬೇಸತ್ತನ್ನು ಹೈದರ ಹತ್ತಾರು ಮಾಸಗಳಾಗಿತ್ತು

ಭಿತ್ತರ ದಿಕ್ಕೆಟ್ಟ ಮದಕರಿ ಸೈನ್ಯವು ಚಿತ್ರದುರ್ಗದೊಳಡಗಿತ್ತು
ಕತ್ತಿ ಕಠಾರಿ ಫಿರಂಗಿ ಬಂದೂಕ ಐವತ್ತು ಸಾವಿರ ದಂಡಿತ್ತು
ಗಂಡನು ಬಿಸಿಲೊಳು ಉಂಡು ಮಲಗಿರಲು ಹೆಂಡತಿ ಒಬವ್ವ ಎಂಬುವಳು
ಗಂಡನ ಬದಲಾಗೆಂಡತಿ ವನಿಕೆಯ ಕಿಂಡಿಯೊಳಿದ್ದವು ಪಹರೆಯೊಳು

ಗಂಡು ಬಹದ್ದೂರು ದಂಡಿನ ಯೋಧರ ತಂಡವು ನುಗ್ಗಲು ಕಿಂಡಿಯೊಳು
ಕಂಡಕ್ಷಣವೇ ಖತಿಗೊಂಡು ಜಜ್ಜಿದಳು ರುಂಡಗಳ ಎಣಿಸುತ ವನಿಕೆಯೊಳು

ರಂಗಟ್ಟನ ಕೋಟೆ ಬಾಗಿಲು ಬಲವಾಗಿತ್ತು
ಬಂಗಾರದ ಗಟ್ಟಿಯ ಸಂತೆ ಬಾಗಲಿ ಎನಿಸುತ್ತಿತ್ತು

ಶೃಂಗಾರದಿ ನೀಯ್ಕರ ಕೋಟೆ ಬಾಗಿಲು ಇರುತ್ತಿತ್ತು
ಜಂಗಾಯಿತ್ತು ವನಿತೆಯ ಬಾಗಲೊಳಗೆ ಗಮ್ಮತ್ತು

ದುರ್ಗದ ಮದಕರಿ ನಾಯ್ಕನಿಗೆ|
ಭಾಗರ್ವವನ ಕರುಣವು ಕುಂದೋಗೆ

ದುರ್ಗಿ ಉಚ್ಚಂಗಿಯ ಕೃಪೆ ತೊಲಗೇ
ನುಗ್ಗಿತು ಹೈದರಾಲಿಯ ಸೈನ್ಯವು ಚಿತ್ರದುರ್ಗದೊಳಗೆ

ಏಕಾನಥೇಶ್ವರಿಯ ಕೃಪೆಯದು ತೀರಿ ಮದಕರಿ ನಾಯ್ಕನು
ಏಕಾಏಕಿಯಾಳ ತೋರಿದ ವಿಕ್ರಮ ಸೆರೆಯ ಸಿಕ್ಕಿದ ನೀತನು

ವಿಶೇಷ ತಂತ್ರದಿ ಕುಶಲತೆಯ ಹೈದರ ಆಲಿಗೆ ಜಯವಾಯ್ತು
ಮಸಲತ್ ಮಾಡಿದ ಮೀರನಾದಕನಿಗೆ ದೇಶದ್ರೋಹಿ ಎಂಬ್ಹೆಸರಾಯ್ತು

ಭೀಕರ ಶತೃ ಭಯಂಕರನೆಂಬುತ ಲೋಕದಿ ಹೈದರ್ ಪೆಸರಿತ್ತು
ಲೋಕದಳತಿ ಪ್ರಖ್ಯಾತಿಯ ಪಡೆದ ಶ್ರೀಕಂಠನ ದಯೆ ಇವಗಿತ್ತು

ಹಾಕಿದ ಹೈದರ್ ಆರ್ಕಾಟ ಮುತ್ತಿಗೆ ಏಕದಿ ಕದನವು ನಡೆದಿತ್ತು
ತಾಕಿತು ಮೃತ್ಯುವು ಹೈದರಾಲಿಗೆ ಭೀಕರ ಬೆನ್ನಫಣಿ ಎದ್ದಿತ್ತು

ಈ ಕಡೆ ತಾಂತ್ರಿಕ ದಿವಾನ ಪೂರ್ಣಯ್ಯನ ಚಮತ್ಕಾರ ಅತಿ ಚುರುಕಿತ್ತು

ಲೋಕ ಶಿಖಾಮಣಿ ಹೈದರಾಲಿಗೆ ಅಕಾಲ ಮರಣವು ಒದಗಿತ್ತು
ಶ್ರೀರಂಗದ ಪಟ್ಟದ ಮುಖಂಡರಿಗೆ ದುಃಖದ ವಾರ್ತೆಯು ಮುಟ್ಟಿತ್ತು
ವ್ಯಾಕುಲವೆಂಬ ಶೋಕ ಸಾಗರದಲ್ಲಿ ಮೈಸೂರು ದೇಶವೆ ಮುಳುಗಿತ್ತು

ಹೈದರ ಅಲಿಯು ಅರಿತವನಲ್ಲವು ಓದು ಬರೆಹವೆಂತೆಂಬುದನು
ಆದರು ಖಚಿತದಿ ಕನ್ನಡ ಭಾಷೆಯೊಳು ಮಾತನಾಡುವುದನ್ನು ಅರಿತಿದ್ದನು

ಮೋದದಿ ವೆರಿಗಳ ಮರ್ದಿಸಿ ಮೈಸೂರ ಧ್ವಜ ಮೆರೆಸಿದ್ದನು
ಈ ಧರೆಯಿಂದಲಿ ಕಣ್ಮರೆಯಾದನು ಕನ್ನಡದ ಗಂಡುಗಲಿ ಎಂದೆನಿದವನು

ಅಪ್ಪ ಕಟ್ಟಿ ಮೈಸೂರ ದೇಶ ದೊಡ್ಡದಿತ್ತಲ್ಲಾ|
ಟೀಪುವಿನ ಕಾಲದೊಳು ಇನ್ನು ವಿಸ್ತರಿಸಿತಲ್ಲಾ||

ತಪ್ಪವನ್ನೇ ತಂದರು ಇಷ್ಟಾದರೂ ಬಿಡಲಿಲ್ಲಾ
ಬೆಪ್ಪಾದರು ಅರಿಗಳು ಕೇಳಿ ಟೀಪು ಜಯಿಸೊಲ್ಲಾ

ಹೈದರನ ಬಳಿಕ ಟೀಪುಸುಲ್ತಾನ
ಬೆದರಿಸಿದ ಗದಗದ ಹಿಂದುಸ್ಥಾನ

ಪದವಿಯೊ ಮೈಸೂರಿನ ಸುಲ್ತಾನ್
ಕದನದಿ ಮಂಗ್ಳೂರ್ ಹಿಡಿದನು ಕೈವಶ ಬೆದರಿತು ಲಂಡನ್

ಅರವು ಆಂಧ್ರ ಶುರುವಿಗಿಡಿದನು ಪೌರುಶದಿ ಕೊಯಮತ್ತೂರನು
ನಿರುತ ಲೂಟಿಯ ಹೊಡೆಯುತಲಿದ್ದನು ನೀಲಗಿರಿ ಮಲೆನಾಡನು
ಪೌರುಶದಿ ಮಲಬಾರನು

ಮೈಸೂರ ಪಾಜಾನನ ಘರ್ಜನೆ ಕೇಳಿ ಲಂಡನ್ ಪಳುಗಳು ಬೆದರೋಯ್ತು
ಮಸಲತ್ ಮಾಡಿದ ಮೀರ್ಸಾದಕನಿಗೆ ದೇಶದ್ರೋಹಿ ಎಂಬ್ಹೆಸರಾಯ್ತು

ಅಟಾಟೋಪದಿ ಟೀಪುಸುತ್ತಾನನು ಆರ್ಕಾಟ್ ಲೂಟಿಯ ಮಾಡಿದನು
ಏಟೇಟಿನ ಮೇಲ್ ಉಲ್ಟಾ ಫರಂಗಿಯ ಕೋರಿಗಳೆಷ್ಟೂ ಲೂಟಿದ್ದನು

ನಟನೆಯ ನೈಜಾಂ ಮರಾಠಿ ಪೇಷ್ವೆಯ ಪಟಾಲಮ್ಮ ದಿಟ್ಟ ಗೆದ್ದಿದನು

ಬ್ರಿಟಿಷ್ ಜನಾಂಗದ ಈಷ್ಟ ಇಂಡಿಯಾ ಕಂಪನಿ ಲಾಷ್ಟಿಗೆ ಮಾಡಿದ್ದನು

ಕೋಟಲೇ ಹತ್ತಿದ ಬ್ರಿಟಿಷ್ ವರ್ತಕರು ಕೂಟ ಗೈದರು ಮಸಲತ್ತನ್ನು
ಲೂಟಿಯನೊಡೆಯಲು ಶ್ರೀರಂಗಪಟ್ಟಕ್ಕೆ ಜನರಲ್ ಹ್ಯಾರಿಸ್ ಬಂದಿದ್ದನು

ಮಿಟ ಮಿಟ ಕಣ್ ಬಿಡುತ್ತಿದ್ದ ಮರಾಟ ಸಪೋರ್ಟಾಗಿ ಸೈನ್ಯ ತಂದಿದ್ದನು
ಕಟಕಟ ಹಲ್ ಕಡಿಯುತ್ತ ನಿಜಾಮನು ತಟಕ್ಕನೇ ಖಳ ಹೊಕ್ಕಿದನು

ಮೀರ ಕಮರುದ್ದೀ಼ ಖಾ಼ ಸೇನಾಪತಿ ಸೋತನು ಈರೋಡ ಬಳಿಯಲಿ|
ಬಾರೋದ್ದೀನನ ಬಲವೆಲ್ಲಾ ಮಡಿದಿತು ಕೂಗಳತೆಯ ಮಳವಳ್ಳಿಯಲಿ||

ಫಿರಂಗಿ ದಳಪತಿ ಮಾನ್ಸಿಯರ ಲಾಲಿಯು ಮೂರ್ಛೆ ಬಿದ್ದನು ರಣದಲ್ಲಿ |
ಮೀರ ಸಾಧಕನ ದ್ರೋಹದಿ ಸತ್ತನು ಸೈಯ್ಯದ ಗಫೂರ ಗುಂಡೇಟಿನಲಿ ||

ಘಡ ಘಡಲ್ ಗುಂಡೊಡೆದರು ಕೋಟೆಗೆ |
ಗಡಖಿಡಿಯು ಹತ್ತಿತ್ತು ಶ್ರೀರಂಗಪಟ್ನದೊಳಗೆ ||

ಕಡುದ್ರೋಹಿಗಳಾಟ ಮದ್ದಿನ ಮನೆ ಉರಿದೋಗೆ |
ಇಡಿಸಿದ್ದ ಫಿರಂಗಿಯು ಇಳಿದೋಯ್ತು ಮಣ್ಣೊಳಗೆ

ವಂಚಕರ ಮಿಂಚಿನಾಟ ಬಳ್ಳಿ
ಸಂಚರಿಸಿ ಹೊಚಲಾಗಿತ್ತು

ಕಂಚ ದಂಡಿತ್ತು ಕೋಟೆಯಲ್ಲಿ
ವಂಚನೆ ಮಾಡಿತು ಫ್ರೆಂಚರ ಸೈನ್ಯವು ಕೊಚ ಕಾಲದಲ್ಲಿ

ಮೀರಸಾಧಕನಾಟ ಇಂಪಿನಾಟಕವೆ ಆಗಿದ್ದಿತು
ದಾರಿ ತೋರಿತು ವೈರಿ ಜನರಿಗೆ ಭಾರಿ ಕಷ್ಟವೇ ತಪ್ಪಿತು

ಖಾಸಾ ದಂಡಿನ ಶ್ರೇಷ್ಟ ಮುಖಂಡರ ಮೋಸವು ಸುಲ್ತಾನರಿಗೆ ಅರಿವಾಯ್ತು
ಮಸಲತ್ ಮಾಡಿದ ಮೀರಸಾಧಕನಿಗೆ ದೇಶ ದ್ರೋಹಿ ಎಂಬ್ಹೆಸರಾಯ್ತು

ಹರಾಮ ಖೋರರ ಕರಾಮತ್ ಅರತನು ಟೀಪುಸುಲ್ತಾನನು ನಿಮಿಷದಲಿ

ಅರೇ ಹಮಾರೇ ನಮಖ್ಬರಾಮ ಕರೇಸೋ ತಾಯೆಂದ ಮನಸ್ಸಿನಲಿ
ಸ್ವರಾಜ್ಯ ರಕ್ಷಣೆಗೋಸ್ಕರ ಸುಲ್ತಾನ ರಣಾಗ್ರ ಹೊರಟನು ರೋಷದಲಿ
ಫರಂಗಿ ಸೋಲ್ಜರ ತರಂಗ ಮಧ್ಯದಿ ತುರಂಗ ಬಿಟ್ಟನು ತ್ವರಿತದಲಿ

ಪರಂಪರೆಯಿಂಪರ ವಿರೋಧಿ ಫೋಜನು ಕುರಿಗಳಂದದಿ ಖಡ್ಗದಲಿ
ಸರಾಸರಿಯಿಲ್ ಬರೆಯಲು ಸಿಗದು ತರಿದನೆಷ್ಟೋ ಶಿರವನಲ್ಲಿ

ಪರಾಕ್ರಮದಿ ಬಲು ಹೋರಾಡಿ ಬಿದ್ದನು ಸಾರಂಗ ಬಾಗಿಲ ಗವಿಯ ಬಳಿ
ಫರಂಗಿ ಫೋಜಿನ ತರಂಗ ನುಗ್ಗಿತು ಶ್ರೀರಂಗನ ಧಾನಮ ಪಟ್ಟದಲಿ

ಟೀಪೂಸುಲ್ತಾನನ ಹದಿನೇಳು ವರುಷದ ಆಡಳಿತ ಕೊನೆಯಾಯ್ತು
ಟೀಪು ರಾಜ್ಯದೊಳು ಶರಾಬು, ಶೇಂದಿ ಗಾಂಜಾ ಅಫಾಮು ಇರಲಿಲ್ಲ

ಟೀಪುವಿನ ಕಾಲದೊಳು ಜೂಜಿನಾಟ ಮೇಣ್ ವ್ಯಭಿಚಾರದ ಸುಳಿವಿಲ್ಲ
ಜ್ಞಾಪಕವಿದ್ದಿತು ಸಬ್ಬಲ್ ರಾಣಿಯ ದಿಣ್ಣೆ ಭೀತಿಯು ಜನಕ್ಕೆಲ್ಲಾ

ಹುಲಿ ಸೀಳಿದ ದೊರೆ ಅಳಿದೋದ ಮೇಲೆ ರಣದಲ್ಲಿ
ಮಳೆಯಾಯಿತು ಗಳಿಗೇಲಿ ಪ್ರಳಯದಂತೆ ಭರದಲ್ಲಿ

ಸುಲಿಗೆಯಾ ಮಾಡಿದರು ಶತ್ರುಜನರು ಪುರದಲ್ಲಿ
ಬಳಿಕಾದ ವಿವರ ಬರೆದೇನು ಇಲ್ಲಿ ಫಲವಿಲ್ಲ

ಮುಂದನೊಳು ಮುಮ್ಮಡಿ ಕಷ್ಣರಾಜರೀಗೆ
ಸಂದಿತು ರಾಜ್ಯ ಸಾವಿರದೇಳ್ನೂರ ತೊಂಭತ್ತೊಂಭತ್ತೊಳಗೆ

ರಾಜಧಾನಿ ಮೈಸೂರ ಪಟ್ಟ ಮಾದರಿ ನವ ರೀತಿಯಲ್ಲಿ
ಸೋಜಿಗದಿ ರಾಜಿಪುದು ಶ್ರೀ ಚಾಮುಂಡೇಶ್ವರಿ ಕೃಪೆಯಲ್ಲಿ

ಶೇಷನ ಗಿರಿಹರಿದಾಸ ಪಟ್ಟಣ್ಣನ ಲೇಸಿನ ಕುರಣವು ನವಗಾಯ್ತು
ಪೋಷಿಪ ಶ್ರೀ ಗುರು ದಾಸ ನಂಜಣ್ಣನ ಸುತ ನೀಲ್ಕಂಠನ ಪದವಾಯ್ತು

**ಟೀಪೂ ಸುಲ್ತಾನ್ ಲಾವಣಿ**
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪವಿ ಇಂಗ್ಲೀಷರ ನೆಲೆ ಆದೀತು

ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಣ ಸುಲ್ತಾನ್ ದವಲತ್ತು ಹೋದಿತು

ಇಂಡ್ಯಾ ದೇಶದಲ್ಲಿ ಪುಂಡು ರಾಜನೆಂದು ಇಂಗ್ಲಾಂಡ್‌ವರೆಗೂ ಹೆಸರಿತ್ತು
ಫ್ರೆಂಚರ ಸ್ನಹದಿ ಪವಜನು ಹೆಚ್ಚಿಸಿ ಭರತ ಖಂಡದಲಿ ಭಯವಿತ್ತು

ಇಂಗ್ಲಿಷ್‌ನವರಕೂಡೆ ಲಡಾಯಿ ಮಾಡೋಕೆ ಟೀಪೂಸುಲ್ತಾನ್‌ಗೆ ಮನಸಿತ್ತು
ಕಾಬೂಲ್ ಷಾರ್ಮ ಷಾಹನೊಡನೆ ಕಾಗದ ಪತ್ರದಿ ಸ್ನೇಹವಿತ್ತು

ಮೈಸೂರ್ ಹುಲಿಯಾ ಹಾವಳಿ ಕೇಳಿ ಜನರಲ್ ವೆಲ್ಲಸ್ಲಿಗೆ ಬಲ್ ನಿಗಾಬಿತ್ತು
ಜನರಲ್ ಹಾರಿಸ್ ಎಂಬುವರ ಜೊತೆಯಲಿ ಹದಿನೆಂಟು ಸಾವಿರ ಜನವಿತ್ತು

ಸುತ್ತಾ ಕಲ್ಲಿ ಕೋಟೆ ನಡುವೆ ಸುಲ್ತಾರ್ಪೇಟೆ ನೋಡಲು ಆನಂದವಾಗಿತ್ತು
ತಯಾರು ಆಗಿ ಹದಿನಾರು ಸಾವಿರ ಹೈದರಾಬಾದಿನಿಂದ ಪವಜು ಬಂತು

ಮರಾಟೆರಾಜಗೆ ಮೂಲೆಗಾಕಿದ್ದ ಇದೇವತ್ ಎಂದೇ ಎದುರಾಯ್ತು
ನಡುವೆ ರಂಗನಗುಡೀ ಎರಡು ಸುತ್ತಿನ ಕೋಟೋ ಕೋಟೆಯೊಳ್ ಮದ್ದು ಗುಂಡಿತ್ತು

ಸಮಯ ಕಾಯುವ ಸೋಜರ್ ಪವುಜು ಸುತ್ತಮುತ್ತ ಗೇರಾಯಿಸಿತ್ತು
ಪಶ್ಚಿಮ ದಿಕ್ಕಿನಿಂದ ಬಿದ್ದಿತು ಗುಂಡು ಕಟ್ಟಿದ ಫಿರಂಗಿ ಕೆಳಗಾಯಿತು.

ಏನೇಳಲಿ ಅಣ್ಣ ಗುಂಡು ಕೋಟೆಗೆ
ನಮ್ಮ ರಾಜನ ದಂಡೂ ಇಲ್ಲವಲ್ಲಾ ಊರೊಳಗೆ
ಘೇರಾಯಿಸಿ ಕೋಟೆಮೇಗೆ ಹತ್ತಿದರು ಕ್ಷಣದಾಗೆ
ಸಟ್ಟ ಶನಿವಾರ ಮಧ್ಯಾಹ್ನ ಸುಟ್ಟರು ಮದ್ದಿನ ಮನೆಗೆ
ಹಸರೂ ಛತ್ರಿ ನಿಗಾದಿಂದ ಕೊಂದರು ಸೈದ್‌ಗಪೂರಿಗೆ

ಸೈದ್ ಗಪೂರ ಮಡದ ಸುದ್ದಿಯ ಕೇಳಿ
ಸುಲ್ತಾನನ ಮನದೊಳು ಚಿಂತೆ ಬಂತು
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಣ ಸುಲ್ತಾನ್ ದವಲತ್ತು ಹೋದಿತ್ತು

ರಂಗಿಗೆ ಲಕ್ಷ ಜಂಗಿಯ ಫೌಜಿದ್ದು ರಂಗನ ಪಟ್ನಕ್ಕೆ ದಿಕ್ಕಿಲ್ಲಾ
ಭಂಗವಾದೀತು ಶೃಂಗಾರವಾದ ಕೋಟೆ ಪೃಥ್ವಿಲಿನೋಡೇನೆಂದರೂ ಇಲ್ಲ

ರಂಗೂಮಹಲ್ ಮಮೇಲೆ ಜಂಗಿಸುತ್ತಾ ತಾ ಕಂಗೆಟ್ಟು ನೋಡುತಾನೆ ದಿಕ್ಕಿಲ್ಲಾ
ಸಂಬಳ ತಿನ್ನುವ ದ್ರೋಹಿಗಳ ಮುಖ ಕಂಡೆನೆಂದರೂ ಅಲ್ಲಿಲ್ಲಾ

ಅಂತಃಪುರಕೋಗಿ ಶೃಂಗಾರ ಸ್ತ್ರೀಯರೊಳ್ ಚಂದದಿ ಹೇಳುವ ವಂದುಸೊಲ್ಲಾ
ಇಂದು ನಿಮ್ಮಯ ತಂದೆ ಮನೆಗೋಗಿ ಕುಂದದೆ ಬಾಳಗಿ ನೀವೆಲ್ಲಾ

ಬಾಹಾರ ಮುಖನೋಡಿ ಬಹು ದುಃಖ ಮಾಡುತ್ತ ಯಾ ಮಹಮದ್ ಅನ್ನುವನಲ್ಲಾ
ಅಸುಳೆರ ಮುಖ ನೋಡಿ ವಸುಧೆ ಆಳುವ ರಾಜ ವ್ಯಸನದಶರದಿಲೆ ಬಿದ್ದನಲ್ಲಾ

ಕಾನಂತ ಸುತ್ತ ಶೋಕವ ಮಾಡುವ ದಿಕ್ಕು ಯಾರು ನವಗಿಲ್ಲವಲ್ಲಾ
ದಂಡೆತ್ತೋದಮೇಲೆ ಮುಂಡೇರು ನಾವಾದೋ ಪುಂಡರು ಕೆಡಿಸದೆ ಬಿಡರಲ್ಲಾ

ಕಂಡೆವು ಸ್ವಪ್ನ ಮುಂಡೆರಾಗಿದ್ದೊ ದಂಡಿಗೋಗ ಬ್ಯಾಡ  ಈ ದಿನವೆಲ್ಲಾ
ಕಂಡರೆ ಶಿರವನು ತುಂಡು ಮಾಡುವ ಮಂತ್ರಿಗಳ್ ದ್ರಾಹವಗೈದರಲ್ಲಾ

ಹಿಂದ್ಯಾರ್ ಪತಿಗಳ ಅಗಲಿಸಿದ್ದವೋ ಇಂದು ನಮ್ಮ ಪತಿ ಅಗಲುವನಲ್ಲ
ರಂಗನಾಥ ಓ ಗರುಡ ತುರಂಗ ನಿನ್ನ ಪಟ್ಣ ಭಂಗವಾಯಿತಲ್ಲಾ

ತಂದೆ ಹಿಡಕೊಂಡು ಕಂದರು ಅಳುತಾರೆ ಮುಂದ್ಯಾರ್ ಕರ್ತರು ನಮಗಿಲ್ಲ ಬಂಧುಬಳಗನೋಡಿ
ಬದುಕುತ್ತಿರುವರು ಭಾಗ್ಯದಪ್ರಭು ಹೋಗುವೆಯಲ್ಲಾ

ಕಾಕಿಟೋಪಿಯ ಜನಗಳ್ ಲೂಟಿಮಾಡುವರು ಊರೊಳಗೆ
ಟೈಗಲ್ ಟೀಪುವು ನೋಡಿ ಹತ್ತಿದನು ಕುದುರೆಯ ಮ್ಯಾಗೆ
ಗೋಳಾಟವಾದಿತು ರಂಗಮಹಲ್ ಗೃಹದಾಗೆ
ಆನೆಕುದುರೆ ಸಿಪಾಯಿ ಪೈದಲ್ ಪೌಜು ಜೊತೆಯಾಗೆ
ಕಾಳಗ ಹತ್ತಿತು ಮಟ್ಟಮಧ್ಯಾಹ್ನದ ವೇಳೆಗೆ
ಯುದ್ಧವಾಗುತ್ತಲಿತ್ತು ರಾಮರಾವಣರ ಕದನದಹಂಗೆ
ಬಿದ್ದ ರುಂಡಗಳೆಷ್ಟೋ ಮುಂಡ ಕುಣಿದೋ ರಣದಾಗೆ

ಹತ್ತಿ ಕುದುರೆ ಮೇಲೆ ಕತ್ತರಿಸಿದನು
ಲೆಖ್ಖವಿಲ್ಲಾ ಸೋಜರ್ ಕತ್ತು
ಅಜಪ್ ತಮಾಷ  ಈಸ್ಟ್ ಇಂಡಿಯಾ ಕಂಪನಿ ಇಂಗ್ಲೀಷರ ನೆಲೆ ಆದೀತು
ವಳಗುಟ್ಟು ತಿಳಿದ ಕೈದಿ ಬೈರ್ಡ್ ಹತ್ತಿದ ಬತೇರಿಯ ಮ್ಯಾಗೆ

ಎತ್ತ ನೋಡಿದರು ಮುತ್ತಿದೆ ದಂಡು ಬಿದ್ದೆಯೆಂತು ಹುಲಿಬಲೆಯಾಗೆ
ರಂಗಿಗೆ ಲಕ್ಷ ಜಂಗಿಯ ಪವುಜಿದ್ದು ಬೆಂಬಲಾ ಯಾರಿಲ್ಲಾ ಧೊರೆಮ್ಯಾಗೆ

ಗೌರ್ನಮೆಂಟ್ ಅಪ್ಪಣೆ ಶೆರೆ ಹಿಡಿರೆಂದು ವಡಿಯಲಿಲ್ಲಾ ಧೊರೆ ಮೈಮ್ಯಾಗೆ
ಕಡಿದನು ಸಾವಿರ ಕಾಲಾಳುಗಳ ರಕ್ತ ಹರಿಯುತಿದೆ ನದಿಯಂಗೆ

ಕರ್ನಲ್ ನೋಡಿದ ಟೀಪು ಹಾವಳಿಯ ಗೋಳಾಟವೆಲ್ಲಾ ದಂಡೊಳಗೇ
ಪೌಜಿಗೆ ಅಪ್ಪಣೆ ಕೊಟ್ಟನು ಆಗ ಸುಡಿರಿ ಬಂದೂಕದಿಂದ ಟೀಪುವಿಗೆ

ಚಟ್ ಚಟ್ ಗೋಲಿ ಚಲಾಯಿಸಿದರು ಹೊಗೆ ಊರೊಳಗೆ
ಕವಿದಿತು ಕತ್ತಲೇ ಪುವುಜು ಕಾಣದಂಗೆ ಬಂದನು ಉಲ್ಲೇ ಬಾಗಿಲಿಗೇ

ರತ್ನದಕಂಠಿ ಚಿನ್ನದಕತ್ತಿ ವಜ್ರದಕಲ್ಗಿ ಸಿರದಮ್ಯಾಗೆ
ಇಳಿದನು ಕುದುರೆಯ ಸುಸ್ತಾಗೆ ರಾಜ ಮಲಗಿಕೊಂಡ ಹುಲ್ಲೇ ಗವಿಯೊಳಗೆ

ಅಂಗಕೆ ಗೋಲಿಯು ಕಂಗೊಳಿಸಿ ತಗಲಿರೇ ದಾವು ಥಳ ಮಳಗೊಳ್ಳುವ ನೆರಳೊಳಗೆ
ಬತೇರಿ ಇಳಿದು ಬರುತ್ತಿದ್ದ ಸಿಪಾಯಿ ತಿರುಗಿನೋಡಿದ ಗವಿಕಡೆಗೆ

ಯಾರೋ ವಜೀರ ಮಡಿದಿಹನೆಂದು ಹಾಕಿದನು ಕೈಡವಾಲಿಗೆ
ನೇತ್ರವಬಿಟ್ಟು ರೌದ್ರಾಕಾರದಿ ಕತ್ತರಿಸಿದ ಸೋಜರ್ ಕೈಗೆ

ಕಡಿದತಕ್ಷಣ ಬಿದ್ದಿತು ಕರವು ಕುಣಿಯುತ್ತಿತ್ತು. ಕೀಲುಬೊಂಬೆಯಂಗೆ
ಮಡಿದಿಹನೆಂದು ಅರಿಯದೆ ಹೋದಿವಿ ಎಕಡಿದನಲ್ಲಾ ಯನ್ನ ಕೈಗಳಿಗೆ
ಕಡುಕೋಪಿಯನು ಬಿಡಲುಬಾರದೆಂದು ಹೊಡೆದನು ಗೋಲಿ ಧೊರೆ ಮೈಯಿಗೆ
ಏನೇಳಲಿ ರಾಜನು ಮಡಿದನಲ್ಲಾ ರಣದೊಳಗೆ
ನಮ್ಮ ಪೋಷಿಪ ರಾಜನು ಮಡಿದನಲ್ಲಾ ಇನ್ನೆಂಗೆ
ಮಹಲ್ ಸುತ್ತ ಘೇರಾಯಿಸಿತು ವೈರಿದಂಡು ಕ್ಷಣದಾಗೆಮಡಿದೋದ
ಧೊರೆಯ ಮೇಲ್ ಮುಚ್ಚಿದರೆಣಗಳಬ್ಯಾಗೆ
ಹಾಲ್ ಬಾಯಿತು ಯುದ್ಧ ಹುಡುಕುತಾರೆ ಟೀಪುವಿಗೆ
ಹಾರಸ್ ಎಂಬ ಸರದಾರಾ ಹೊಕ್ಕನು ಮಹಲಿನವಳಗೆ
ಜೋಡಿ ಬಾಲರು ಬಂದು ತಬ್ಬಿಕೊಂಡರು ದುಃಖದಹಾಗೆ
ಹಾರ್ ಎಂಬುವ ಸರದಾರಾ ನೋಡಿದ ಬಾಲರಿಗೆ
ಹೆದರಬೇಡಿ ಬಾಲರೇ ತೋರಿಸಿ ನಿಮ್ಮ ತಂದೇಗೆ

ಮಕ್ಕಳ ಕರೆಕೊಂಡಹೊರಟ ಹಾರಸ್ಸು
ರಾಜನ ಹುಡುಕುತ್ತ ರಣ ಸುತ್ತ ಸುತ್ತ

ಅಜಪ್‌ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲೀಷರ ನೆಲೆ ಆದೀತು ಸುತ್ತ ಕಾವೇರಿ
ನಡುವೆ ಶ್ರೀರಂಗಪಟ್ನ ಸುಲ್ತಾನ್ ದವಲತ್ತು ಹೋದಿತು

ಎಲ್ಲೆ ನೋಡಿದರು ಇಲ್ಲದೇ ಇರಲು ಹುಡುಕಿದರೆ ಹುಲ್ಲೆ ಬಾಗಿಲಲ್ಲಿ
ರಾಶಿ ಶವಗಳನ್ನು ನೋಡಿದಕೂಡಲೇ ರಾಜನ ಲಾಶ್ ಕಾಣು ಅಲ್ಲಿ

ಮಡಿದಿಹ ರಾಜನಮಕ್ಕಳು ಕಂಡುರ ಮಹಾದುಃಖ ಬಂತು ಹೃದಯದಲ್ಲಿ
ಬಿದ್ದು ಭೂಮಿಯಮೇಲೆ ವದ್ದಾಡುತಾರೆ ಅಲ್ಲಾ ಖುದಾ ಎಂದು ಅಳುತಲಿ

ಮಾತಾಡಪ್ಪ ಎಂದು ಮುತ್ತಿಡುತಾರೆ ಮುಂದ್ಯಾರು ದಿಕ್ಕು ನಮಗಿಲ್ಲಿ
ಮಂದುಭಾಗ್ಯರ ಮಾಡಿತಂದೆ ನೀ ಪೋದೆಯ ಕೊಂದರೇ ವೈರಿಗಳ್ ರಣದಲ್ಲಿ

ಹಿಂದ್ಯಾರ್ ತಂದೆಯ ಅಗಲಿಸಿದ್ದೆಯೋ ಇಂತ ಕಷ್ಟ ಬಂತು ನಮಗಿಲ್ಲಿ
ವೈರಿಗಳು ಪಟ್ನ ಸೂರೆ ಮಾಡುತ್ತಾರೆ ಏಳು ಅಪ್ಪಾ ವಿನಯದಲಿ

ಅಪ್ಪಾ ಎಂಬುದು ಅಲ್ಲಿಗೆ ತಪ್ಪಿತು ಅಯ್ಯೋ ಇನ್ನಾರಿರುವರು ನಮಗಿಲ್ಲಿ
ವಜ್ರವೈಡ್ಯೂರ್ಯ ಕೊಳ್ಳೆ ಹೊಡೆಯುತ್ತಾರೆ ಕೇಳುವರ್‍ಯಾರಿಲ್ಲ ಪಟ್ನದಲ್ಲಿ

ಮಕ್ಕಳಿಗೆ ಹಾರಸ್ ಹೇಳುತ್ತಾನೆ ಚಿಂತಿಯಾಕ ನಿಮ್ಮ ಮನದಲ್ಲಿ
ಪಟ್ಟವ ನಿಮಗೆ ಕಟ್ಟಿಕೊಡುವೆನು ಸತ್ಯವಾಗಿರಿ ನೀವು ನಮ್ಮಲ್ಲಿ

ರಾಣಿರು ಅಳುತ ನಡೆದು ಬಂದರು ರಾಜನು ಮಡಿದಿಹ ಸ್ಥಳದಲ್ಲಿ
ಕಾಂತನ ಸುತ್ತ ಕುಂತಳುತ್ತಾರೆ ಹಾಹಾ ಗತಿ ನಮಗ್ಯಾರಿಲ್ಲಿ

ಹಾ ಕಾಂತ ಎನನಯ ಕಾಂತ ಮಡಿದೆ ರಣದಲ್ಲಿ
ಹಾ ಪ್ರಾರತ್ನ ನಿನ್ನ ಆಗಲಿ ಇರುವುದೆಂಗಿಲ್ಲಿ
ನಗೆಮುಖದ ಚಲುವನೆ ಮಾತನಾಡೊ ಬಾಯಲ್ಲಿ

ಬಡುಕೊಂತ ಹೊರಳುತ್ತಾರೆ ಕಾಂತನ ಸುತ್ತ ಅಳುತಲ್ಲಿ
ಮಾರನಂತ ಸುಂದರನೇ ಮಾತನಾಡು ಬಾಯಲ್ಲಿ

ನುಡಿ ಕೇಳದೆ ರಮಣನೇ ಮಡಿದಿಯಲ್ಲಾ ರಣದಲ್ಲಿ
ಮಡದೀರಕೆಟ್ಟವೆಂದು ಮಾತನಾಡು ತ್ವರಿತದಲಿ
ಮದನ ಮೋಹನ ಈ ದಿವ್ಯ ಇರೂ ಎಂದೂ ಮನೆಯಲ್ಲಿ

ಬಂಧುಬಳಗವೆಲ್ಲಾ ಬಂದು ಅಳುತಾರೆ
ಭಾಗ್ಯದ ಪ್ರಭು ಪೋದೆಯೋ
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಣ ಸುಲ್ತಾನ್ ದವಲತ್ತು ಹೋದಿತ್ತು

ಹಿಂದೂಮುಸಲ್ಮಾನ್‌ವಂದಾಗಿ ಬಂದು ಎಲ್ಲಾ ದೊರೆ ಎಂದ್ ಹುಡುಕಿದರು
ನಮ್ಮಾಳ್ವಪ್ರಭುವಿನ ಅನ್ನದ ರುಣವು ಇಂದಿಗೆ ತೀರಿತೆಂದು ತಿಳುದಿಹರು

ಪಟ್ಣದ ಪ್ರಜೆಗಳು ಬಿಟ್ಟು ಅನ್ನವನು ಎದೆಯನು ಬಡುಕೊಂಡರು
ಬಂಧು ಸ್ತ್ರೀಯರು ಬಳೆಗಳ ವಡೆದು ಬಿದ್ದು ಭೂಮಿಯೊಳು ವರಳಿದರು

ಖಳೆಯೊಳು ಕಾಮನೇ ಬಲದೊಳು ಭೀಮನೇ ಚಲುವನೇ ನಿನ್ನಂತೆ ಯಾರಿಹನು
ಭೋಗಾದಿ ಇಂದ್ರನೆ ತ್ಯಾಗದಿ ಕರ್ಣನೇ ಏಳದೆ ಯಾಕಿದ್ದಿ ಎನ್ನುವರು

ಎಷ್ಟು ಕೂಗಿದರು ಎಚ್ಚರವಿಲ್ಲಾವೆಂದು ಕೆಟ್ಟೇವೆಂದು ಪ್ರಜೆ ಭೋರಿಟ್ಟರು
ಸಿಟ್ಟುಮಾಡಿ ನಮ್ಮ ಬಿಟ್ಟು ಹೋದೆಯಾ ಪಟ್ಣಕೆ ದಿಕ್ಕಾರೆನ್ನುವರು

ದೊರೆಪೋದೆ ಮೇಲೆ ಇರಲು ಬಾರದೆಂದು ಏರಿ ಮರವನು ಬೀಳುತಿಹರು
ಪ್ರಜೆಗಳ ದುಃಖ ಪರಶಿವ ಬಲ್ಲಾ ಕಾವೇರಿಯೊಳು ಧುಮುಕಿದರು

ನುಡಿಯೊಳು ಧರ್ಮಜ ನಮ್ಮ ಒಡೆಯಗೆ ಮೃತ್ಯು ಯಾರಿಂದ ಎಂದು ನೋಡಿಹರು
ಪುರಾತನ ಮುದವಿಕ ಮೀರಸಾದಕನಿಗೆ ಮೂಳೆಯ ಮುರಿದು ಕೊಂದಾರು

ಹುಲಿ ಸೀಳಿದ ದೊರೆಯ ಏಳ ಏಳು ಎನ್ನುತ
ಬಾಲಕರಳುವುದ ನೋಡಿ ಬಹಳ ಪ್ರಜೆ ದುಃಖಿಸುತ್ತ
ಹಾರಸ್ ಎಬುವ ಸರದಾರ ಓ ಗಾಡ್ ಎಂದು ಅಳುತ್ತ
ತನ್ನ ಚೋಕದಿ ಬಾಲರ ಕಂಬರನುಯನು ವರೆಸುತ್ತಾ
ಯಿಂತಪ್ಪ ಚಲುವನ ಎಲ್ಲು ಕಾಣೆ ಎಂದೆನುತ

ಧೀರರು ಬಲಭುಜ ತೀರಿಪೋದೆಯ
ಯಾರು ದಿಕ್ಕು ನಮಗಿಲ್ಲವಾಯ್ತು
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲಿಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ನ ಸುಲ್ತಾನ್ ದವಲತ್ತು ಹೋದಿತ್ತು

ಮೈಸೂರು ಪ್ರಭುವಿಗೆ ಮಗನೆಂದೆನಿಸುತ ಹೈದರ್ ಉದರದಿ ಜನಿಸಿದ್ದ
ಕೈಸೆರೆ ಹಿಡಿದು ಇಂಗ್ಲಿಷ್ ಜನರ ದೇಶಕ್ಕೆ ಬಾರದೆ ಮಾಡಿದ್ದ

ದೆಸೆಗೆಡಿಸುತ ಮರಾಟ ರಾಜರ ರಾಜ್ಯದೊಳಗೆ ತಾ ನುಗ್ಗಿದ್ದ
ಘಾಸಿಪಡಿಸಿ ಪೂನಾ ಧಾರ್ವಾಡನು ಪಾಳ್ಯೆಗಾರರ ಫೈಸಲ್ ಮಾಡಿದ್ದ

ಮೀಸೆಯ ತಿರುವುತ ಕೊಚ್ಚಿ ಕೊಡಗು ಮಳೆಯಾಳ ಮೈಸೂರಿಗೆ ಸೇರಿಸಿದ್ದ
ದುಸ್ಮಾನರ ದೇಶವ ಕೊಳ್ಳೆ ವಡೆದು ಮೈಸೂರ್ ಖಜಾನೆಯ ತುಂಬಿದ್ದಗ

ವಸುಧೆಯೊಳಗೆ ಟೈಗರ್ ಟೀಪೂ ಸುಲ್ತಾ್ ಬಾದ್ದೂರ್ ನಾಮ್‌ನೆಸರಾಗಿದ್ದ
ದಶರದತರ ರಂಜಾನ್ ಮೊಹರಂ ಹಬ್ಬದಿ ಏರಿ ಅಂಬಾರಿಯ ಬರತಿದ

ಮೋಸಗಾರ ಮೊಗಲಾಯಿ ರಾಜನೊಳು ನಂಬಿಕೆ ಬಹಳವಾಗಿ ಇಟ್ಟಿದ್ದ
ದಿಸನಾಗಿ ಆರುಲಕ್ಷಪವುಜ್ ವಡಗೂಡೀ ಆರ್ಕೀಟ್‌ಲೂಟಿಯ ಮಾಡಿದ್ದ

ಭಾಷೆಮಾಡಿಸಿ ಲಾಲಿಬೇಲಿಯೆಂಬ ಕರ್ನಲ್‌ಗಳ ಸಂಗಾತ ಇಟ್ಟಿದ್ದ
ನಿಶಾನಿ ಎತ್ತಿ ಕೊಯಮತ್ತೂರ್ ಕೊಳ್ಳೆಯ ಪದೇ ಪದೇ ಮಾಡಿದ್ದ
ಬಾರೊನಿ ಎಂಬುವ ದಂಡಿಗೆ ದಳಪತಿ ಇದ್ದ
ಧೀರನಾದ ಸೈದ್‌ಗಪೂರ್ ಸೈನ್ಯಕೆ ಸರವಡಿಸಿದ್ದ
ಸರದಾರ್ ಖಾನ್ ಮಹಮ್ಮದ್ ಖಾನ್ ಮುಖ್ಯಸಂಗಡಿಯಿಟ್ಟಿದ್ದ
ಭರವಸೆ ಪೂರ್ಣಯ್ಯನೊಳ್ ದಿವಾನ್‌ಗಿರಿ ಕೊಟ್ಟಿದ್ದ
ವೀರಾದಿವೀರನೆಂದು ಹೆಸರು ಲೋಕದಿ ಪಡೆದಿದ್ದ

ಹೆತ್ತಯ್ಯನೆಂದು ಪೂರ್ಣಯ್ಯನೊಳೊ
ಟೈಗರ್ ನಂಬಿಕೆ ಬಹುಯಿತ್ತು
ಅಂಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲಿಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ನ ಸುಲ್ತಾನ್ ದವಲತ್ತು ಹೋದಿತ್ತು

ಮಾಡಿಗರ್ ಮೋಸ ಮರಾಟ ರಾಜ ಹೈದರಬಾದ್ ನವಾಬ್ ವಂದಾಗಿ
ನುಡಿಯಿತ್ತರು ಗೂಡಾರ್ಥವಾಗಿ ತಂಜಾವೂರಿಗೆ ಗುಟ್ಟಾಗಿ

ಕೊಡುವೆವು ಇಪ್ಪತ್ತೈದು ನಕ್ಷವನೆಂದು ಕರಾರ್ ಮಾಡಿದರು ಸರಿಯಾಗಿ
ಸಿಡುಕುಗಾರ ನಮ್ಮ ಟೀಪುದ ಕೊಲ್ಲಲು ಕುಯಕ್ತಿ ಜನರು ಗುಂಪಾಗಿ

ಕೊಡಗಿನ ರಾಜನು ಕೊಟ್ಟನು ದಾರಿಯು ಇಂಗ್ಲಿಷ್ ಪವುಜಿಗೆ ಗುರಿಯಾಗಿ
ಉಂಡಮನೆಗೆ ಎರಡೆನಿಪರು ಸೇರಿ ಟೀಪುವಿನ ದವಲತ್ ಹಾಳಾಗಿ

ಮೃಡನು ಕರುಣತಪ್ಪಿ ಮಡಿದ ರಣಾಘ್ರುದಿ ಜಡದೇಹ ಮಣ್ಣಿಗೆ ಮರೆಯಾಗಿ
ಇಡಿಸಿದರ್ ಪಟ್ಟಣ ಇಂಗ್ಲಿಷರ ಕೈಯಾಗೆ ಮೀರಸಾದಕ್ ಮಾತು ಮುಂದಾಗಿ

ಕಂಡರ್ ವೈರಿಯ ಖಂಡಿತ ಕಡಿಯುವ ಮಂತ್ರಿಗಳೆಲ್ಲಾರು ಮರೆಯಾಗಿ
ದಂಡುದಾಳಿ ಮರೆಮಾಡಿದರೆ ಶಿವ ಶಿವ ಪಟುವೆಲ್ಲಾ ಬರಿ ಬಯಲಾಗಿ

ಇರಲಿಲ್ಲಾ ಪಟ್ಟಣದಲೀ ಟೀಪುವಿನ ಬೆಂಬಲ ದಂಡು
ಬರುವದರೊಳಗೆ ಚಂದ್ರಾವನದಿಂದ ಬಿದ್ದಿತು ಗುಂಡು
ಏರಿ ಕೋಟೆಯ ಮೇಲೆ ತೂರಿ ಬರುತಿದೆ ಸೊಲ್ಜರ್ ದಂಡು
ದಾರಿ ಅಡ್ಡವಗಟ್ಟಿ ಪುರದೊಳು ಆಗಿತು ಪುಂಡು
ಸೆರೆಯಿಸಿದರ್ ಮಕ್ಕಳ ಟೀಪುವಿನ ಅನ್ನವನುಂಡು

ಕೊತ್ತಲು ಕೋಟೆ ಮೇಲೆ ಹತ್ತಿದರ್
ವೈರಿಗಳ್ ಸುತ್ತಮುತ್ತ ಬಲವಾಗಿತ್ತು
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ನ ಸುಲ್ತಾನ್ ದವಲತ್ತು ಹೋದಿತ್ತು

ಹಿಡಿಯಲು ಟೀಪುವ ಹಿಂಬಾಲಿಸಿದರು ಹ್ಯಾರಿಸ್ ಕರ್ನಲ್ ಸೋಲ್ಜರು
ಕಡಿವನು ಎಡಬಲ ಇಂಗ್ಲೀಷ್ ಜನಗಳ ಮೊಕಹಾಕದೆ ಹಿಂದೆ ಜರಿದಾರು

ಬಿಡದಂಗೆ ಅಡ್ಡವಗಟ್ಟುವರ್ ಸೊಲ್ಜರ್ ಮೋಡಮುಸುಕಿದಂಗೆ ಮುಸುಗಿದರು
ಪಿಡಿಯಲು ಅಸದಳ ಕುದುರೆ ಮೇಲೆ ಇರಿವನು ಎದರುಬಂದ ವೈರಿಗಳ ಚೂರು ಚೂರು
ನೋಡಿದ ಹಾರಸ್ ಟೀಪೂ ಧೀರತ್ವವ ತುರನೇರುವ ವೇಗದೀ ಜೋರು
ಕಂಡರೆ ಸಿರವನು ಕಡಿದು ಬಿಡುವನೆಂದು ಸಿಕ್ಕದೆ ಮೊಕವನು ಅವುತ್ಕರು

ಗೂಡಚಾರರ ಸಂಗಡ ಗುಲಾಂ ಆಲಿ ಖಾನರ ಕರೆಸಿದರು
ಹಿಡಿಯಲು ಟೀಪುವ ಉಪಾಯ ತೋರಿಸೆಂದು ಕೇಳಿದರು

ಹಾರಸ್ ಸರದಾರ್ರ ಹಿಡಿದರೆ ಕೈಸೇರೆ ಹಿಂದಕ್ಕೆ ಬರುವನೆಂದು
ಕೊಲ್ಲೊ ಉಪಾಯ ಹುಡುಕಿದರು

ಕಡಿಯುವ ನೆಮ್ಮಯ ವಂಶವನೆನ್ನುತ ಸುಡಜಿರು ಬಂದೂಕದಿಂದ ಹೇಳಿದರು
ಇಂಡ್ಯಾದೊಳಗಿಂತ ಧೀರರಾಜರ್‍ಯಾರು ಉಂಡುಮನೆಗೆರಡನ ಬಗೆದ್ಯಾರು

ವಡೆಯರ ವಂಚಿಸಿ ಮಡಿದನು ಟೀಪೂ ಹುಲ್ಲೆಯ ಬಾಗಲಲಿ ಕೆಡವಿದರು
ಮೋಡುವೆದಲ್ಲೈ ಟೀಪುವ ಶಿವಶಿವ ಪಟ್ಟಣಕೆ ಮುಂದಕೆ ಧೊರೆಯಾರು

ಜೋಡಿಸುತ್ತಿನ ಕೋಟೆಗೆ ಟೈಗರ್ ಆಗಿ ಕಾದಿದ್ದ
ಬೇಡಿದ ದ್ವಿಜರಿಗೆ ಬಿಡದೆ ದಾನ ನೀಡಿದ್ದ
ಪೊಡವಿಯಾಳ ಟೈಗರ್ ಟೀಪೂ ಆಗಿದ್ದ
ಹಿಡಿದು ಮಲೆಯಾಳದ ಲಂಗದಾವಣಿವುಡಿಸಿದ್ದ
ನುಡಿಕೇಳಿದ ಜನರಿಗೆ ಉರಿಯಿಕ್ಕಿ ಕೊಂದಿದ್ದ

ಉತ್ತಮ ಜನರಿಗೆ ಚಿತ್ತಚಂಚಲವು
ಜಾತೀ ಚಿಂತೆ ಬಹು ಆಗಿತ್ತು
ಅಜಪ್ ತಮಾಷ ಈಸ್ಟ್ ಇಂಡಿಯಾ ಪಂಕನಿ ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಟಣಕೆ ಸುಲ್ತಾನ್ ದವಲತ್ತು ಹೋದಿತ್ತು

ಇರಬೇಕಾಗಿತ್ತು ಟೀಪೂಸುಲ್ತಾನ್ ಹಿಂದು ಮುಸಲ್ಮಾರ ಉದ್ಧಾರಿ
ದೊರೆಯಾಗಿದ್ದ ಶ್ರೀರಂಗ ಪಟ್ಟಣಕೆ ಅನಾಥ ಜನರಿಗೆ ಆಧಾರಿ

ಹರಿರಂಗನಾಥರು ಅಗಲಿದ ಕಾರಣ ಬಂದರು ಈಸ್ಟ್ ಇಂಡಿಯಾ ವ್ಯಾಪಾರಿ
ಮರೆಮಾಡಿಕೊಂದರು ಮೈಸೂರ ಹುಲಿಯ ಮೂರು ರಾಜ್ಯವು ಬಾಯಾರಿ

ಶೂರ ವೀರನೆಂದು ಇಂಡ್ಯಾದೊಳಗೆ ಹೆಸರು ಪಡೆದಿದ್ದ ಬಲುಬಾರಿ
ಕರೆದುಒಕ್ಕಲಿಗರಿಗೇ ಅಷ್ಟ ಗ್ರಾಮವೆಂದು ಗೌಡರ ವ್ಯವಸಾಯ ಜಾಗಿರಿ
ವೈರಿಗೆ ದಾರಿಯ ತೋರಿದ ತೆರದಲಿ ಹರಿಯುತ್ತಿದ್ದಳು ಕಾವೇರಿ
ಕೋರಿದ ಇಷ್ಟಾರ್ಥ ಕೊಡುತ್ತಿದ್ದ ಟೀಪು ಇನ್ಯಾರಿರುವರು ಅವರ ಪರಿ

ವೀರನ ಕೊಂದು ಇಂಗ್ಲೀಷರ ಬಾವುಟ ಧರಿಸಿ ಕೊಂಡಿತು ಜಾಂಡ ಬತೇರಿ
ಷಹರ್ ಶ್ರೀರಂಗಪಟ್ಣಕೆ ರವಿಯಂಗಿದ್ದನು ಜೋಡಿ ಕೋಟೆ ಕೊತ್ತಲು ಸೇರಿ
ಅರಘಳಿಗೆ ಕೆಲಿರಿಸಿ ಹರ ಏನಾದೀತು ನುಡಿದೀತು. ಇಂಗ್ಲೀಷ್ ಜಯಬೇರಿ

ಆರು ಆಂಧ್ರಪ್ರದೇಶವು ಹಜರತ್ ಟೀಪುವಿಗೆ ಸೆರಿತ್ತು
ಪರಿ ತಿಳಿರಿ ಪಶ್ಚಿಮ ಕಲ್ಲಿಕೋಟೆ ತನಕ ದವಲತ್ತು
ಧರೆಗಾಧಿಕಾ ರಾಮೇಶ್ವರ ತನಕ ರಾಜ್ಯ ತಗಲಿತ್ತು
ಭಾರಿ ಮದರಾಸ್ ಸೇಲಂ ನಾಗೂರ್ ತನಕ ವತ್ತಿತ್ತು
ಇರಲಿ ವದೆಮಂದಿರಂ ಇಸ್ಲಾಂ ಕಲ್ಮಾಬಿತ್ತಿತ್ತು
ಭಾರತಮಾತೆಯು ಭಕ್ತಜನರ ವಶವಾಯಿತ್ತು

ಲಾಲ್ ಬಾಗಿಗೆ ಲಾಶನು ಸಾಗಿಸಿ
ತೆಗೆವರು ಪೂರ್ವದ ಕರಾರ
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪವಿ ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಣ ಸುಲ್ತಾನ್ ದವಲತ್ತು ಹೋದಿತ್ತು

ಪುಟ್ಟಕೃಷ್ಣೇಂದ್ರಿಗೆ ಪಟ್ಟವ ಕಟ್ಟಿಕೊಟ್ಟರು ಆಗ ಮೈಸೂರ
ಮರಾಟದೇಶವು ಮೊಗಲಾಯಿ ರಾಜ್ಯವು ಸೇರಿ ಮಾಡಿತಲ್ಲಾ ಈತರ

ಕರ್ನಾಟಕ ದೇಶವ ಕಣ್ಣು ಬಾಯಿ ಬಿಡುವಂತೆ ಮೂರು ಭಾಗ ಮಾಡಿದರ್ ಚೂರ
ಒಂದು ಭಾಗಕೆ ಮರಾಟ ರಾಜ್ಯ ಒಂದು ಭಾಗಕೆ ನಿಜಾಮರ ರಾಜ್ಯ
ಮೂರರಲ್ಲಿ ಒಂದನೇ ಭಾಗಕೆ ಈ ಪೂರ್ವ ರಾಜರ ಅಧಿಕಾರ

ರಘುಕುಲ ಸತ್ಯದೊಳಿರುವುದು ಸಿಂಹಾಸನ ಬಹು ಶೃಂಗಾರ
ಇಂದ್ರಪುರಗೆ ಇಮ್ಮಡಿ ಈ ದೇಶ ದಶರದಿ ನಡೆಯುವ ದರ್ಬಾರ
ಚಾಮುಂಡಾಂಬ ಬಲು ಕಾಮಿತ ಫಲವತ್ತ ಬೆಂಬಿಡದಂತೆ ಭಕ್ತಾರ ಆಧಾರ
ಬ್ರಹ್ಮಾನಂದ ಗುರು ಸ್ವಜಕರ ಆಧಾರ ಕಲ್ಗಿ ಕಳೆ ಬಲು ಶೃಂಗಾರ
ಧರೆ ಮೈಸೂರು ಪುರಿಯೊಳು ಶ್ರೀರಾಂಪೇಟೆ ಬಜಾರ
ತರಾವರೆ ಪದಗಳು ಆಗತ್ತೈತೆ ತಯ್ಯಾರ
ರಾಜೋಜಿ ಪದ ಇಡುತಾನೆ ಯಿಬಾರ
ಶಿದ್ದೇಶನು ಹರುಷದಿ ಪೊರೆಯುತ್ತಿರುವ ಗುರುವರ
ಶಾಂತಂ ಸಂತತಿ ಸಮರಸ ನೋಡುವಿಸ್ತಾರ

ಚಾಲ್ ಗೂಳೇಷನ ಲೀಲೆ ವೇಳಲಿಕಸದಳ
ಪಾಳೆಗಾರರ ಸುಳಿವೆ ಯಿಲ್ಲವಾಯ್ತು
ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ನ ಸುಲ್ತಾನ್ ದವಲತ್ತು ಹೋದಿತ್ತು

ಶ್ರೀ ಬ್ರಂ ಗೂಳೇಶ,
ಪರಂಜ್ಯೋತಿ ಮಠ. ಮೈಸೂರು

**ಟಿಪ್ಪೂಸುಲ್ತಾನನ ಬೀಳಿನ ಹಾಡು**

ಎಷ್ಟು ಬೇಗ ಮಾಯ್ತವಾಯ್ತೊ ಸುಲ್ತಾನನ ದೌಲತ್ತು
ಎಷ್ಟುಬೇಗ ಓಡಿ ಹೊಯ್ತಾ ವೈಭವ ಸಂಪತ್ತು
ಎಷ್ಟು ಬೇಗ ಶ್ರೀಂಗಪಟ್ಟಣದ ಬಾವುಟ ಬಾನಾಡಿ
ಭಾಗ್ಯ ಶಿಖರದಿಂದಲುರುಳಿ ಬಿತ್ತೊ ಹುಡಿಗೂಡಿ

ಅವನಾ ಗೆಲ್ ಗುಡಿಸಾಲ್ ತಲೆಯೆತ್ತಿ ಗರ್ವದಿ ಹಾರಿತ್ತು
ಹೆಗೆಗಳ ಹೃದಯವ ನಡುಗಿಸಿ ಸೇನೆ ಬಿಂಕದಿ ನಡೆದಿತ್ತು
ಜಗದೀಶ್ವರ ತನ್ ಕೃಪೆಯ ಕಟಾಕ್ಷವ ಹಿಂದೆಗೆದಾ ಒಡನೆ
ಸಿರಿ ವೈಭವ ಜಯ ಸೇನೆಯಿವೆಲ್ಲ ಹೋಯಿತು ದಡಬಡನೆ

ಧನ ಜನ ತುಂಬಿದ ಅವನಾ ರಾಜ್ಯ ದೆಸೆದೆಸೆಗಳ ತಬ್ಬಿ
ಕೈಗೊಳಗಾಗಿ ನೂರಾರ್ ಗಾವುದ ಹರಡಿತು ನೆರೆ ಹಬ್ಬಿ
ರಣ ಬಲ ಗರ್ವಿಗಳೆದೆದಲ್ಲಣಿಸುತ ಹುಬ್ಬನು ಗಂಟಿಕ್ಕಿ
ನೂರಾರ್ ದುರ್ಗಗಳೆಸೆದವು ಗಿರಿಗಿರಿ ಶಿಖರದಿ ಬಲು ಸೊಕ್ಕೆ

ಕಾಳಗ ಕೈದುವ ಅವನಾ ದಳಗಳೊ ಎಣಿಸಲ್ಕಳವಿಲ್ಲ
ಅವನಾ ಫ್ರೆಂಚರೊ ಕಳಕ್ಕೆ ನುಗ್ಗಲು ತವಕಿಸುವರು ಎಲ್ಲ
ಕುದುರೆಯ ದಂಡು ಬಿಂಕವ ಬೀರಿ ನುಗ್ಗಿತು ಮುನ್ನಡೆದು
ಎಲ್ಲಾ ಒಂದೇ ಒಂದು ಕ್ಷಣದಲಿ ಹೋಯಿತು ಹುಡಿವಡೆದು
ಅವನಾ ಗಿರಿದುರ್ಗಗಳವು ಮೆರೆದುವು ಕಗ್ಗಲ್ ಮೈದಳೆದು
ಬೆಟ್ಟ ಬೆಟ್ಟದೊಳಂಡೆ ಬಂಡೆಯ ಕಡೆದಿಡೆ ಬೆಳೆಬೆಳೆದು
ಅಲ್ಲೆಲ್ಲೆಲ್ಲೂ ಉರಿಬಾಣಗಳು ಹಾರಿತು ಹೊಳೆಯುತ್ತ
ಒಡನೆಯ ಸಿಡಿಲಿನ ಪಡೆಯಬ್ಬರಿಸಲು ಘನದನಿದೋರುತ್ತ

ಬೆಳ್ಳಿಯ ಭರ್ಜಿಗಳಾಕಾಶದಲಿ ಹೊಳೆದವು ಕಳೆಯೆರಚಿ
ಗುಬುಟಿನ ಬಾವುಗಳು ಪಟಪಟಿಸುತಲೊಲೆದವು ನಲವೆರಚಿ
ಏನಿದ್ದೇನು ಕಣ್ಣೆವೆ ಮುಚ್ಚಿ ಬಿಡುವಷ್ಟರಲೆಲ್ಲ
ರಣ ಸಾಧನದಾ ಗರ್ವವದೆಲ್ಲ ಬರಿದೆ ಹೋಯ್ತಲ್ಲ

ಕಾವೇರಿಯ ಹೊಳೆ ಮಂಗಳಜಲದಲಿ ಸುತ್ತಲೂ ಸುತ್ತಿರಲು
ಮೂರು ಸುತ್ತಿನ ಕೋಟೆಯ ಗೋಡೆ ಹೊಪ ಹೊರ ಬಳಸಿರಲು
ಕೋಟೆಗಳೆರಡರ ನಡುವೆಡೆಯಲ್ಲಿ ಕಪ್ಪನೆ ಕಳೆಬೀರಿ
ಆಳದ ಅಗಳು ಹಬ್ಬಿತು ಹರಡಿ ಮನಸಿಗೆ ಭಯದೋರಿ

ದಿಡ್ಡಜೀಬಾಗಿಲ ಮೇಲೆತ್ತರದಲಿ ಬಿರುದಿನಿ ಬೀರುತ್ತ
ದಿಗಿಲೆರಚುತ ಬಲ್ ಬುರುಜುಗಳಿದ್ದವು ಸಜ್ಜನು ತೋರುತ್ತ
ಗೋಪುರವಿದ್ದವು ಮರ್ತ್ಯರ ಶಕ್ತಿಗೆ ಮೀರಿದವೆನೆ ಸುತ್ತ
ಎಲ್ಲಾ ಒಂದೇ ಒಂದು ಕ್ಷಣದಲಿ ಹಾಳಾಗಿ ಹೋಯ್ತುತ್ತ

ಗಡಗಡಗಡನೆದೆ ನಡುಗಿಸಿ ಕೂಗಿತು ಆನೆಯ ದಂಡು
ನಡುಗಿಸಿ ನೆಲವನು ನಡೆಯಿತು ಕುದುರೆಯ ದಳ ಸಂದಣಿಗೊಂಡು
ಚಿನ್ನದ ರನ್ನದ ಬಗೆ ಬಗೆ ರಾಶಿ ಭಂಡಾರವ ತುಂಬಿ
ನೆಲಮಾಳಿಗೆಗಳೊಳ್ ಬಲು ಬೆಳೆದಿತ್ತು ಶಾಂತಿಯ ನೆರೆ ನಂಬಿ

ಅವನೋ ಎಂದರೆ ನಾಯಕತಲೆಮಣ, ತಾನೆ ಮಹಾಶೂರ
ಕಳದೊಳಗೆದುರಿಸಿ ನಿಲ್ಲಿವರಿಲ್ಲ ಅವನೇ ರಣಧೀರ
ಆದರೇನು ಕಣ್ಣೆವೆಮುಚ್ಚಿ ಬಿಡುವಷ್ಟರ ಒಳಗೆ
ಭೀತಿಯನರಿಯದ ನಮ್ಮಾ ವೀರನೆ ಮಡಿದುರುಳಿದ ಕೆಳಗೆ
ಎಣಿಕೆಗೆ ಮೀರಿದ ನವರತ್ನಗಳು ರಾಶಿ ರಾಶಿಯಲೊಟ್ಟಿ
ಥಳಥಳಸುತ್ತ ನಸುನಗೆಬೀರಿ ಮೆರೆದವು ಸಾಲ್ಗಟ್ಟಿ
ಭೂ ಮಂಡಲದಾ ಸಂಪತ್ತೆಲ್ಲ ಒಂದೂ ಬಿಡದಂತೆ
ಸುಂದರ ಮಂದಿರಗಳಲೊಟ್ಟಿದ್ದವು ತವನಿಧಿ ನೆಲೆಯಂತೆ

ದುರ್ಲಭವೆನಿಸಿದ ಮಣಿಭೂಷಣಗಳು ಕೂಡಿದ್ದವು ನೆರೆದು
ಒಪ್ಪವ ಕಕೊಟ್ಟು, ಪೆಟ್ಟಿಗೆಗಳಲಿಟ್ಟು, ಹೆಮ್ಮೆಯೊಳ್ ನೆರೆ ಮೆರೆದು
ಆ ಕೆಲಕೆ ಬೆಲೆಕಟ್ಟಲುಬಹುದೇ ಹಿಂದೆಂದೂ ಅದನು
ಕಿವಿ ಕೇಳಿಲ್ಲ, ಕಣ್ ಕಂಡಿಲ್ಲ, ಮಿಗೆ ಸೊಬಗಾ ಹದನು

ದೊಡ್ಡ ದೊಡ್ಡ ನೂರಾರು ಕಣಜಗಳಿವಿದ್ದವು ನಗರದಲಿ
ಹದಿನೆಂಟೂ ಬಗೆಯುಣವಿನ ಧಾನ್ಯವನೊಳಕೊಂಡವುಗಳಲಿ
ಕಾರೊಡಲಾಯುಧಶಾಲೆಗಳಲ್ಲಿ ನೆಲಸಿದವಾದರದಿ
ರಣದ ಭಯಂಕರ ಶಸ್ತ್ರ ಸಮೂಪಗಳುರಿ ಬಾಯ್ ಪಕಿಕರದಿ

ಸಂಪತ್ತಿನಲೊ ಮೇಲೆನ್ನಿಸಿದಾ ರಣವೈಭವದಲ್ಲೊ
ಹೋಲಿಸಲವನೊಡನೊಳ್ಳೆಯದೃಷ್ಟದ ಮಿಗಿಲೇರಿಕೆಯಲ್ಲೊ
ಸೊಕ್ಕಿನ ದುರ್ಯೋಧನನೈಸಿರಿಯೆಷ್ಟಲ್ಪವೊ ಎನಿಸಿತ್ತು
ಎಲ್ಲಾ ಒಂದೇ ಕ್ಷಣದಲಿ ಕರಗಿ ಹಾಳಾಗಿ ಹೋಯಿತ್ತು

ಅಳಿವಿಲ್ಲದ ವಿಖ್ಯಾತಿಯ ನನಮ್ಮಾ ದೊರೆಯಿರೆ ಪೀಠದಲಿ
ಬೆಳ್ಳಿ ತುತೂರಿಗಳೆದೆಯನು ಹಿಗ್ಗಿಸಿ ಮೊಳಗಿದವೆದುರಿನಲಿ
ಜಯಜಯವೆನ್ನುತ ಬಿರುದುಗ್ಗಡಿಸಲು ವಂದಿಗಳೊಲವಿಂದ
ನೆಲ ನಡುಗಿಸಿದವು ನಗಾರಿ ನೌಬತ್ ಗುಡುಗಿನ ದನಿಯಿಂದ

ಒಂದೊಂದಾಗಿ ಪರಿವಿಡಿಯಿಂದ ಎಂಟು ಕಾಲಗಳಲ್ಲಿ
ರಾಜರು ಹಲವರು ದಿಗ್ವಿಜಯದಲಿ ಕಪ್ಪವ ಕೈಕೊಂಡು
ಕೂಡಿಸಿದರು ಸಿರಿಯಾತನ ಕೈಗೆ ಸೇರಿತು ಮುದೊಂಡು
ಆದರದೆಲ್ಲ ಹಾಳಾಯ್ತಯ್ಯೋ, ಒಂದೇ ಕ್ಷದಲ್ಲಿ

ಎಷ್ಟು ಬೇಗ ನಿಷ್ಕರುಣಿ ಮೃತ್ಯು ತಾನೆರಗಿದನೋ ಮೇಲೆ
ಎಷ್ಟು ಬೇಗನವ ಧ್ವಂಸ ಮಾಡಿದನೊ ಹೇಳುವರಾರ್ ಕೇಳೆ
ಪರಲೋಕದಲಿ ಪುಣ್ಯಪಾಪ ವಿಚಾರಣೆ ನಡೆಸುತ್ತ
ಆ ಯಮಧರ್ಮನೆ ನುಡಿಯುವನಹುದುರಿಗಣ್ ಕಿಡಿಗೆದರುತ್ತ

ನಡು ಮಧ್ಯಾಹ್ನವು ನಡುಗುತ ಬಂದಿತಮಂಗಳ ಕಳೆಬೀರಿ
ಸುಲ್ತಾನನ ಹೆಣವುರುಳಿತು ನೆಲದಲಿ ಮೈನವ ನೆರೆ ಸಾರಿ
ಅವನಾ ರಾಜ್ಯವೊ ಇರುಳಲಿ ಕಾಣುವ ಕನಸಿನ ರೀತಿಯಲಿ
ಪೂರ್ತಿಯಾಗಿ ಮಾಯವಾಯಿತು ಮಿಗಿಲಹ ಮೊನದಲಿ
ಹೇಳು ಹೇಳು ಮತ್ತುರುಳುತಲಿದ್ದಾ ರಾಜ್ಯವ ರಕ್ಷಿಸಲು
ಯಾರು ಯಾರು ಮುನ್ನುಗ್ಗಿ ಕಾದಿದರು ಕೀರ್ತಿಯ ಮುಡಿ ಬರಲು
ಸತ್ವಶಾಲಿಯೆಂದನಿಸಿದ ಮಹಿಮಾವಂತನು ಕಮ್ರುದ್ದೀನ್
ನಾಶವನರಿಯದ ಕೀರ್ತಿಯನೊಲಿಸಿದ ಶಿಸ್ತಿನ ಈ ಷೇರ್ ಖಾನ್

ನೆರವಿಗೆ ನಿಂತನು ಮಿಗೆ ವಿಖ್ಯಾತಿಯ ಮೀರ್ ಸಾದಕ ತಾನೂ
ಯಾವನಾದರೂ ಶೂರನಾಯಕನವಿಗೆ ಸಮವೇನು
ಮೀರಾ ಹುಸೇನ್ ಅವ ಹೆಂಗಳ ಕಂಗಳಿಗಾನಂದದ ನೆಲೆಯು
ಪುಷ್ಪಬಾಣನಹ ಮನ್ಮಥನಂದದಿ ಸೌಂದರ್ಯದ ಖನಿಯು

ಸುಬ್ರಾಯಮೂರ್ತಿ, ಭೀಮ್ರಾವ್ ಒಬ್ಬರ ಜಂಗ್ ಬಿರುದಾಚನಿಗೆ
ಕಾಳಗವೆಲ್ಲಿ ಕಠಿಣವೊ ಅಲ್ಲಿ ಅವರ್ ಮುನ್ನಲೆಗೆ
ನಿರ್ಭೀತಿಯ ಪೌರುಷದುತ್ಕರ್ಷಕೆ ಗುರುತವರಾ ಹೆಸರು
ದೇಶದೇಶದಲಿ ಹಬ್ಬಿಹುದವರ ರಣಪಂಡಿತವೆಸರು

ಖಾನ್ ಜೆಹಾನ್ ಖಾನ್ ಏಕವೀರನವನೆಣೆ ಬೇರಾರಿಲ್ಲ
ಸೈಯದ್ ಸಾಹೇಬ್ ನೋಡವನೊಬ್ಬನೆ ದಂಡಿಗೆ ಸಮನೆಲ್ಲ
ಇಂದ್ರನ ಸಿಂಹಾಸನವನು ಬಳಸಿದ ದಿಕ್ಪಾಲಕರಲ್ಲಿ
ಆ ಪರಿಯನುಪಮ ವಿಕ್ರಮವನು ನೆರೆ ಕಾಣುವ ಬಗೆಯೆಲ್ಲಿ

ಸದ್ಬ್ರಾಹ್ಮಣರ ವಂಶದಲುದಿಸಿದ ದಿವಾನ ಪೂರ್ಣಯ್ಯ
ಕದನ ನಿರ್ಭಯನಾತನಿಗೆಣೆಯನು ಕಾಣುವರಾರಯ್ಯ
ಮಂತ್ರಾಲೋಚನೆಯಲ್ಲಿ ಬೃಹಸ್ಪತಿಯೆನಬಹುದಾತನನು
ಎಂತು ಪಡೆಯಿತೋ ನಮ್ ಸುಲ್ತಾನನ ಪದವಿ ವಿನಾಶವನು

ಆಹ ಬೇಗನದು ಓಡಿ ಹೋಯಿತು ಎಷ್ಟು ಅಲ್ಪವೋ ಆ
ರಂಜಕ ಕಣವದು ಗುಂಡನೆಷ್ಟು ಬೇಗೋಡಿಸಿತೋ ಹಾಹಾ
ಹಿರಿ ಸಾಮ್ರಾಜ್ಯವನಾ ಕಿರುಕಣ ಧೂಳಿಗೆ ಬೀಳಿಸಿತಲ್ಲ
ನಮ್ಮ ಶೂರ ಸುಲ್ತಾನನೊ ಅದು ಧರೆಗುರುಳಿಸಿತಲ್ಲ

ಸಿಂಹಾಸನವನು ಕಾಪಿಡಲೆಂದೆಡಬಲಗಳಲೊಗ್ಗೂಡಿ
ನಿಂದವನಾ ಕಲಿ ಮೊಗಲರು ಗರ್ವದಿ ನುಡಿವರು ದನಿಗೂಡಿ
ಎಂದಾದರೂ ಈ ಧರೆಯೆಬ್ಬೊಡೆಯವನೊಲಿದವಗಡಗಿತ್ತೆ
ನಿನ್ನದು, ನಿನ್ನದು ಸಾರ್ವಭೌಮ ಪದದಧಿಕಾರವು ಮತ್ತೆ
ದುರದೃಷ್ಟವನೊಂದಿನಿತೂ ಗಣಿಸದೆ ಮನದಲಿ ಭಯಪಡದೆ
ಅವನನು ಸುತ್ತಿ ಹಲವು ಸಾಲಿನಲಿ ಬಳಸಿದರೆಡೆಬಿಡದೆ
ಗಾಳಿಯಂತೆ ಗುರಿಯಿಲ್ಲದೆ ಅಲೆದಾ ಒಂದೇ ಒಂದು ಗುಂಡು
ಅವರೆಲ್ಲಿ ನಡುವೆಯೆ ಸುಲ್ತಾನನ ಕೆಡವಿತು ಬೆಂಗೊಂಡು

ಅಲ್ಲಾ ದೇವರ ಮಿಗೆ ವಿಖ್ಯಾತಿಯ ಬಲವೆಲ್ಲಡಗಿತ್ತು
ಭಗವತ್ಪ್ರೇರಣೆಯಿತ್ತೆಂದೆಯಲಾ, ಆ ಬಲವೆಲ್ಲಿತ್ತು
ದುರದೃಷ್ಟವ ನೆರೆ ಹೊತ್ತು ತಂದ ಆ ದುರ್ಮುಹೂರ್ತದಲ್ಲಿ
ನಿನ್ನ ಕುರಾನಿನ ಪಾವನ ಜ್ಯೋತಿ ಓಡಿಹೋದುದೆಲ್ಲಿ

ವ್ಯರ್ಥವಾಯಿತಾ ಪ್ರಾರ್ಥನೆಯೆಲ್ಲ ಹಿರಿಯ ಹರಕೆಯೆಲ್ಲ
ರಂಗ ನಿನ್ನ ಕೊನೆಗಾಲದ ವಿಧಿಸಿದ ಕೂಡಲೆ ಬಯಲೆಲ್ಲ
ಎಷ್ಟು ಸಣ್ಣ ಬಂದೂಕದ ಗುಂಡು ನಿನ್ನೆದೆಯನು ಕೊರೆಯಿತ್ತೋ
ಎಷ್ಟು ಬೇಗ ನಿನ್ನಾ ಸಾಮ್ರಾಜ್ಯ ಹಾಳಾಗಿ ಹೋಯಿತ್ತೊ
ರಾಜವಂಶಗಳಲುದಿಸಿದ ತನ್ನ ರಾಣಿಯರ ನಡುವೆ
ರಾಜ ಮನೋಹರ ರೂಪಿನ ದೊರೆಯಡಿಯಿಟ್ಟನು ಸೊಗಸಿಂದ
ರಣವಿಕ್ರಮದುರು ಕಳೆಯೆರಚುವ ತನ್ನಾ ಮಕ್ಕಳ ನಡುವೆ
ರಣಧೀರನು ಸುಳಿದನು ನೆಲಕಿಳಿದ ದೇವತೆಯಾ ಬೆಡಗಿನಿಂದ

ಬಳಸಿರೆ ಮಿಗಿಲು ಪರಾಕ್ರಮದುನ್ನತ ಧೀರರ ಪರಿವಾರ
ಎಷ್ಟು ಬಿಂಕದಿ ಬೀಗಿತ್ತಾತನ ಸಾಮ್ರಾಜ್ಯಾಧಿಕಾರ
ಕಮಲನಯನ ತನ್ನಾ ಮುಗುಳ್ ನಗೆಯನು ಹಿಂದೆಗೆದ ಒಡನೆ
ಆ ಸಾಮ್ರಾಜ್ಯದ ವೈಭವವೆಲ್ಲ ಹೋಯಿತು ದಡಬಡನೆ

ಕೊಡಗು ಕಡಪ ಮೇಣ್ ಕಂಕಣವೆಂಬಾ ನಾಡುಗಳಾಳುವರು
ಒಡೆಯರು, ಹಳಮೆಯ ಕೀರ್ತಿಯ ಕುಡಿಗಳು, ನೃಪಕುಲಭೂಷಣರು,
ಕಂಡು ನಿನ್ನ ಕೈನೀಡಿದರಾಯುಧವೆಲ್ಲ ಕೆಳಗಿಟ್ಟು
ಹುಬ್ಬುಗಂಟ ಕಂಡೊಡನೆಯೆ ಣದರು ನೆಲದಲಿ ಮೈಯಿಟ್ಟು

ಮಲೆನಾಡೊಡೆಯರು ಗರ್ವದ ಗಿರಿಗಳು ಎತ್ತಿದ ನಿಡುಮುಡಿಯ
ಕೆಳತಗ್ಗಿಸಿದರು ಕೇಳಲು ನಿನ್ನಾ ಶಾನಗಳ ನುಡಿಯ
ನಿನ್ನೆದೆಯನು ಕೊರೆದಸೆದಾ ಏಟು ಅದೆಷ್ಟು ವಿಷಮವಾಯ್ತೊ
ಎಷ್ಟು ಬೇಗ ನಿನ್ನಾ ಸಾಮ್ರಾಜ್ಯ ವಿನಾಶವಾಗಿ ಹೋಯ್ತೊ

ಅಡಿಗೆರಗುತ ಭಯ ಭಕ್ತಿಯ ತೋರಲು ಭೂಮಂಡಲವೆಲ್ಲ
ಸಾಮ್ರಾಜ್ಯದ ಸಿಂಹಾಸನವೇರಿದ ದಿಲ್ಲೀಶ್ವರ ತಾನು,
ಕಟ್ಟಾವುದನೂ ಕಾಣದ ಗಣಿಸಿದ ಮರಾಟ ದಳವನೆಲ್ಲ
ತನ್ನೊಂದಾಳ್ಕೆಯ ಕಟ್ಟಲಿ ಕಟ್ಟಿದ ಶ್ರೀಮಂತನು ತಾನು,

ಜನಸಂದಣಿಸಿದ ದೇಶ ದೇಶಗಳ ರಾಜರುಗಳು ಎಲ್ಲ,
ನಿನ್ನಾ ವಿಜಯ ಪತಾಕೆಯು ಮೇಲೆ ಹಾರುವುದನು ಕಂಡು
ಮಿಗೆ ದಿಗಿಲಿನಿಂದ ತೊರೆದರು ತಮ್ಮ ನಾಡುಗಳವನೆಲ್ಲ
ಎಷ್ಟು ಬೇಗ ನಿನ್ನಾ ಸಾಮ್ರಾಜ್ಯ ಹೋಯಿತೋ ಹಾಳ್ಗೊಂಡು

ದೂರದಿಂದ ಸಿಂಗಳ ನಾಡಿಂದ ಬಂದರು ತಾವಿಲ್ಲಿ
ಆಂಗ್ಲಿ, ಜಾತಿಯ ಜನರವರೋಡುವುದರಿಯರು ರಣದಲ್ಲಿ
ರಂಗನಾಥನ ಪಾವನ ನಾಮಕೆ ಭಯ ಭಕ್ತಿಯ ತೋರಿ ಅ
ಅವರ ರಣದ್ವರ ಗಗನದಿ ಹಾರಿತು ಕೆಂಪಿನ ಕಳೆ ಬೀರಿ

ನಮ್ಮೆತ್ತರದ ಕೋಟೆ ಕೊತ್ತಳಗಳ ಕೆಡವಿದರವರ್ ನೆಲಕೆ
ತಮ್ಮ ವಿಜಯ ಭೇರಿಗಳ ಬಾಜಿಸಿದರು ನೆಗೆಯಲು ದನಿ ದಿವಕೆ
ಆಗಲೆ ನಮ್ಮ ಶ್ರೀರಂಪಟ್ಟಣ ವೈಭವ ಹಾಳಾಯ್ತು
ಕದನ ಪಟುಗಳೆಂದೆನಿಸಿದ ನಾಯಕರೆಲ್ಲಿದ್ದರು ಅಂದು
ದಳವೆಲ್ಲಿದ್ದವು, ಭೀಕರ ಕಾಳಗವೊದಗಿ ಬಂದಂದು
ಆಹಾ ಕೃಷ್ಣನ ಕೃಪೆಯ ಕಟಾಕ್ಷವು ತೊಲಗಿದಾ ಒಡನೆ
ನಮ್ಮಾ ದೊರೆಯೂ ನಮ್ಮ ರಾಜ್ಯವೂ ಹೋದವು ದಡಬಡನೆ

ಎಷ್ಟು ವ್ಯರ್ಥವಹ, ಸೊಕ್ಕಿನ ಮನುಜನ ಹೆಮ್ಮೆಯದೊಂದೊಂದೂ
ಎಷ್ಟು ಬರಿದೊ ಈ ಧರೆಯಧಿಕಾರದ ವೈಭವವೊಂದೊಂದೂ
ಸೊಕ್ಕಿನ ಬಲ್ ಗೋಟೆಗಳ್ ಮಿದೊರಗಿ ಸೇರುವವೈ ಹುಡಿಗೆ
ಅವುಗಳ ಮೇಲೆ ದುರದೃಷ್ಟ ಕರಿಮೋಡವಿಳೆಯೆ ಕಡೆಗೆ

ಮಿರಿದೊರಗುವುದೀ ಧರಣಿಯ ಸಂಪತ್ ಸಿಂಹಾಸನವೆಲ್ಲ
ಮರ್ತ್ಯರ ವೈಭವ ನೆರಳ್, ಅದು ಕರಗುತ ಮರೆಯಹುದುಳಿವಿಲ್ಲ
ನಂಬಿಕೆಯಿಡಿ, ಇಡಿ, ವಿಷ್ಣುವಿನಾ ಪದಪಂಕಜವೊಂದರೊಳೇ
ನಂಬಿಕೆಯಿಡಿ, ಇಡಿ, ನಾಶವನರಿಯದ ಅವನಾ ಶಕ್ತಿಯೊಳೇ

ಶ್ರೀರಂಗಪಟ್ಟಣದ ಭಾರಿಯ ಕೋಟೆಯ ಬಳಿಯಲ್ಲಿ
ಕ್ರೂರ ದುರ್ವಿಧಿ ಹಾರಿಸತಯ್ಯೋ ಗುಂಡೊಂದ
ಬೀಳಲೆಬೇಕೊಡನೆಯೆ ನಾವೂ ನಮ್ ಸುಲ್ತಾನನ ಕೂಡೆ
ಅಯ್ಯೋ ಸುಲ್ತಾನಾ ನಮ್ಮ ಧೀರ ಸುಲ್ತಾನಾ

ಹೆಣಗಳ ಬಳಬೆಯ ಮಧ್ಯದಿ ಸುಲತಾನ್ ಕುಸಿದಂದು,
ಅವನೊಡನೆಯೆ ನಮ್ಮಾಸೆಗಳೆಲ್ಲಾ ಕುಸಿದಂದು,
ಅಂಜಿ ಹಿಂಜರಿದಾ ಬೊಡ್ಡೀ ಮಕ್ಕಳ ತಲೆಮೇಲೆ
ಮಣ್ಣು ಸುರಿಯಲಿ ಮಣ ಅವರೆಲ್ಲರ ತಲೆಮೇಲೆ

ಅಜಿತವು ಸುಲ್ತಾನ್ ಮೆರೆದನು ಸಿಂಹಾಸನದಲ್ಲಿ
ಅದರ ಸತ್ವದ ಹೀರಿತು ಮೋಸ, ಬಲ್ ಮೋಸ
ಅವನೊಬ್ಬನೇ ಇಗೇ ದೊರೆತಿತ್ತಿದು, ಈ ಸೌಭಾಗ್ಯ
ಅನ್ಯ ಪ್ರಭುವನು ಕಾಣದೆ ಬಿದ್ದನು ಸುಲ್ತಾನ

ಹಾಳಾಗಿ ಹೋಗ, ಯೆಸೀದನ ಆ ದ್ರೋಹಿ ಸಂತಾನ
ನಂಬಿಕೆಗೇಡಿ ಮಾಡಿದವನವನೇ, ಆ ನೀಚ
ಅಟ್ಟರಲವನಿಗೆ ಯುಗಯುಗಗಳ ಬಲು ಶಾಪ
ಅವನಪರಾಧಕೆ ಬಲಿಬಿದ್ದನು ನಮ್ಮ ಸುಲ್ತಾನ

ನಮ್ಮ ಹದಾಸೆಗಳೆಲ್ಲ ಅವನೇ ಆಗಿದ್ದ
ನೆಲದಾ ಮಣ್ಣೇ ಅವನಿಗೆ ಸಿಂಹಾಸನವೀಗ
ಅಯ್ಯೋ ನಮ್ಮೆಲ್ಲರ ಬಾಯ್ಗೂ ಬಿತ್ತು ಹಿಡಿ ಮಣ್ಣು
ವೀರರ ವೀರನು ನಮ್ಮ ಸುಲ್ತಾನನು ಬಿದ್ದಾಗ

**ಟೀಪು ಸುಲ್ತಾನ**

ಸರಸವುಳ್ಳ ಶ್ರೀರಾಮಚಂದ್ರ
ಸದಾಬಂದು ಕೂಡಿರಿ ಇಂದ್ರ
ಹೇಳತೀನಿ ಭೇದ ಏಕಂದ್ರಾ ಮಾಡಿ ಖಿಲ್ಲಾ

ಅಂತೀನಿ ಪರಸಂಗ ಒಂದಾ
ಕೇಳ ರಿ ದ್ಯಾನ ಕ ತಂದಾ
ಅಂಗೈ ನೆರಳಿನೋಳು ಯಿನನಾ
ಸಲುವುತ್ತ ದೈವ ನನ್ನಾ
ಮಾಡಬೇಕು ನೀವು ಯಿನನಾಮಾಪಾ
ನನ್ನ ಕಡೆ ಇದ್ದರೆ ತಪ್ಪಾ
ಬಿಟ್ಟು ಮನದೆನ ಕೋಪಾ ನಾ ನಿಮ್ಮ ಬಾಲಾ

ಶ್ರಿಷ್ಟಿವಳಗೆ ನರಸುಳ್ಳಾತ
ಯುದ್ಧದೊಳಗೆ ರಣಶೂರಯೀತ
ಟೀಪು ಸುಲ್ತಾನ ಮಾತ ಇಡರಿ ಖ್ಯಾಲಾ

ಬ್ರಾಹ್ಮಣನೆ ಮನಿವಳಗೆ
ಚಾಕರಿಯಿದ್ದ ಟೀಪು ಆಗ
ಸಣ್ಣವನು ಇರೂರೂತಾನಾ
ಕಾವುತಿದ್ದ ಆಕಳುದನಾ
ನಿತ್ಯ ನೇಮ ಹೋಗುವನು ಹೊಲಕ
ಬಿಟ್ಟು ದನಾ ಗಿಡದ ಬುಡಕೆ
ಮಲಗುವನು ಬೇಶಕ ಯಾರ ಭಯಾಯಿಲ್ಲಾ
ನಿದ್ರೆಯಲ್ಲಿ ಮನಿಗ್ಯೋನೊ ಸಾಪಾ
ಬಂತು ಏಳು ಪದ್ಯದ ಸರ್ಪಾ
ನೆರಳ ಆಗ ಹಿಡಿದೀತಪ್ಪಾ ಮಾರಿ ಮ್ಯಾಲಾ

ಬ್ರಾಹ್ಮಣ ಮನಿಲಿಂದಾ
ತಿರುಗೂತ ಹೊಲಕ ಬಂದಾ
ಕಂಡ ಕಣ್ಣೆ ಲೆ ಸರ್ಪ ಬಂದಾ
ಹಿಡಿದಂತಾ ನೆರಳಾ ಅಂದಾ
ಖುಸಿಯಾಗಿ ಮನಸಿನ ವಳಗ
ಎಬಿಸ್ಯಾನ ಅವ ಆಳಮಗ್ಗ
ಇಟ್ಟ ನೋ ಅವರ ಮುಂದ್ ಖುಸಿಯಾಲಾ

ಸ್ವಚ್ಛ ಪನ್ನಿರಿನಿಂದಾ
ಯಿಟ್ಟ ಟೀಪುವಿಗೆ ಯೆರದಾ
ಭೂಷಣ ಸರ್ವಾಂಗದೊಳು
ವಾಸನಿ ಅರಬಿಗಳ ತೊಡಸಿ
ಸರತಾಜ ಸಿರಿಪೇಚ್ಯಾಗ
ಇಟ್ಯಾರೊ ತಲಿಮ್ಯಾಗ
ಹೇಳತಾನ ಪೂರ್ಣೈ ಆಗ ನೋಡಿ ರಮಲಾ
ಗ್ನಾನವಂತ ಪೂರ್ಣೈ ಆಗ
ಹೇಳತಾರ ಟೀಪುಗ
ರಾಜಕಕಿ ಬರುವದು ನಿನಗ ಸುಳ್ಳಲ್ಲಾ

ಯಾವ ಜ್ಯಾಗೆ ಕೊಡತೀರಿ ಅಂತಾ
ಪೂರ್ಣೈ ಹಿಡಿದ ಶರತಾ
ಸರ್ವ ಸೇನೆಗಳ ಮ್ಯಾಗ
ಪ್ರಧಾನಿ ಪೂರ್ಣೈ ಆಗ
ಮಾಡಿದ ರು ವಚನವ ಕೊಟ್ಟಾ
ಮನದಾನ ಸಂಶಯವ ಬಿಟ್ಟಾ
ಟೀಪುಸುಲ್ತಾನಗ ಪಟ್ಟಾ ಆದಿತಲ್ಲಾ

ಪಟ್ಟಿಕ ಪ್ರಧಾನಿ ಸುಖಾ
ಇಟ್ಟಾ ಪೂರ್ಣೈಗ ಜರಬಾ
ಕಾಟಿಕ ಇವನಂತಾ ಕುರುಬಾ ಏನು ಬಲ್ಲಾ

ವಜ್ರಪಾಶಾಣದಂತಾ ಕುದರಿ
ಹಾಕಿ ಜೂಲ ಜರ ತಾರಿ
ಕುದುರಿ ಪಟ್ಟೀಕ ಕುಬ್ಬಾ
ಯರದ ಟೀಪನ ಸವಾರಿ
ಕುಂತಾರ ಕುದರಿ ಹಾರಿ
ಹೊಂಟಾರೊ ತಿರುವುತ ಪೇರಿ ಭಯವಿಲ್ಲಾ

ಯಜವತಿತ್ತೊ ಕುದರಿಯೆಲ್ಲಾ
ದ್ರವಯವುಂಡು ಇರುವುದೆಲ್ಲಾ
ಎತ್ತಿ ಒಗಿಯುವರು ತಮಮ್ಮ ಕೈಲೆ ಅವರಮ್ಯಾಲೆ

ದರಂತೆ ಭೂಮಿಮ್ಯಾಗ
ದ್ರವ್ಯ ಸಿಗುವುದು ಆಗ
ಶಿವನ ಕಡಿಲಿಂದಾ ಗರ್ದಿ ಇತ್ತು ತನಗ
ದೋರತಗಾಡಿ
ಸುತ್ತ ರಾಜರಗಂಡಾ ಅನಸೀದ ಪ್ರಚಂಡಾ
ಟಿಪ್ಪುಸುಲ್ತಾನ ಮುಖಂಡಾ ಅನಿಸ್ಯಾನಲ್ಲಾ

ಪೂರ್ಣೈಯನ ಮೋಹದ ಕನ್ನಿ
ರೂಪವುಳ ದೆವಗನ್ನಿ
ಪತಿವ್ರತದ್ರಮನ  ಪೂರ್ಣೈ ಇದ್ದಾಳಲ್ಲಾ

ಗಳತೇರ ಕರಕೊಂಡು ಸಂಗ
ನದಿಗೆ ಹೋದಾಳೊ ಬ್ಯಾಗ

ಕೊರಳು ಶಂಕಿನಂತೆ ಹೆರಳ ರಾಘುಟ್ಟಿಚೌರಿ
ಕಾಮಸ್ಸೆಸ ದಾತ
ಮದನಿಗೆ ಮದನ ಮೋಹಿತಾ
ಒಬ್ಬ ಸಿಪಾಯಿನಿಂತಿದ್ದಾತಾ ಖಬರಿಲ್ಲಾ

ಕಳವುಳ್ಳ ರೂಪಗ ಜ್ಯಾರಿ
ಬಿದ್ದು ಕಾಮ ಆದೀತು ಸೂರಿ
ಸರ್ವಮಾತು ಹೋದೀತು ತೀರಿ ಬಿಲಿಲ್ಲಾ

ಬಂದಾಳೊ ದುಃಖದೊಳಗೆ ಅಂದಾ
ತಂದಿ ಕೇಳೊ ಈಗ
ಯಾರಿಗೆ ಹೇಳಲಿ ಮಾರಿತೋರಿಸ ದಂತೆ ಆತ
ಕೇಳಿ ಹೀಂಗ ಮಗಳ ಮಾತ
ಕೋಪ ತಡಿಯದಾತು
ಮಂಡಲದಾಗ ಮನಹೋತು ಅಂತಾನಲ್ಲಾ

ಬಿಚಗತ್ತಿ ಹಿಡಿದು ಕೈಯಾಗ
ಪ್ರಧಾನಿ ಹೊಂಟನೊ ಆಗ
ಬಂದು ಅರಬಾರದೊಳಗ ಅಂದಾನಲ್ಲಾ
ಮಾಡಿರಿಯಿನನಾ ಸಾಪಾ
ಅರಸರು ನೋಡಿತಪ್ಪಾ
ಸರಿಯ ಬಾರದಂತಾ ಮಾಯಾ
ಹರಿಯನಾತನಿಗೆ ಕೊಟ್ಟು
ಸಿಪಾಯಿಗೆ ವರ್ದಿ
ಇನ್ನಾ ಉಸಾಪ ನಡದೀತು ಗರ್ದಿ
ಅಂದ ಸಿಪಾಯಿ
ತಪ್ಪಿತು ಹಾದಿ ತಿಳಿಯಲಿಲ್ಲಾ
ಅರಸ ಅಂದಾ ಕೇಳು ಪ್ರಧಾನಿ
ಅಟ್ಯಾದ ಅಡಗಿ ಕೆಟ್ಟಿತು ಅದನಾ
ಕೊಟ್ಟವಗ ಮಾಡೊಲಗನಾ ತಿಳಿಯಾಕಿಲ್ಲಾ

ಇಟ್ಟ ಮನದಾಗ ಕಪಟಾ
ಬಂದಾನುಲಾಗು ಪಾಟಾ
ಕುಲಗೇಡಿ ಬ್ರಾಹ್ಮಣ ತಾನು ಕುಲಾಚಾರ ಬಿಟಾನವನು
ಪೂರ್ಣೈಯಾಗ ಮಾಡಿ ಪಿತೂರಾ
ಬಲಾಯತಗೆ ಬರದ ಪತ್ತರಾ
ಸೋಜರ ದಂಡ ವತ್ತಾರಾತರಸ್ಯಾನಲ್ಲಾ

ಮೇಳದೊಳಗೆ ಸೋಜೇರಾ ಸೈನಾ ತುಂಬಿ ತುಂಬಿ
ಬಂದಿತರಣಾ
ಪೂಣ್ಯೆಯನಾ ಕಪಟತನ ತಿಳಿಯಲಿಲ್ಲಾ

ತಂದ ತಂದು ಇಳಿಸ್ಯಾನಾಗ ಸರ್ವಸೈನಾ
ವಾಡೇದ ವಳಗ
ತನ್ನ ಸರ್ವಸೈನಕ ಆಗ ಪೂಣ್ಯೆಯಾ ಹೇಳ್ಯಾನೋ ಹೀಂಗ
ರೆಪು ಎತ್ತಿಗೊಸ್ಯಾದೋರು ತಿರುಸುವಾಗ
ಅಡ್ಯಾದೋರು ಜನಾ ಬಿಟ್ಟುಹೋಗರು ದೂರ ಅಂದಾನಲ್ಲಾ

ಸರ್ವದಂಡ ಹೋದೀತು ಹೊಂಟ್ಯಾ
ಪೂಣ್ಯೆಯಾ ಹುಕಮ ಕೊಟ್ಯಾ
ಸುರಂಗೇರಾನಾ ಬೈಯಲಿಗೆ ಬಿಟ್ಯಾ ತಡಾಯಿಲ್ಲಾ

ಮದ್ದು ಗುಂಡು ಹಾರ್‍ಯಾವದುಂದಾ
ಟೀಪು ಕೇಳಿ ಆಗ ಬಂದಾ
ಶಾರಾ ಮದ್ರಶಾಕ ಅನಿಸಿ
ಧೀರ ಆ ಸುಲ್ತಾನನು
ಡಾಲುಕತ್ತಿ ಕೈಯ ವಳಗ
ಗುಂಡುಗಳ ಸುಲ್ತಾನಗ ಬಡದು
ಪ್ರಾಣ ಹೋದಿತು ಆಗ ತಿಳಿಯಲಿಲ್ಲಾ

ಗಂಜ್ಯಾಮದೊಳಗೆ ಮಾಡ್ಯಾರೊಮಣ್ಣಾ
ಟೀಪು ಸುಲ್ತಾನಗ ದಪನಾ
ಹಿಡದು ಕಡತ ಪೂರ್ಣೈಯಗ ಬಿಲಲಿಲ್ಲಾ

ಪರಂಗೇರ ಚೇಂಡೆ ಆಗ ನೆಡಸ್ಯಾರ ಕಿಲ್ಲೆದಮ್ಯಾಗ
ಬರದೆ ಪ್ರಾರಬ್ದ ದೊಳಗ
ಬರಿಯದು ತಪ್ಪಿತುಹ್ಯಾಂಗ
ತೋಡಿಪದಾ ಹೀಂಗ ಮಾಡಿ ಹಾಡುವೆ ದೈವದ ಒಳಗೆ
ಹೊಡೆದ ನಿನ್ನ ಮಾರಿಮ್ಯಾಗ ಮುರದ ಹಲ್ಲಾ

ಹರಕು ಬುದ್ದಿ ಹಾದರಗಿತ್ತಿ
ಅನಿಸಿದಾಗ ನೀನು ಪತಿವ್ರತಿ
ಎಲ್ಲಿ ಹೋದರ ನಿನ್ನ ಫಜೀತಿ ಮಾಡೇನಲ್ಲಾ

ನನಗ ನಿನಗ ಬಿಟ್ಟಿತ ಹ್ಯಾಗ
ತಿಳಿ ನಿನ್ನ ಮನಸಿನ ಒಳಗ
ಯರಿ ಹೊಲಕ ಬಿರಿ ಬಿಟ್ಟಂತೆ
ಕದನಗಿತ್ತಿ ಕಾಳಿ ನೀನು
ಗುರುನಮ್ಮ ದಸ್ತಗೀರಾ ಕರುಣಳ್ಳ
ಕೇಸೂಪೀರಾ
ನಾಗುಗೌಸು ಗೆಳಿಯರಂತಾರಲ್ಲಾ

ಏನು ಮೋಸವಾಯಿತು
ಕಡಿದ ಕಲ್ಲಿನ ಕೋಟೆ
ಗುಡುಗುಡಿಸುವ ಗುಂಡು
ಬಿಡದ ಬಾಲ್ಯಗಳ್ಹತ್ತು ಸಾವಿರುವು
ಒಡನೆ ಬಲ್ಲಾಳರಾಯ
ದಂಡೆತ್ತಿ ಬರುವಾಗ
ಸಡಗರ ಸಂಪತ್ತು
ಕ್ಷಣದಲ್ಲಿ ಹಾರಿಹೋಯಿತಲ್ಲ

ಏನು ಮೋಸವಾಯಿತು
ಮುತ್ತು ರತ್ನ ಚೆಲ್ಲಿ ಹೋಯಿತು

ಮದ್ದುಗುಂಡುಗಳ....
ಸಿರಿ ರಂಗಪಟ್ಟಣ ಗಳಿಗೇಲಿ
ಸೂರೆಹೋಯಿತು

ಬಡಗಲ ಬತೇರಿ ಒಳಗೆ
ಬೆಂಕಿನವಾಬ ಬಿದ್ದ
ತೆಂಕಲ ಬತೇರಿ ಒಳಗೆ
ಸೈದುಗಪೂರ ಬಿದ್ದ
ಹಾ! ಹಾರಿ ಕಡಿವ ನಮ್ಮ ಬೆಂಕಿನವಾಬ ಇದ್ದ

ಏನು ಮೋಸವಾಯಿತು
ಮುತ್ತು ರತ್ನ ಚೆಲ್ಲಿ ಹೋಯಿತು

ಸಿರಿ ರಂಗಪಟ್ಟಣ
ಗಳಿಗೇಲಿ ಸೂರೆಹೋಯಿತು

ನಿನ್ನೆಯ ಜಿನಕೆ ಪೂರ್ಣಯ್ಯ
ಮನ್ನಣೆ ಒಳಗಿದ್ದ
ಸನ್ನೆ ಇಂದಲಿ ಕೊಟ್ಟ
ನಿನ್ನ ಪಟ್ಟಣಗಳ
ಉಪ್ಪಿನ ಋಣಕೆ
ಎರಡು ಬಗೆದ ಕಾರಣದಿಂದ
ಸಂಚು ಕಟ್ಟಿದರೊ ಕೋಟೆ ಬಾಗಲ ಒಳಗೆ

ಏನು ಮೋಸವಾಯಿತು
ಮುತ್ತು ರತ್ನ ಚೆಲ್ಲಿ ಹೋಯಿತು

ಹನ್ನೆರಡು ಗಂಟೆ ಹೊತ್ತು
ನಿಂತ ಮಧ್ಯಾಹ್ನದಲ್ಲಿ ಸಡಗರ ಸಂಪತ್ತಾಕ್ಷಣದಲ್ಲಾಗೋಯ್ತು
ಏನು ಮೋಸ ಹೋಯಿತು
ಮಾವುತರ ಠಾಣ್ಯ ಬಹಳ
ಮಡಿದುಹೋಯಿತು

ಏನು ಮೋಸವಾಯಿತು
ಮುತ್ತು ರತ್ನ ಚೆಲ್ಲಿ ಹೋಯಿತು
ಏನು ಮೋಸವಾಯಿತೊ

ಏನು ಮೋಸವಾಯಿತೋ ಸುಲ್ತಾನ್ ದೌಲತ್
ಯಾರ ಪಾಲಿಗೆ ಸೇರಿತೋ ||ಪ||

ಸುತ್ಮುತ್ ಕಾವೇರಿ ಹೊಳೆ
ನಡುವೆ ಶ್ರೀರಂಗಪಟ್ನ
ಪಟ್ಟಣದೊಳಗೆಲ್ಲ ನೀನೆಂಬೊ ರಂಗಸ್ವಾಮಿ |ಏನು ಮೋಸವಾಯಿತೋ||

ಕೋಟೆ ಮೇಲೆ ನಿಂತು ಕೊಂಡು
ಹಸುರುಕೊಡೆ ಹಿಡಿದುಕೊಂಡು
ಹೋಗೋ ದಂಡಿಗೆಲ್ಲ ವಸ್ತ್ರವ ಬೀಸಿದ
ರಾಜನ ದೌಲತ್ |ಏನು| ಮೋಸವಾಯಿತೋ||

ಮಟ್ ಮಟ್ ಮಂಗ್ಳಾರದ್ದಿವ್ಸ
ಮಧ್ಯಾಹ್ನದ ಹೊತ್ತಿನಲ್ಲಿ
ಹದ್ದು ಹಾರಿದ್ಹಾಂಗ ಹಾರಿತಲ್ಲೊ
ರಾಜನ್‌ದೌಲತ್ ಹೋಯ್ತು |ಏನು ಮೋಸವಾಯಿತೋ||

ಸುಲ್ತಾನನ್ ದೌಲತ್ ಹೋಯ್ತು
ಕುಂಪ್ನೀಗ್ ದೌಲತ್ತು ಬಂತು
ಹೆಂಗಸರೀಗೆಲ್ಲ ಹೆಚ್ಚಿನ್
ಕಾರ್‌ಬಾರು ಬಂತು |ಏನು ಮೋಸವಾಯಿತೋ||

ಟಿಪ್ಪುವಿನಂತೆಯೆ ಬ್ರಿಟೀಷರಿಗೆ ಕಾಡಿದ ಇನ್ನೊಬ್ಬನೆಂದರೆ ಸಂಗೊಳ್ಳಿರಾಯಣ್ಣ, ಈತನ ಕುರಿತಾಗಿಯೂ ಸಾಕಷ್ಟು ಲಾವಣಿಗಳಿರುವುದನ್ನು ನೋಡಬಹುದು. ರಾಯಣ್ಣ ದುರಾಡಳಿತದ ವಿರುದ್ಧ ಬಂಡೆದ್ದದ್ದು, ಜನರನ್ನು ಕೂಡಿಸಿ ಹೋರಾಡಿದ್ದು, ಕೊನೆಗೆ ಎಲ್ಲರೂ ಅವನಿಗೆ ಸಹಾಯ ಮಾಡಿದ್ದು, ಕ್ರಮೇಣ ತನ್ನ ಬಲವನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುತ್ತಾನೆ. ಕೊನೆಗೆ ತನ್ನ ಆಪ್ತರಂತೆ ನಟಿಸುತ್ತಿದ್ದವರ ಮೋಸಕ್ಕೆ ಬಲಿಯಾಗಿ ಸಾವನ್ನಪ್ಪುತ್ತಾನೆ. ಟಿಪ್ಪು ಕೂಡ ಹೀಗೆಯೇ ತನ್ನ ಮಂತ್ರಿಯೊಬ್ಬನ ಮೋಸದಿಂದಲೇ ಸಾವನ್ನಪ್ಪುತ್ತಾನೆ. ಇದರ ಕುರಿತು ಲಾವಣಿಕಾರರು ತುಂಬಾ 'ಭಾವನಾತ್ಮಕ' ರೀತಿಯಲ್ಲಿ ಈ ದುರಂತರಗಳನ್ನು ಚಿತ್ರಿಸಿದ್ದಾರೆ ತಮ್ಮ ತಮ್ಮ ಲಾವಣಿಗಳಲ್ಲಿ.

ಸಂಗೊಳ್ಳಿ ರಾಯಣ್ಣ ಮೂಲತಃ ಕಿತ್ತೂರಿನ ಅರಸನಲ್ಲಿ, ಅವನು ಕಿತ್ತೂರಿನ ರಾಣಿ ಚನ್ನಮ್ಮನ ಸಂಸ್ಥಾನದಲ್ಲಿ ಮಾಲೀಕಾರ ಮನೆತನಕ್ಕೆ ಸೇರಿದವನು. ಚನ್ನಮ್ಮನಿಗೆ ಮಕ್ಕಳಿರಲಿಲ್ಲವಾದ್ದರಿಂದ ರಾಣಿ ಚನ್ನಮ್ಮಳಿಗೆ ಮಗ ನಂತಿದ್ದನು. ಆಕೆಯನ್ನು ಬ್ರಿಟೀಷರು ಸೆರೆ ಹಿಡಿದ ನಂತರ ತಾನು ಆಕೆಯ ಕರ್ತವ್ಯವನ್ನು

ನಿರ್ವಹಿಸತೊಡಗಿದನು. ಬ್ರಿಟೀಷರಿಂದ ನೇಮಕವಾಗಿದ್ದ ಕುಲಕರ್ಣಿಯು ತನಗೆ ಮನ ಬಂದಂತೆ ವರ್ತಿಸುತ್ತಿರುವುದರ ವಿರುದ್ಧ ಧ್ವನಿ ಎತ್ತಿದನು. ಭೂಗತನಾಗಿದ್ದು ಕೊಂಡೇ ಬ್ರಿಟೀಷರ ವಿರುದ್ಧ ಒಂದು ವೀರ ಸೈನ್ಯವನ್ನು ಕಟ್ಟಿದನು. ಅಲ್ಲದೆ ಸುರಪುರ ನಾಯಕರ ನೆರವನ್ನೂ ಪಡೆದು ಸುಮಾರು ಮೂರು ಸಾವಿರದಷ್ಟು ತನ್ನ ಸೈನ್ಯ ಬಲವನ್ನು ಹೆಚ್ಚಿಸಿಕೊಂಡನು. ೧೮೨೯ರಲ್ಲಿ ಕಿತ್ತೂರಿನ ರಾಣಿ ಚನ್ನಮ್ಮನ ಮರಣಾನಂತರ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಎರಡನೆ ಹಂತದ ಹೋರಾಟವನ್ನು ಪ್ರಾರಂಭಿಸಿದ, ಅಲ್ಲಿಂದ ಅವರ ಕಛೇರಿಗಳ ಮೇಲೆ ದಾಳಿ ಪ್ರಾರಂಭಿಸಿದ ತನ್ನ ಜೀವಿತನ ಅವಧಿಯಲ್ಲಿ ಒಟ್ಟಾರೆಯಾಗಿ ಹನ್ನೆರಡು ಸಲ ಯುದ್ಧ ಮಾಡಿದ್ದಾನೆ ಎಂಬ ದಾಖಲೆಗಳಿವೆ. ಕೊನೆಗೆ ತನ್ನವರಿಂದಲೇ ಮೋಸಕ್ಕೊಳಗಾಗಿ ಹತನಾಗುತ್ತಾನೆ. ಈತನನ್ನು ಕುರಿತಾಗಿ ಜನಪದರು ಈ ರೀತಿಯಾಗಿ ಹಾಡಿ ಹೊಗಳಿದ್ದಾರೆ. ಇದು 'ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿರಾಯಣ್ಣ' ಎಂಬ ನಿಂಗಣ್ಣ ಸಣ್ಣಕ್ಕಿಯವರ ಸಂಕಲನದಿಂದ ಆಯ್ಕೆ ಮಾಡಿಕೊಂಡ ದೀರ್ಘ ಕಥಾನಕವಾಗಿದೆ.

## ಕಲಿದೀಪ ಸಂಗೋಳ್ಳಿ ರಾಯಣ್ಣ

ಬೆಳಗಾಂವಿ ಜಿಲ್ಹಾ ಪೈಕಿ ಸಂಪಗಾಂವಿ ತಾಲೂಕಿನೊಳಗೆ
ಸಂಗವಳ್ಳಿ ಎಂಬ ಸಣ್ಣ ಹಳ್ಳಿ ಇತ್ತೂ ಹದ್ದಿನೊಳಗ
ತಾಯಿ ಕೆಂಚವ್ವನ ಹೊಟ್ಟ್ಯಾಗ ಬೆಳೆದಾನು ರಾಯಣ್ಣಾಗ
ರೋಗವಣ್ಣವರ ರಾಯನೆಂದು ಹೆಸರು ಆದಾಯ ಬೇಶದ ಮ್ಯಾಗ
ಜಾತಿಯಿಂದ ರಾಯಣ್ಣ ತಾನು ಕುರುಬ ಆಗಿದ್ದನಾಗ
ಸಂಗವಳ್ಳಿ ವಾಲಿಕಾರಕಿ ಇತ್ತ ಅವರ ವಂಶಕ್ಕಾಗ
ಸಂಗವಳ್ಳಿ ಕುಲಕರ್ಣಿಕಿ ಮಾಡುತ್ತಿದ್ದನು ಬಾಳಣ್ಣಾಗ
ಅಪ್ಪಹೊತ್ತಿಗೆ ಇಂಗ್ರೇಜಿ ಗರಬಾರ ಬಂದಿತು ದೇಶದ ಮ್ಯಾಗ
ಇಂಗ್ರೇಜಿ ಕಾಯದೆ ಪ್ರಕಾರ ಹುಕುಮು ಕಳಿಸ್ಯಾರು ಬಾಳಣ್ಣಗಾಗ
ಇನಾಮತಿ ಜಮೀನ ಎಲ್ಲಾ ಅಳತಿಮಾಡಿ ಕೊಡೋನಮಗ
ಹುಕುಮು ನೋಡಿ ಕುಲಕರ್ಣಿ ಹೇಳುತ್ತಿದ್ದಾನು ಫಕ್ಕೀನಾಗ
ತಳವಾರ ಫಕೀರ ಲಗುಮಾಡಿ ಬಾರೋ ತಮ್ಮ
ಈಗ ಅಂಥಾ ಇಂಗೀಷ ದರಬಾರ ಬಂತೋ ರಾಜ್ಯದಮ್ಯಾಗ
ಸಂಪಗಾಂವಿಗೆ ಸಗುಮಾಡಿ ಹೋಗಿ ಬರಬೇಕೋ ನೀನೀಗ
ಇಷ್ಟೆ ಹೇಳಿ ಬಾಳಣ್ಣ ತಾನು ಲಕೋಟಿ ಕೊಟ್ಯಾನೋ ಕೈಬಳಗ
ಮಧ್ಯಾಹ್ನ ಕಛೇರಿ ನೆಡೆದಿತ್ತೊ ಭರಪೂರ ಸಂಪಗಾಂವ್ಯಾಗ
ಟೊಣ್ಯಾ ಸುಭೇದಾರನ ಕೈಯಾಗ ಲಕೋಟಿ ಕೊಟ್ಯಾನ್ರಿ ಆಗ
ಲಕೋಟಿ ಒಡೆದು ಸುಭೇದಾರ ಕಾಗದ ಓದಿಕೊಡಾನಾಗ

ಜೋಡ ಜೋಡ ಸರಪಳಿ ತಂದು ಚಲ್ಯಾನೋ ಸಂಗೊಳ್ಯಾಗ
ಇಷ್ಟೆ ನೋಡಿ ಬಾಳಪ್ಪ ತಾನು ಹೇಳತಿದ್ದಾನೋ ಫಕೀರಗಾಗ
ತಳವಾರ ಫಕೀರ ತಮ್ಮಾ ಲಗುಮಾಡಿ ಹೋಗೋ ನೀನಿಗ
ಪಂಚರಾದ ರೈತರನ್ನೆಲ್ಲಾ ಕರೆದುಕೊಂಡು ಬಾರೋ ಚಾವಡಿ ಒಳಗ
ಪಂಚರಾದ ರೈತರನ್ನೆಲ್ಲಾ ಕರೆದುಕೊಂಡು ಬಂದಾಗ ಆಗ
ಯಾಕೋಯಾಕೋ ಬಾಳಪ್ಪಣ್ಣಾ ಕರಸಿದ ಹೇಳೋ ನಮಗ
ಇಷ್ಟೆಕೇಳಿ ಬಾಳಪ್ಪ ತಾನು ಹೇಳತಿದ್ದಾನೋ ಪಂಚರಿಗಾಗ
ಎಂಥಾ ಇಂಗ್ಲಿಷರ ದರಬಾರು ಬಂತು ರಾಜ್ಯದಮ್ಯಾಗ
ಎರಡೂ ರಕ್ತ ಮಾನ್ಯದ ಹೊಲಾ ಅಳತಿ ಮಾಡಬೇಕಪ್ಪಾ ಈಗ
ಇಷ್ಟೆ ಕೇಳಿ ಪಂಚರಮಾತು ಮುಗಿಸಿ ಎದ್ದಾನು ಮನಿಗಾಗ
ಮರುದಿವಸ ಮುಂಜಾನೆ ಎದ್ದ ಅಳತಿಮಾಡಾಕ ಬಂದಾರಾಗ
ಜೋಡ ಜೋಡ ಸರಪಳಿಲಿಂದ ಅಳತಿ ಮಾಡತಾರ ಹೊಲದಾಗ
ರಾಯಪ್ಪಣ್ಣವ ಹೊಲಾ ಅಳತಿ ಮಾಡಾಕ ಹತ್ಯಾರಾಗ
ಅಳತಿ ಮಾಡಿ ಬಾಳಪ್ಪ ತಾನು ಹೇಳುತ್ತಿದ್ದಾನೋ ರಾಯಣ್ಣಾಗ
ಎರಡು ರಕ್ತ ಮಾನ್ಯದ ಹೊಲಾ ಯಾಕ ಬೇರಪ್ಪಾರಾಯಾ ನಿನಗ
ಮೂವತ್ತೈದು ರೂಪಾಯಿ ಕೊಡಬೇಕು ನೀನು ಚಾವಡಿಯೊಳಗ
ಇಷ್ಟು ಕೇಳಿ ರಾಯಣ್ಣ ನಗುತ ಬಾಳಣ್ಣಗ
ನಮ್ಮ ಅಜ್ಜ ರೋಗಣ್ಣನವರು ಯಾರು ಕೊಟ್ಟಿಲ್ಲ ಬಾಳಣ್ಣ ನಿನಗ
ಅವರಿಬ್ಬರೂ ಹಾಕ್ಯಾಡಿಕೊಂತ ಬಂದಾರು ಮಲಪ್ರಭಾ ಹೊಳಗೆ
ಕುದುರಿ ಹಿಡಿಯಲೇ ರಾಯಾ ಜಳಕಾಮಾಡತೇನಂತಾ ನಾಗ
ಇಷ್ಟೆ ಕೇಳಿ ರಾಯಣ್ಣ ತಾನು ಕುದುರಿ ಹಿಡಕೊಂಡು ನಿಂತಾನಾಗ
ಜಳಕಾಮಾಡಿ ಕಲ್ಲಮ್ಯಾಗ ಪಂಜಿ ಬಿಟ್ಟಾ ಬಂದನಾಗ
ಕಲ್ಲಮ್ಯಾಗಿನ ಪಂಜಿ ಸೆಳದ ಕೂಡಲೆ ರಾಯಾ ನನಗ
ಇಷ್ಟೆ ಕೇಳಿ ರಾಯಪ್ಪ ತಾನು ಸಿಟ್ಟಬಾಳದನೋ ಅವನಮ್ಯಾಗ
ನಿನ್ನ ಪಂಜಿ ಸೆಳೆಯಾಕ ನಾನು ಮಡಿವಾಳಲ್ಲೋ ಬಾಳ್ಯಾ ಈಗ
ಕಡಿ ಅಂದರ ನೂರಾರು ಕಡಿಯಾಂವ ನೋಡೋ ಇನ್ನಮ್ಯಾಗ
ಇಂಥಾ ದೋಮ್ಯಾ ಕೆಲಸಾ ಹೇಳಾಕ ನಾಚಿಕೆ ಬರಲಿಲ್ಲೇನೋ ನಿನಗ
ಇಷ್ಟೆ ಕೇಳಿ ಬಾಳಪ್ಪ ತಾನು ಮತ್ತ ಹೇಳತಾನ ರಾಯಾಗಾಗ
ಎಂಥಾ ಹೆಣ್ಣ ದರಬಾರ ಬಂತೋ ರಾಜ್ಯದ ಮ್ಯಾಗ
ಇದನ್ನ ಕೇಳಿ ರಾಯಪ್ಪ ತಾನು ಸಿಟ್ಟು ಬಾಳಾದನಾಗ
ಪಂಜಿ ಎಳತಂದು ಒಗೆದು ಬಿಟ್ಟಾನು ಬಾಳ್ಯಾನ ಮಾರಿಮ್ಯಾಗ
ಇಷ್ಟೆ ನೋಡಿ ಬಾಳಣ್ಣ ತಾನು ಸಿಟ್ಟ ಬಾಳ ಆದನೋ ಆಗ

ಎಂಥಾ ಸೊಕ್ಕಿನ ಕುರುಬ ಹುಟ್ಟಿದಲೇ ಸಂಗೊಳ್ಳಾಗ
ಏನ ಅಂದ್ಯೋ ಲಂಡ ಹಾರುವ ಜಿಗದ ಕಡದೇನೋ ರುಂಡವನೀಗ
ಕಣ್ಣಿ ಕಿಸ್ತ ರಾಯಪ್ಪ ತಾನು ಕತ್ತಿ ಹಿರದಾನು ಮಳಲಿನೊಳಗ
ಬಕ್ಕನೆತ್ತಿ ಬರೆ ಮೈಲೆ ಓಡುತ್ತಿದ್ನು ಬಾಳ್ಯಾನಾಗ
ಅವರ ಸಂದು ಉಳದೀತ್ರೆಪಾ ಮಲಪ್ರಭಾ ಹೊಳಿಯಾಗ
ದಾತರಿಲ್ಲದಂತಹ ಜಗಳ ಯಾತಕಪ್ಪ ತಾಯಾ ನಿನಗ

ನಡಿ ತಳವಾರ ಫಕೀಲ ತಮ್ಮಾಲಗುಮಾಡೀಗ
ಆ ತುಡಗ ರಾಯಾನ ಹೋಗಿ ಕರೆಕಂಡ ಬಾರೀಗ
ಅಪ್ಪಪ್ಪ ರಾಯಪ್ಪಣ್ಣ ಆದಿಯೇನಪ್ಪ ಮನಿಯಾಗ
ಬಾರೋ ಬಾರೋ ಫಕೀಲ ತಮ್ಮಾ ಯಾಕ ಬಂದೀಗ
ಕುಲಕರ್ಣಿ ಬಾಳಪ್ಪನವರು ಕರಕೊಂಡ ಬಾ ಅಂದಾಗ ನಿನಗ
ಮುಂದ ಆಗುವಂಥ ವಿಚಿಯಾರ ತಿಳಿಯಲಿಲ್ಲ ರಾಯಣ್ಣಗ
ಮಳ್ಳತನಕ ಬಿದ್ದು ರಾಯ ಚಿಕ್ಕನೆ ಮೇಲಕ್ಕೆದ್ದಾನಾಗ
ಬಿರಿ ಬಿರಿ ಬಂದಾಗ ಬಂಟಾ ಸಂಗವಳ್ಳಿ ಚಾವಡ್ಯಾಗ
ಯಾಕೋ ಬಾಳಪ್ಪಣ್ಣಾ ಯಾಕ ಕರಸಿದಿ ಹೇಳೋ ನನಗ
ಇಷ್ಟೆ ಕೇಳಿ ಬಾಳಪ್ಪ ಲಕೋಟಿ ಕೊಟ್ಟಾನ ರಾಯಣ್ಣಗಾಗ
ಸಂಪಗಾಂವಿಗೆ ಚಾಕರಿ ಬಂದೈತಲೆ ತಮ್ಮಾ ನಿನಗ
ಇಷ್ಟೆ ಕೇಳಿ ಬಾಳಪ್ಪಲಕೋಟಿ ಕೋಟ್ಟಾನ ರಾಯಣ್ಣಗಾಗ
ಮಳ್ಳತನಕ ಬಿದ್ದು ರಾಯಾ ಲಕೋಟಿ ತೆಗೆದುಕೊಂಡಾಗ
ಬಿರಿಬಿರಿ ಬಂದಾಗ ಬಂಟಾ ತನ್ನ ಅರಮನಿಯೊಳಗ
ಬಿಚ್ಚಾಗತ್ತಿ ಚೆನ್ನಬಸ್ಯಾ ತಮ್ಮಾ ಜೋಕೆಪ್ಪ ಮನೀಕಡಿಗೀಗೆ
ಸಂಪಗಾಂವಿಗೆ ಚಾಕರಿ ಬಂದೈತಿ ತಮ್ಮಾ ನನಗ
ಗುಡಗೀ ಚಣ್ಣಾ ತೊಟ್ಟು ಮ್ಯಾಲೆ ಹಿಡಿಗ್ಯಾವಿ ಧರಿಸಿದ ನಾಗ
ಹಿಂಬಡಮಟಾ ಶಮನಾ ಬಿಟ್ಟು ಒತ್ತಿಸುತ್ಯಾನ ಮುಂಡಾಸಾಗ
ಕತ್ತಿ ಡಾಲು ಡುಬ್ಬಕ ಹಾಕಿ ಶ್ರೀಂಗಾರಾಗತಾನು ಮನಿ ಒಳಗ
ಸಂಜಿ ಮೂರತಾಸ ಹೊತ್ತಿಂತ ಕಚೇತ್ತೊ ಭರಪೂರಾಗ
ದವಡಿಸಿ ಹೋದಾನು ಬಂಟರ ಸಂಪಗಾವಿ ಕಚೇರ್‍ಯಾಗ
ಟೋಣ್ಯಾ ಸುಭೇದಾರ ಕೈಯಾಗ ಲಕೋಟಿ ಕೊಟ್ಟ ನಿಂತಾನಾಗ
ಲಕೋಟಿ ಒಡೆದು ಸುಭೇದಾರ ಕಾಗದಾ ಓದಿಕೊಂತಾನಾಗ
ಕಾಗದ ಓದಿ ಸುಭೇದಾರ ಕರಕರ ಹಲ್ಲ ತಿಂದಾನಾಗ
ಅವನ ವಿಚಾರ ಮಾಡಲಿಲ್ಲ ದೊಡಿಬಿಟ್ಟಾರೋ ತುರಂಗದಾಗ
ಅವನ ದೊಡಿದ ಸುದ್ದಿ ಮುಟ್ಟಿತ್ತೋ ಸಂಗೊಳ್ಳಿಗಾಗ

ಅಷ್ಟ ಹೊತ್ತಿಗೆ ವೈರಿ ಬಾಳ್ಯಾ ಫಿತೂರಿ ನಡಸ್ಯಾನೋ ಸಂಗೊಳ್ಯಾಗ
ತಳವಾರ ಫಕೀರ ತಮ್ಮಾ ಲಗುಮಾಡಿ ಬಾ ಅಂತಾನಾಗ
ಆ ತುಡುಗ ರಾಯಾನ ತಾಯಿ ಕರಕೊಂಡು ಬಾ ಚಾವಡಿ ಒಳಗ
ಇಷ್ಟ ಕೆಳಿ ಫಕಾರ ತಾನು ದವಡಸಲಿ ಬಂದಾಗ
ಅವ್ವವ್ವ ಕಂಚವ್ವ ಅದಿಯೇನವ್ವಾ ಮನಿಯಾಗ
ಬಾರೋ ಬಾರೋ ಫಕೀರ ತಮ್ಮಾ ಯಾಕ ಬಂದೀಗ
ಕುಲಕರ್ಣಿ ಬಾಳಪ್ಪನವರು ಕರಕೊಂಡು ಬಾ ಅಂದಾರು ನಿನಗ
ಮುಂದ ಆಗುವಂಥಹ ವಿಚಾರ ತಿಳಿಯಲಿಲ್ಲರಿ ಕೆಂಚ್ಚವ್ವಗ
ಬಿರಿಬಿರಿ ಬಂದಾಗ ಕೆಂಚವ್ವ ಸಂಗೊಳ್ಳಿ ಚಾವಡೀಗಾಗ
ಯಾಕೋ ಬಾಳಪ್ಪಣ್ಣಾ ಯಾಕೆ ಕರಸೀದಿ ಹೇಳೋ ನನಗ
ಸಿಟ್ಟಿಲಿಂದ ಬಾಳಪ್ಪ ಹೇಳತಾನ ಕಂಚವ್ವಗಾಗ
ನಮ್ಮ ಮೂವತ್ತೈದು ರೂಪಾಯಿ ಕೊಡಬೇಕೀಗ
ಅಷ್ಟ ಕೇಳಿ ಕಂಚವ್ವ ಹೇಳತಾವ ಬಾಳಣ್ಣಗೀಗ
ನನ್ನ ಮಗ ರಾಯಾ ಬಂದನಂತರ ರೂಪಾಯಿ ನಿನಗ
ಅಷ್ಟ ಕೇಳಿ ಬಾಳಪ್ಪ ತಾನು ಸಿಟ್ಟ ಆದಾನೊ ಆಗ
ಡೊಗ್ಗಿಸಿ ಡುಬ್ಬದಮ್ಯಾಗ ಕಲ್ಲ ಹೇಳಿಸ್ಯಾನೊ ಕಂಚವ್ವಗ
ಬೆಳ್ಳವಡಿಯ ಯಂಕನಗೌಡಾ ಸೆರಿಯ ಬಿಡಿಸ್ಯಾನ ಕೆಂಚವ್ವಗ
ಕಂಚವ್ವ ಮೆಲ್ಲಕ ಚಾವಡಿ ಇಳಿದು ಹೇಳತಿದ್ದಳೋ ಬಾಳ್ಯಾಗ
ನನ್ನ ಮಗ ರಾಯಾ ಬರಲಿ ಚಂಡಾಕೋಸತೀನಿ ನಿಂತಿ ಈಗ
ಅಷ್ಟ ಹೊತ್ತಿಗೆ ಸುಭೇದಾರ ಕೇಳಿದಾನು ರಾಯಾಗಾಗ
ಸಂಪಗಾವ್ಯಾಗ ಮೂರು ದಿವಸ ಆತಲೆ ರಾಯಾ
ನೀನು ಜಮೀನ ಕೊಟ್ಟು ಹೋಗಲೆ ನಮಗಾ
ಕೇಳಿ ರಾಯಪ್ಪ ತಾನು ಕಣ್ಣ ತುಂಬಾ ನೀರತಂದಾನಾಗ
ಈ ಊರ ಒಳಗೆ ಗುರುತಿಲ್ಲ ಅಂತಾನು ಯಾರಿಗೀಗ
ಮೇಲಗಿರಿ ರಂಗನಗೌಡ ಕಣ್ಣಚಾವಟಿ ಹೇಳ್ಯಾನಾಗ
ಅಷ್ಟ ನೋಡಿ ರಾಯಪ್ಪ ತಾನು ಹೇಳುತಿದ್ದಾನ ಸುಭೇದಾರಗ
ಮೇಲಗಿರಿ ರಂಗಗೌಡ್ರು ಜಾಮೀನ ಕೊಟ್ಟಾನ್ರಿ ಆಗ
ಸಂಜಿ ಮೂರಗಳಿಗಿರತ ಬಿಟ್ಟಾರು ಬಂಟನ್ನಾಗ
ದೀನಂತ ಕಟಂಜನ ಜಿಗಿದು ನಿಂತಾನು ರಸ್ತೆದಮ್ಯಾಗ
ಡಗ್ಗಾಲು ಮಂಡಿ ಊರಿ ಬಂಟಾ ಚೀರಲಬ್ಬಿ ಹೊಡದನಾಗ
ಸುಭೇದಾರಾ ನಿನ್ನ ಕರುಳು ಜನಿವಾರಾ ಹಾಕತೀನಿ ಕೊರಳಾಗ
ಸಂಪಗಾಂವಿ ಕಚೇರಿಗೆ ಬೆಂಕಿ ಹಚ್ಚತೀನಿ ಮಧ್ಯಾಹ್ನದಾಗ
ಅಷ್ಟೆ ಹೇಳಿ ರಾಯಪ್ಪತಾನು ಹಿಂದಕ ಕಿರಿದನಾಗ

ದವಡಾಸಿ ಬಂದಾನು ಬಂಟಾ ಸಂಗವಳ್ಳಿ ಸ್ಥಳದಾಗ
ಆರು ತಾಸುರಾತ್ರಿಗೆ ಬಂದಾನು ಊರ ಒಳಗ
ಇನ್ನ ಮಾತ್ರ ನಮ್ಮ ತಾಯಿಗೆ ಭೆಟಿವಿ ಆಗಬಾರಗೆಂದಾನಾಗ
ಇಷ್ಟೊಂದ ರೀಯಪ್ಪ ಕಣ್ಣುತುಂಬ ನೀರ ತಂದ ನಾಗ
ಬಿಚ್ಚಗತ್ತಿ ಚನಬಸಪ್ಪ ತಮ್ಮಾ ಕದಾತಗಿಯಪ್ಪಾ ಈಗ
ಅಷ್ಟೆ ಕೇಳಿ ಚನಬಸ್ಯಾ ಕದಾತಗದ ನಿಂತಾನಾಗ
ಯಾಕೋ ರಾಯಾಪ್ಪಣ್ಣಾ ಮೂರುದಿನ ತಡಾ ಆತು ನಿನಗ
ಕೇಳಿ ರಾಯಣ್ಣ ತಾನು ಹೇಳುತಿದ್ದಾನು ಚನಬಸ್ಯಾಗಾಗ
ಏನ ಹೇಳಲಿ ತಮ್ಮಾ ಮಾನ ಕಳದಾರ ಕಚೇರಿಯಾಗ
ದುಃಖದಿಂದ ಚನಬಸ್ಯಾ ತಾನು ಹೇಳದ್ದಾನು ರೈಯ್ಯೆಗ್ಗೆಗ
ವೈರಿ ಬಾಳ್ಯಾ ನಿಮ್ಮ ತಾಯಿಗೆ ಕಲ್ಲು ಹೊರಿಸ್ಯಾನೋ ಡುಬ್ಬದಮ್ಯಾಗ
ಅಷ್ಟ ಕೆಳಿ ರಾಯಪ್ಪ ಸಿಟ್ಟ ಬಾಳ ಆದಾನ್ರಿ ಬಾಳ್ಯಾನಮ್ಯಾಗ

ಗಡಗಿಯಮ್ಯಾಲ ಗಡಗಿಯನಿಟ್ಟು ಅಟ್ಟುನ್ನಲೆ ಬಾಳ್ಯಾ
ನಾ ಹೋಗತೀನಿ ನಾಡಮ್ಯಾಲ ಮಂದಿ ಕಟ್ಟತಿನೀಗ
ನೀ ಹೋದ ಬಳಿಕ ನಂದೇನತಿಯಪ್ಪ ಊರ ಒಳಗ
ಹೆಂಡತಿ ಗುಳದಾಳಿ ಹರಕೊಂಡ ಬೆನ್ನ ಹತ್ಯಾನು ಚನಬಸಣ್ಣ
ದವಡಸಿ ಬಂದಾನು ಬಂಟಾ ಬೆಳ್ಳಾವಡಿ ಸ್ಥಳಾದಾಗ
ಅವರ ಸಂದ ಉಳದೀತರೆಪ್ಪ ಬೆಳವಡಿ ಸ್ಥಳದಾಗ
ದಾತರಿಲ್ಲದಂತಹ ಜಗಳ ಯಾತಕಪ್ಪ ರಾಯಾ ನಿನಗ

ದವಡಿಸಿ ಬಂದಾನ ಬಂಟಾ ಬೆಳವಡಿ ಊರ ಒಳಗ
ಬೆಳವಡಿ ವಡ್ಡರಯಲ್ಲಾ ಮುಜರೀ ಸಲಾಮಪ್ಪ ನಿನಗ
ಬಾರೋ ಹೆಚ್ಚಿನ ಬಂಟಾ ಯಾಕ ಬಂದ್ಯೋ ಮಧ್ಯಾಹ್ನದಾಗ
ಮೊದಲಾದ ಮಜಕೂರ ಹೇಳತಿನಲೆ ತಮ್ಮಾ ನಿನಗ
ಕುಲಕರ್ಣಿ ಬಾಳ್ಯಾಗ ನನಗ ವರ್ಮ ಬೆಳದತಿ ಸಂಗೊಳ್ಯಾಗ
ನಾ ಹೋದತೀನಿ ನಾಡಮ್ಯಾಗ ಮಂದಿ ಕಟ್ಟತಿನೀಗ
ನೀ ಹೋದಬಳಿಕ ನಂದೇನೈತಅಪ್ಪಾ ಬೆಳವಡಿ ಊರಾಗ
ಡಗಲಿ ಚೊಣ್ಣಾ ತೊಟ್ಟ ಹೆಗಲಮ್ಯಾಗ ಸಲಕಿ ಹಾಕ್ಯಾನಾಗ
ಮೆಣಚ ಬಡಗಿ ಕೈಯಾಗ ಹಿಡದ ಬೆನ್ನಾ ಹತ್ಯಾನಯಲ್ಲಪ್ಪಾ
ದವಡಸಿ ಬಂದಾನು ಬಂಟಾ ಬೇವಿನಕೊಪ್ಪದ ಸ್ಥಳದಾಗ
ಬೇವಿನಕೊಪ್ಪದ ಭಾಲೆ ನಾಯಿಕ ನಮಸ್ಕಾರಪ್ಪಾ ನಿನಗ
ಬಾರೋ ಹೆಚ್ಚಿಮ ಬಂಟಾ ಯಾಕ ಬಂದ್ಯೋ ಮಧ್ಯಾಹ್ನದಾಗ

ಮಜಕೂರ ನಿನಗೆ ಹೇಳತೀನಲೆ ತಮ್ಮಾ ನಿನಗ
ಕುಲಕರ್ಣಿ ಬಾಳ್ಯಾಗ ನನಗ ಮರ್ಮ ಬೆಳದೈತಿ ಸಂಗೊಳ್ಯಾಗ
ನಾ ಹೋಗತೀನಿ ನಾಡಮ್ಯಾಗ ಸೈನ್ಯ ಕಟ್ಟತಿನೀಗ
ನೀ ಹೋದ ಬಳಿಕ ನಂದೇನೈತಪ್ಪಾ ಈ ಊರ ಒಳಗ
ನೂರಾಳ ಕಟ್ಟಿಕೊಂಡು ಅಡ್ಡ ಜಿಗಿದಾನು ರಣದೊಳಗ
ದವಡಾಸಿ ಬಂದಿತು ದಂಡು ಒಕ್ಕುಂದ ಸ್ಥಳದೊಳಗ
ಜಿಡ್ಡಿಮನಿ ಫಕೀರ ತಮ್ಮಾ ಹೊಂಡಬೇಕಲೇ ನೀನೀಗ
ಅವನ ಮಾತು ಮಿರಲಿಲ್ಲಾ ಹೊಂಟ ಬಂದಾನು ಫಕೀರಾಗ
ದವಡಾಸಿ ಬಂದು ದಂಡು ಬಲಕುಂದದ ತುರಬಂದಾಗ
ಕಾಳೀ ಭೀಮಣ್ಣಾ ನೀನು ಹೊರಡಲೇ ಬೇಕಲೆ ತಮ್ಮಾ ಈಗ
ಮಾತ ಮೀರಲಿಲ್ಲ ಭೀಮಣ್ಣ ಹೊರಟ ಬಂದಾನಾಗ
ರಣಹಲಗಿ ಹಣಮಂತನ ಕರಕೊಂಡು ಬಂದಾನಾಗ
ದವಡಸಿ ಬಂದಿತು ದಂಡು ಬತ್ತವಾಡದ ಸ್ಥಳದಾಗ
ಕಮ್ಮಾರ ಮೀರಸಾಬಾ ಹೊಂಡಬೇಕಲೇ ತಮ್ಮಾ ಈಗ
ಮಾತ ಮೀರಲಿಲ್ಲ ಹೊಂಟಬಂದಾನ ಮೀರಾ
ನೂರಾಳು ಕಮ್ಮಾರ ಕರಿದು ಬೆನ್ನ ಹತ್ಯಾನಾಗ
ದವಡಾಸಿ ಹಂದಿತು ದಂಡು ನೇಗಿನಾಳ ಸ್ಥಳದಾಗ
ಅರಮನಿಯ ಯಂಕನಗೌಡಾ ನಮಸ್ಕಾರಪ್ಪಾ ನಿನಗ
ಬಾರೋ ರಾಯಪ್ಪಣ್ಣಾ ಯಾಕ ಬಂದಿ ಮಧ್ಯಾಹ್ನದಾಗ
ಮಷ್ಟ ಕೇಳಿ ರಾಯಣ್ಣ ಹೇಳತಿದ್ದಾನಾ ಗೌಡರಿಗಾಗ
ಕಿತ್ತೂರ ದೇಶಗತಿ ಹೋಗತತಿ ಮಂದಿ ಕೊಡ್ರಪಾ ನನಗ
ಅಷ್ಟು ಕೇಳಿ ಗೌಡ್ರ ತಾವು ಹೇಳತಿದ್ದಾನ ರಾಯಣ್ಣಾಗಾಗ
ಮಂದಿ ನಮ್ಮ ಕೈಯಾಗಿಲ್ಲಾ ಅಂತಾ ಹೇಳ್ಯಾರು ಗೌಡ್ರಾಗ
ಇದನ್ನು ಕೇಳಿ ರಾಯಣ್ಣ ಸಿಟ್ಟಬಾಳ ಆದಾನ್ರಿ ಗೌಡರಿಗೆ
ದವಡಾ ಬಂದೀತ ದಂಡು ಮೂಗಬಸ್ತದ ಸ್ಥಳದಾಗ
ರಜಪೂತ ರಾಮಸಿಂಗಾ ನಮಸ್ಕಾರ್ರೆಪ್ಪಾ ನಿಮಗ
ಬಾರೋ ಹೆಚ್ಚಿನ ಬಂಟಾ ಯಾಕಬಂದ್ರಿ ರಾತ್ರಿಯೊಳಗ
ಮಜಕೂರ ಹೇಳತಿನಲೆ ತಮ್ಮಾ ನಿನಗ

ನಾ ಹೋಗತೀನಿ ನಾಡಮ್ಯಾಗ ಮಂದಿ ಕಟ್ಟತಿನೀಗ
ನೀ ಹೋದಬಳಿಕ ನಂದೇನೈತೆಪ್ಪ ಊರ ಒಳಗ
ವಾಯು ಹತ್ತಿ ಕಾಲ ಹೋಗ್ಯಾವ ಬಿಟ್ಟ ಹೋಗಬ್ಯಾಡ ಎಣ್ಣಾ ನನಗ
ಅಷ್ಟು ಹೇಳಿ ರಾಮಸಿಂಗ ಕಣ್ಣ ತುಂಬ ನೀರ ತಂದಾನಾಗ

ಬತ್ತಲಗುದರಿಗೆ ತಡಿ ಹಾಕಿ ಬೆನ್ನ ಹತ್ಯಾನೋ ರಾಯಣ್ಣಾಗ
ಅವರ ಸಂದ ಉಳದೀತ್ರೆಪ್ಪಾ ಮೂಗ ಬಸ್ತದ ಸ್ಥಳದಾಗ
ದಾತರಿಲ್ಲದಂತಹ ಜಗ ಯಾತಕಪ್ಪಾ ರಾಯಾ ನಿನಗ
ಬೆಳಗಾಂವ ಜಿಲ್ಲಾ ಪೈಕಿ.......ಒನೆಯ ಚೌಕ
ಗಟ್ಟುಳ್ಳ ಗವೀರರ ಸುದ್ದಿ ಕೇಳ್ಯಾರು ನಾಡಮ್ಯಾಗ
ಕಾಳಿ ಭೀಮಣ್ಣಾ ನೀನು ಕರ್ಣಿ ಹಿಡಿಯಲೇ ಈಗ
ನಡಕಟ್ಟಿ ಭೀಮಣ್ಣ ಕರ್ಣಿ ಹಿಡದಾನು ಆಗ
ದವಾಸಿ ಬಂದೀತು ದಂಡು ಗೋದಳ್ಳಿಯ ಸ್ಥಳದಾಗ
ಗೋದಳ್ಳಿಯ ರೈತನು ಕೇಳುತ್ತಿದ್ದಾನು ರಾಯಣ್ಣಾಗ
ಗಟ್ಟುಳ್ಳ ಗಜವೀರನ ಮನಿಯ ತೋರಿಸಿರಪ್ಪಾ ಈಗ
ಅಷ್ಟ ಕೇಳಿ ರೈತರು ಹೇಳತಿದ್ದಾರು ರಾಯಣ್ಣಗಾಗ
ಅಷ್ಟ ಕೇಳಿ ಬಂಟನ ದಂಡು ಹಿಂದಕ ತಿರುಗಿತಾಗ
ದಂಡ ಬಂದಿತು ಮುರುಕುಪ್ಪಿಯದಾರಿಯೊಳಗ
ಒಡ್ಡರ ಯಲ್ಲಣ್ಣ ಸಂಗಡ ಕರಕೊಂಡ ಹೊಂಟಾನು ರಾಯಾ ಆಗ
ಮುಂದಿನ ಮಡ್ಡಿಹತ್ತಿ ಕಡಿಮಡ್ಡಿ ಇಳಿತಿದ್ದನಾಗ
ಮೂರಕೊಳ್ಳದ ನಡುವೆ ಹುಡಕಾಕ ಹತ್ಯಾರು ಗಜವೀರನಾಗ
ಬಿದರ ಮೆಳಿಯ ಮಂಚಕೀಯ ಮೇಲೆ ಗಜವೀರ ಮಲಗಿದ್ದಾ
ಹನ್ನೆರಡ ಮಣದ ಚಿಲಕತ್ತಿನಂಗಿ ಇತ್ತ ಮೈ ಒಳಗ
ಬಾರೋ ರಾಯಪ್ಪಣ್ಣ ಗೊತ್ತ ಹಚ್ಚೇನಿ ಗಜವೀರಗೀಗ
ಅಷ್ಟೆ ಕೇಳಿ ರಾಯಣ್ಣ ತಾನು ಮುಂದಕ ಓಡಿ ಬಂದಾನಾಗ
ಮಲಗಿರುವ ಗಜವೀರನ್ನ ಕಣ್ಣ ತುಂಬ ನೋಡುತ್ತಿದ್ದನಾಗ
ಏಳೋ ಏಳೋ ಗಜವೀರ ನಮಸ್ಕಾರಪ್ಪಾ ನಿನಗ
ಕೇಳಿ ರಾಯಣ್ಣ ತಾನು ಹೇಳ್ಯಾನ ಗಜವೀರಗಾಗ
ರೋಗಣ್ಣವರ ರಾಯಾ ಹುಡುಕುತ್ತ ಬಂದಾನ ನಿಮಗ
ರೋಗಣ್ಣವರ ರಾಯಾ ಸುದ್ದಿ ಕೇಳ್ಯಾನು ಗಜವೀರಾಗ
ಧಿನಂತ ಮಂಚಿಕೆ ಜಿಗಿದು ತೆಕ್ಕಿ ಬಿದ್ದಾನು ರಾಯಣ್ಣಾಗ
ಯಾಕೋ ರಾಯಪ್ಪಣ್ಣಾ ಏನ ವ್ಯಾಗ ಒಳದೈತಿ ನಿನಗ
ಕೇಳಿ ರಾಯಣ್ಣ ಕಣ್ಣತುಂಬ ನೀರ ತಂದಾನಾಗ
ಏನ ಹೇಳಲಿ ತಮ್ಮಾ ಮಾನಕಳದಾರ ಕಛೇರಿಯಾಗ
ವೈರಿ ಬಾಳ್ಯಾ ನಮ್ಮ ತಾಯಿಗೆ ಕಲ್ಲುಹೊರಸ್ಯಾನ ಡುಬ್ಬದಮ್ಯಾಗ
ನಾ ಹೋಗತೀನಿ ನಾಡಮ್ಯಾಗ ಸೈನ್ಯ ಕಟ್ಟತಿನೀಗ
ಇದನ್ನ ಕೇಳಿ ಗಜವೀರ ಹೇಳತಿದ್ದಾನ ರಾಯಣ್ಣಗಾಗ
ಸಂಗವಳ್ಳಿ ಊರಾಗಿನ ಮಣ್ಣು ಹೊರತೀನೀಗ

ರಾತ್ರಿಯೊಳಗ ಸಂಗವಳ್ಳಿ ರೈತರನೆಲ್ಲಾ ಎಚ್ಚರಮಾಡತೀನೀಗ
ದವಾಡಸಿ ಬಂದೀತ ದಂಡ ಬಾಳೆಕುಂದದ ಕೊಳದಾಗ
ಕೊಳ್ಳಕ ಬಂದು ಕೇಳತಿದ್ದಾನ ಗಜವೀರ ಆಗ
ಇಷ್ಟ ದಂಡಿನ ಕೈಲೆ ಲಡಾಯಿ ಆಗುದುಲ್ಲೋ ಯಣ್ಣಾ ಈಗ
ಇದನ ಕೇಳಿ ರಾಯಣ್ಣ ಮಾರಿ ಕಿಂಕರ ಮಾಡ್ಯಾನಾಗ
ನನ್ನ ಬುದ್ಧಿಯುಳ್ಳ ಒಡರ ಯಲ್ಲಣ್ಣಾ ಮುಂದಕ ಬಾರೋ ಈಗ
ಗೆಟ್ಟುಳ್ಳ ಗಜವೀರ ನನಗ ನಕಲಿ ಮಾಡ್ಯಾನ ತಮ್ಮ ಈಗ
ನಾ ಹೋಗತೀನಿ ಮೊಗಲಾಯಿ ಸೀಮಿಗಿ ದಂಡ ತರತೇನೀಗ
ಅಷ್ಟೆ ಹೇಳಿ ರಾಯಪ್ಪ ತಾನು ಹಿಂದಕ ತಿರಗಿದ್ದನಾಗ
ದವಡಾಸಿ ಬಂದಾನು ಬಂಟಾ ನಂದಗಡದ ಪ್ಯಾಟಿ ಒಳಗ
ಸಾವಕಾರ ಚನಬಸಪ್ಪ ನಮಸ್ಕಾರಪ್ಪ ನಿನಗ
ಬಾರೋ ಹೆಚ್ಚಿನ ಬಂಟಾ ಯಾಕ ಬಂದ್ಯೊ ಮಧ್ಯಾಹ್ನದಾಗ
ಅಷ್ಟೇ ಕೇಳಿ ರಾಯಪ್ಪ ತಾನು ಹೇಳುತ್ತಿದಾನು ಸಾವಕಾರಗಾಗ
ದಂಡ ಬರಪೂರ ಕೂಡೇತಿ ಬಾಳೇಕುಂದದ ಕೊಳದಾಗ
ಖರ್ಚಿಗೆ ಕಡಿಮೆ ಆಗೇತಿ ಹೊನ್ನ ಕೊಡಬೇಕ್ರಪ್ಪಾ ನನಗ
ಬೇಕಾದಷ್ಟು ಹೊನ್ನ ಐತಿ ತಕ್ಕೊಂಡ ಹೋಗೋ ಬಂಟಾ ಈಗ
ಎರಡು ಕೊಡಪಾನ ಹೊನ್ನು ತಂದು ಕೊಟ್ಯಾನು ರಾಯಣ್ಣಗಾಗ

ಎರಡು ಕೊಡಪಾನ ತಂದ ಇಟ್ಯಾನು ದಂಡಿನೊಳಗ
ನಾನು ಬರುವ ತನಕ ಖರ್ಚಿಗೆ ಕೊಡತೀನಿ ನಿಮಗ|
ಮೂರ ದಿವಸ ನನ್ನದಾರಿ ನೋಡಿರಿ ಅಂತಾನು ಆಗ
ಮೂರ ದಿವಸ ಆದನಂತರ ಸತ್ತನಂತ ತಿಳಿದಾಗ
ಅವನ ದಂಡಿಗೆ ಕೈಮುಗದ ಹಿಂದಕ ತಿರುಗಿದನಾಗ
ಅವರ ಸಂದು ಉಳದೀತ್ರೆಪ್ಪಾ ಬಾಳೇಕುಂದರಿ ಸ್ಥಳದಾಗ
ದಾತರಿಲ್ಲದಂತಾ ಜಗಳಾ ಯಾಕತಪ್ಪಾ ರಾಯಾ ನಿನಗ

ಅಷ್ಟ ಹೇಳಿ ರಾಯಪ್ಪ ತಾನು ಹಿಂದಕ್ಕೆ ತಿರುಗಿದ್ದನಾಗ
ಹರಕ ಕೋರಿ ತುಂಡ ತೆಲಿಯ ಮೇಲೆ ಹೊತಕೊಂಡನಾಗ
ಮುದುಕನ ವೇಷ ಹಾಕಿ ರಾಯಾ ತಯಾರಾಗತಾನು ಕೊಳ್ಳದಾಗ
ದವಡಾಸಿ ಬಂದಾನು ಬಂಟಾ ಅಪರಾಧಿಯ ಸ್ಥಳದಾಗ
ಅಪರಾಧಿ ಸಂಗಡ ಮುಂದಿನ ಹೊಳಿ ದಾಟ್ಯಾನ ಗಳಗೊತ್ತಿನಾಗ
ಒಂದಿನಾ ಒಪ್ಪತ್ತಿನ್ಯಾಗ ಹೋಗಿ ಇಳದಾನು ಮೊಗಲಾವ್ಯಾಗ
ಆರತಾಸ ರಾತ್ರಿಗೆ ಹೋಗಿ ನಿಂತಾನು ತುರಮಂದ್ಯಾಗ

ಮೊಗಲಾಯಿ ಅಗಸಿಗೆ ತಲೆಗೊಟ್ಟು ಮಲಗಿದ್ದನಾಗ
ಮುಂಜಾನೆ ಮೂರತಾಸ ಹೊತ್ತಿಗೆ ದರಬಾರನಡದಿತ್ತ ಅರಮನ್ಯಾಗ
ತಲಿಯ ಮ್ಯಾಲಿನ ಕೋರಿ ತಗದು ಚಲ್ಯಾನ ತುರಮಂದ್ಯಾಗ
ಗುಡಗೀ ಚಣ್ಣಾ ತೊಟ್ಟು ಮುಂಗೈ ಹಿಡಿಗ್ಯಾಂವಿ ಇರಿಸಿನಾಗ
ಗಡ್ಡದಮಟಾ ಶಮನಾ ಬಿಟ್ಟು ಒತ್ತಿ ಸುತ್ಯಾನೋ ಮುಂಡಾಸದಾಗ
ಕತಿ ಢಾಲು ಕೈಯಾಗ ಹಿಡದ ತಯಾರಾದಾನು ತುರಮಂದ್ಯಾಗ
ಮುಂದಿನ ಪಾರದವಾ ಯಾರಂತ ಧೀನಂತ ಜಗಿದಿದ್ದಾನಾಗ
ಏಳು ಅಗಸಿ ಜಿಕ್ಕೊಂತ ರಾಯಣ್ಣ ಬಂದಾನ ದರಬಾರದಾಗ
ಕತ್ತಿ ಢಾಲು ಕೈಯಾಗ ಹಿಡಿದುಕೊಂಡು ನಮಸ್ಕಾರಂದಾನರಸನಿಗಿ
ಪರ ನಾಡಿನ ಮನುಷ್ಯಾ ಯಾರ ಹೇಳಲೇ ನೀ ನಮಗ
ಅಷ್ಟಕೇಳಿ ರಾಯಪ್ಪ ತಾನು ಹೇಳತಿದ್ದನು ಅರಸನಿಗಿ
ರೋಗಣ್ಣವರ ರಾಯಾ ನಿನ್ನ ಸುದ್ದಿ ಕೇಳಿ ಬಂದೇನೀಗ
ಕಿತ್ತೂರ ದೇಶಗತಿ ಸಲುವಾಗಿ ಮಂದಿ ಕೊಡಬೇಕಪ್ಪಾ ನನಗ
ಏನ ಕಸರತ್ತ ನೋಡಿ ಮಂದಿ ಕೊಡಬೇಕಪ್ಪಾ ನಿನಗ
ಇಷ್ಟೆ ಅನ್ನುದು ನಿಂತಗೊಂಡ ಕೇಳತಿದ್ದ ರಾಯಣ್ಣಾಗ
ಹಚ್ಚಿ ನೋಡ ಲಢಾಯಿ ನಿನ್ನ ಮೀರಿದ ವೈರಿಗೆ ನನಗ
ಕೇಳಿ ಮೂಗಲಾಯಿ ಅರಸ ಹೇಳಿದಾನ ರಾಯಣ್ಣಗಾಗ
ಕನಕೂರ ಭರಮ್ಯಾ ಭಾಳ ವೈರಿ ಆಗ್ಯಾನು ನನಗ
ಅವಗ ಹೆದರಿ ಏಳಸಾವಿರ ದಂಡ ಸೇರೇತಿ ವಾಡೇದಾಗ
ಅವನ ರುಂಡ ತಂದ ಕೊಟ್ಟರೆ ಕೊಡತೇನಿ ದಂಡೆಲ್ಲ ನಿನಗ
ಇಷ್ಟೆ ಅನ್ನೋದು ರಾಯಣ್ಣ ನಿಂತಕೊಂಡ ಕೇಳುತ್ತಿದ್ದನಾಗ
ಕನಕೂರ ಭರಮ್ಯಾ ಇರುವ ಸ್ಥಳ ಹೇಳ್ರೆಪ್ಪಾ ನನಗ
ಕೇಳಿ ಅರಸಾ ಆನಂದಾಗಿ ಹೇಳತಿದ್ದಾನ ರಾಯಣ್ಣಗಾಗ
ಕಲ್ಲ ಭಾವಿ ಐತಿ ತಮ್ಮಾ ತುಳಸಿಗುಡ್ಡದ ವಾರಿಯೊಳಗ
ಸಾರಿ ಬರತಾನು ಭರಮ್ಯಾ ಮೂರತಾಸ ರಾತ್ರಿಯೊಳಗ
ಹೊಂಕಳಗಂಟಿ ಹುಲಿಯಚರ್ಮಾ ಮೇಲೆ ಮುಂದ ಅವಗ
ಐನೂರು ದಂಡಿನೊಳಗ ಪಂಜು ಹಿಡಿಯತಾನು ಕೈಯೊಳಗ
ಇಷ್ಟು ಅನ್ನುದು ರಾಯಣ್ಣ ತಾನು ಧ್ಯಾನಿಸಿ ಕೇಳುತ್ತಿದ್ದಾಗ
ಸಂಜಿಗಳಿಗೆ ಹೊತ್ತ ಇರತ ಗುಡ್ಡದ ದಾರಿ ಹಿಡಿದನಾಗ
ದವಡಾಸಿ ಬಂದಾನೋ ಬಂಟಾ ತುಳಸಿಗುಡ್ಡದ ದಾರಿಯೊಳಗ
ಕಲ್ಲಭಾವಿ ಕಂಡಾನ ರಾಯಣ್ಣ ತುಳಸಿ ಗುಡ್ಡದ ದಾರಿಯೊಳಗ
ಸರಾ ಸರಾ ಇಳಿದು ರಾಯಾ ಸುಮ್ಮನೆ ಕುಂತಾನು ಭಾವಿಯೊಳಗ
ಸಾರಿ ಬಂದಾನು ಭರಮಾ ಮೂರು ತಾಸು ರಾತ್ರಿನಾಗ

ಸಾರಿ ಬರುವ ಭರಮನ ಕಣ್ಣ ತುಂಬ ನೋಡುತ್ತಿದ್ದನಾಗ
ಭಾವಿ ಸನಿಯಾಕ ಬಂದಾನ ರಾಯಣ್ಣ ಚಟ್ನಿ ಮೇಲಕ್ಕೆದ್ದನಾಗ
ಬಾರೋ ಕನಕೂರ ಭರಮಾ ಸಲಾಮಪ್ಪಾ ನಿನಗ
ಕೋಣನ ಸೊಕ್ಕಿನ ಬ್ಯಾಡಾ ತೆಗೆಯಲಿಲ್ಲ ಕಣ್ಣ ಆಗ
ಗುರುತಿಲ್ಲ ಕೂನಿಲ್ಲ ಯಾತರ ಸಲಾಮ ನನಗ
ಇಷ್ಟ ಕೇಳಿ ರಾಯಣ್ಣಗ ಬೆಂಕಿ ಬಿತ್ತೊ ಹೊಟ್ಟೆ ಒಳಗ
ರೋಗಣ್ಣವರ ರಾಯಾನೆಂಬುವ ಶಬ್ದ ಕೇಳಿ ಬಂದೇನಂತಾನಾಗ
ಕಿತ್ತೂರ ಮಲ್ಲಸರ್ಜನ ಹುಲಿಯು ಬಂದಾನು ತಮ್ಮ ಈಗ
ರೋಗಣ್ಣವರ ರಾಯಾನೆಂಬುವ ಶಬ್ದ ಕೇಳಿತ ದಂಡೆಲ್ಲಾಗ
ಚಟ್ಟನೆ ಸಿಡಿದು ಹೋಗಿ ನಿಂತಿತು ದಂಡೆಲ್ಲ ವಾರಿ ಒಳಗ
ರಾಯಣ್ಣನ ನೋಡಿ ಭರಮ್ಯಾ ನಡಗಾಕ ಹತ್ಯಾನೋ ದಂಡಿನೊಳಗ
ಸುಳ್ಳ ಮೇಲಿನ ಧೈರ್ಯಕ ಹೇಳ್ಯಾನೋ ರಾಯಣ್ಣಗಾಗ
ಒಳ್ಳೆ ಬಂದು ಕೂಡಿದಿ ಮೋಜ ಮಾಡು ಮಳಲಿನೊಳಗ
ತನ್ನ ದಂಡಿಗೆಲ್ಲಾ ಭರಮಣ್ಣ ಹೇಳತಿದ್ದಾನಪ್ಪಾ ಆಗ
ಅವನ ಸತ್ತರ ನನ್ನ ಹಿಂಬಾಲಿ ಇರುವಂತಿರಾಗ
ಇಷ್ಟ ಕೇಳಿ ಭರಮನ ದಂಡಿಗೆ ರಾಯಣ್ಣ ಹೇಳಿದನಾಗ
ದಂಡಿತೆವಗಡ ಕಾಳವ್ವನ ಆಣೆ ಆಗೈತಿ ತಮ್ಮಾನಿಮಗ
ಯಾರ ಭರವಸೆ ನಮಗ ಏನ ಹೋಗಿ ನಿಂದರ್ರಿ ಮಡ್ಡಿಮ್ಯಾಗ
ಇಷ್ಟ ಮಾತ ಮಾತಾಡುವದರೊಳಗ ಕತ್ತಿ ಹಿರಿದಾರ ಮಳಲಿನೊಳಗ
ಹಿಡ ಬ್ಯಾಡನ ಗಜ್ಜ ಅಂತ ಸೆಳೆದನಿಂತಾನ ಭರಮಣ್ಣಾಗ
ಭರಮನ ಕತ್ತಿಯ ಪೆಟ್ಟು ಢಾಲಿನ ಮೇಲಿಟ್ಟಗೊಂಡನಾಗ
ಇದು ಕುರುಬನ ಗಜ್ಜಂತ ಸೆಳೆದ ಇಂತಾನ ರಾಯಣ್ಣಾಗ
ರಾಯಣ್ಣನ ಕತ್ತಿ ಪೆಟ್ಟಿಗೆ ಢಾಲುಕೊಟ್ಯಾನು ಭರಮ್ಯಾ ಆಗ
ಹಿಡಿ ಬ್ಯಾಡನ ಗಜ್ಜ ಅಂತ ಮತ್ತ ಸೆಳೆದನಿಂತಾನಾಗ
ಧೀನಂತ ರಾಯಣ್ಣ ತಾನು ಹಿಂಬರಕಿ ಜಿಗಿದಾನಾಗ
ಏಳು ಅಕ್ಕಡಿ ನೆಲಾ ಅಳತಿ ಮಾಡಲೆ ಭರಮ್ಯಾ ಈಗ
ಹಿಡಿ ಕುರುಬನ ಗಜ್ಜಂತ ಮತ್ತ ಸೆಳೆದ ನಿಂತಾನಾಗ
ಟಣ್ಣಂತ ಭರಮಣ್ಣ ತಾನೂ ಹಿಂಬಲಕಿ ಜಿಗಿದಿದ್ದಾಗ
ಮೂರು ಅಕ್ಕಡಿ ನೆಲಾ ರಾಯಣ್ಣ ಅಳತಿ ಮಾಡಿಕೊಂಡಾನಾಗ
ಅಳತಿ ಮಾಡಿ ರಾಯಣ್ಣ ತಾನು ಕುಲುಕುಲು ನಗತಿದ್ದಾಗ
ಚಟ್ಟಿ ಜೋಕಾ ಬೀಸುವತನಕಾ ಮೋಜ ಮಾಡ್ಯಾನೋ ಮಳಲಿನೊಳಗ
ಹೇಳಿಕೇಳಿ ಕಡಿಯತಿ ಭರಮ್ಯಾ ಹುಷಾರಾಗಿರೋ ನೀನೀಗ
ಕಾಲಗೇರೆಯ ಮೇಲೆ ಸೆಳೆದು ಬಿಟ್ಯಾನು ಡೊಕ್ಕಿಯ ಮ್ಯಾಗ

ಬಕ್ಕಬಾರಲೆ ಬಿದ್ದ ಭರಮ್ಮಾ ಒದ್ದಾಡತಾನ ಮಳಲಿನೊಳಗ
ಭರಮನ ಚಂಡಿಕೆ ಹಿಡಿದು ರಾಯಣ್ಣಾ ಮೇಲಕ್ಕೆ ನೆಗವಿದಾಗ
ಅವನ ಚಂಡಕೋದ ತನ್ನ ಥಾಲಿಗೆ ಹಾಕಿಕೊಂಡಾನಾಗ
ಒಳ್ಳೆ ಒಂಟಾ ಆದ್ದರೆ ಮೀರಿ ಹೋಗತೇನಿ ತಮ್ಮಾ ಈಗ
ಮಡ್ಡಿಮ್ಯಾಲೆ ಕುಂತ ಭರಮ್ಯಾನ ದಂಡು ಹೇಳತಿತ್ತ ರಾಯಣ್ಣಾಗಾಗ
ಹಿಂಡಿನೊಳಗಿನ ಗಂಡೊಳ್ಳಿ ಕೊಯ್ದು ಚೆಲ್ಲಿದಿರಪ್ಪಾ ಈಗ
ಮುಂದ ಅನ್ನದ ಮಾರ್ಗಾ ಏನ ಹೇಳತೀರಪ್ಪಾ ನನಗ
ಕೇಳಿ ರಾಯಪ್ಪ ತಾನು ಹೇಳತಿದ್ದಾನು ದಂಡಿಗಾಗ
ಕತ್ತಿ ಮುಟ್ಟಿ ದಂಡೆಲ್ಲ ಆಣಿ ಮಾಡಬೇಕ್ರಪ್ಪಾ ಈಗ
ನಿನ್ನ ಮಾತಿನಮೇಲೆ ಎರಡನೇ ಇಲ್ಲೊಯಣ್ಣಾ ಈಗ
ಅದರಂತೆ ಕತ್ತಿ ಮುಟ್ಟಿ ಆಣಿ ಮಾಡಿತು ದಂಡೆಲ್ಲಾಗ
ಅವರ ಸಂದ ಉಳದೀತ್ರೆಪ್ಪಾ ತುಳಸಿಗುಡ್ಡದ ವಾರಿಯೊಳಗ
ದಾತರಿಲ್ಲದಂತಹ ಜಗಳ ಯಾತಕಪ್ಪ ರಾಯಾ ನಿನಗ
ಬೆಳಗಾಂವಿ ಜಿಲ್ಹಾಪೈಕಿ.......ಜಿನೆಯ ಚೌಕ
ಇಷ್ಟ ಹೇಳಿ ರಾಯಣ್ಣಾ ತಾನು ದಂಡ ಕರಕೊಂಡ ಬಂದನಾಗ
ದಂಡೆಲ್ಲ ಊರ ಒಳಗ ಒಯ್ಯಬಾರದಂತಾನಾಗ
ಮೊಗಲಾಯಿ ಸೀಮಿ ಹಿಂದ ದಂಡು ಬಿಟ್ಟ ಬಂದಾನಾಗ
ಏಳು ಅಗಸಿ ಜಿಕ್ಕೊಂತ ರಾಯಣ್ಣಾ ಬಂದನಿಂತಾನ ದರಬಾರದಾಗ
ಭರಮ್ಯಾನ ಚಂಡ ತಂದು ಅರಸನ ಮುಂದನಿಟ್ಟ್ಯಾಗ
ಭರಮ್ಯಾನ ಚಂಡ ನೋಡಿ ಅರಸಾ ಹಿರಿಹಿರಿ ಹಿಗ್ಗಿದನಾಗ
ನಾನಾಳು ರಾಜ್ಯ ನೀನಾಳಲೆ ಕಲಿ ಬಂಟಾ ನೀನೀಗ
ನಿನ್ನ ರಾಜ್ಯ ಅಳಾಕ ನಾ ಇಲ್ಲೆ ಇರಾಕ ಬಂದಿಲ್ಲೀಗ
ಇಷ್ಟ ಮಾತಾಡಿಕೊಂತ ರಾಯಣ್ಣಾ ಹೊಕ್ಕಾನ ವಾಡೇದಾಗ
ಕತ್ತಿ ಒರಿಯಂತಹ ಹುಡುಗರನಾರಿಸಿ ತಕ್ಕೊಂಡಾನಾಗ
ಮೂರು ಸಾವಿರ ದಂಡು ಕರಕೊಂಡ ಹೊಂಟಾನು ರಾಯಣ್ಣಾಗ
ನನಗ ವ್ಯಾಳೇ ಆಗತೈತಿ ಅಪ್ಪಣಿ ಕೊಡರಿ ಅರಸರಾ
ಅಷ್ಟ ಕೇಳಿ ಮೊಗಲಾವಿ ಅರಸು ಹೇಳತಿದ್ದಾನಾಗಾ
ರಾಯಣ್ಣಾ ನಿನಗ ಹೊನ್ನ ಕೊಡತೀನಿ ಸಂತೋಷಾಗ ಮನಸ್ಸಿನಾಗ
ನಿನ್ನ ಹೊನ್ನ ತಗೊಳ್ಳಾಕ ನಾ ದಾಸಲ್ಲ ಡೊಂಬಲ್ಲಾ ಈಗ
ಇಷ್ಟೆ ಕೇಳಿ ಮೊಗಲಾವಿ ಅರಸ ಅಪ್ಪಣಿ ಕೊಟ್ಟ್ಯಾನ ರಾಯಣ್ಣಾಗ
ದವಡಾಸಿ ಬಂದೀತು ದಂಡು ಗುಳೇದಗುಡ್ಡದ ವಾರಿಯೊಳಗ
ಅಲ್ಲಿಗಿ ಬಂದು ರಾಯಪ್ಪ ತಾನು ವಿಚಾರ ಮಾಡಾಕ್ಹತ್ಯಾನಾಗ
ಮುಂದ ಕಾಣು ಹಳ್ಳಿ ಶ್ರೀಮಂತರನ್ನ ಸುಲಗಿ ಮಾಡಿರೀಗ

ಹೆಣ್ಣು ಮಕ್ಕಳನ ಮುಟ್ಟಬ್ಯಾಡ್ರಿ ದೋಷ ತಟ್ಟೀತನಮಗ
ಸಿರಿ ಅರಿವಿ ಬಿಡದಂಗ ಸುಲಗಿ ಮಾಡಿರಿ ಸಿರಿವಂತರನೀಗ
ಇಷ್ಟ ಹೇಳಿ ರಾಯಣ್ಣಾ ತಾನು ಹೊಕ್ಕಾನು ಗುಳೇದಗುಡ್ಡದಾಗ
ನೋಡ ನೋಡುದರೊಳಗ ಲೂಟಿ ಮಾಡ್ಯಾರ ಊರೊಳಗ
ನಡು ರಸ್ತೆದೊಳಗ ಸುಮ್ಮನೆ ಹೊಂಟಾನು ರಾಯಣ್ಣಾಗ
ಅಲ್ಲಿ ಒಬ್ಬ ಹೆಣ್ಣ ಮಗಳು ಜೋಗುಳ ಹಾಕಹತ್ತಿದ್ದಳಾಗ
ನನ್ನ ರಾಯಣ್ಣನಂತಹ ಮಗನೆ ಸುಮ್ಮನೆ ಮಲಗಪ್ಪ ಈಗ
ಇಷ್ಟ ಅನ್ನುದು ರಾಯಣ್ಣ ಕೇಳಿ ಅಡರಾಸಿ ಬಂದನಾಗ
ಹೆದರಬೇಡ ಹಡದವ್ವ ನೀನ ಕದಾತಗಿಯವ್ವಾ ತಂಗಿ ನೀನಾ
ಕಡಿ ಮನೆಯಾನ ಎಮ್ಮಿ ತಂದ ಕಟ್ಯಾನ ಅವರ ಮನಿಯಾಗ
ನಾನಿರುತನಕ ತಾಪತ್ರ ಮಾಡಬೇಡವ್ವ ಮಗಗ
ನಿನ್ನ ಹೊಟ್ಟಿ ತಣ್ಣಗಿರಲಿ ಹೋಗಿ ಬರತೀನಿ ತಾಯಿ ಈಗ
ಇಷ್ಟಂದ ರಾಯಣ್ಣ ತಾನು ಆಕಿ ಪಾದಕ್ಕ ಎರಗಿದನಾಗ
ಒತ್ತರದಿಂದ ಬಂದು ಓಡಿ ದಂಡ ಕೂಡಿಕೊಂತಾನಾಗ
ಬಂಗಾರದ ಸಾಮಾನ ತಂದು ಅವನ ಕೈಯಾಗ ಕೊಡತಾರಾಗ
ಒತ್ತರದಿಂದ ಬಂದೀತ ದಂಡು ನಿಂಗನ ಮಠದ ದಾರಿಯೊಳಗ
ಕಡ್ಡಿ ಬಸವ್ವಾ ತಾನ ಹೊರಬಿದ್ದ ಬಂದಾಳ್ರಿ ಆಗ
ನಿಲ್ಲೋ ರಾಯಣ್ಣ ನಾನು ಆರತಿ ಮಾಡತೇನಿ ನಿನಗ
ಇಷ್ಟ ಅನ್ನುದು ರಾಯಪ್ಪ ಕಿವಿಗೊಟ್ಟು ಕೇಳತಿದ್ದನಾಗ
ಅಷ್ಟ ಕೇಳಿ ರಾಯಪ್ಪ ತಾತನು ದಂಡೆಲ್ಲ ತರುಬಿದನಾಗ
ಅವಸರದಿಂದ ಬಸವ್ವ ತಾನು ಆರತಿ ತಂದಾಳ್ರಿ ಆಗ
ತುಂಬಿದ ಆರತಿ ತಗೊಂಡು ಬಂದಾಳು ದಂಡಿನಮುಂದಾ
ಕರಿಯ ಕಂಬಳ ಮಡಚಿ ಗದ್ದಗಿ ಮಾಡಿ ಕುಂತಾನರಾಯಾ
ಕತ್ತಿ ಥಾಲು ತಗದು ರಾಯಾ ಇಟ್ಯಾನು ಗದ್ದಿಗಿ ಮ್ಯಾಗ
ಕತ್ತಿ ಗಾರುತಿ ಮಾಡಿ ಬಸವ್ವ ಕಪ್ಪ ಹಚ್ಯಾಳು ಥಾಲೀಗಿ
ಹಿಂದುಗಡೆ ಬಸವ್ವನ ಕೂಡ್ರಿಶ್ಯಾನು ಕಂಬಳಿಮ್ಯಾಗ
ತುಂಬಿದ ಆರುತಿ ತಗೊಂಡ ಬೆಳಗತದ್ದಾನು ಬಸವ್ವಗಾಗ
ಮಾರುದ್ದ ಮುತ್ತಿನದಂಡ ತಲಿಮ್ಯಾಲ ಹಾಕ್ಯಾನಾಗ
ಕರಿಯಸೀರಿ ತಂದು ಉಡಸಾಕ ಹತ್ಯಾನು ಬಸವ್ವಗಾಗ
ಬುಟ್ಟಿ ತುಂಬ ಹೊನ್ನ ತಂದ ಉಡಿಸಿ ಹಾಕಿದ್ದನಾಗ
ನಿನ್ನ ಮನಸ ಶಾಂತಿ ಇರಲಿ ಹೋಗಿ ಬರತೀನಿ ತಂಗಿ
ಇಷ್ಟೆ ಅಂದ ರಾಯಪ್ಪ ಪಾದಕ್ಕ ಎರಗೀದಾ ಮುಂದಾ
ಕಡ್ಡಿ ಬಸವ್ವನ ಕಳಸಾಗ ದಂಡು ತಿರಗೇತೆಪ್ರಾ ಆಗ

ನಿನ್ನ ಮನಿ ಯಾವದು ತಂಗಿ ತೋರಿಸಂತಾನ ರಾಯಣ್ಣಾಗ
ಇದ ಕಡಿಮನೆ ನಮ್ಮ ಮನಿ ಅಂತ ತೋರಿಸಿದಳಾಗ

ನಿಮ್ಮ ಮನಿಯಂದು ಏನೇನ ಹೋಗೆತೆವ್ವಾ ತಂಗಿ ಈಗ
ಆರುಗಾಲಿ ಸಂದುಕಾ ಬರದಾಗೈತಿ ಎಣ್ಣಾ ಈಗಿಂದೀಗ
ಆರುಗಾಲಿ ಸಂದುಕ ತುಂಬ ಹೊನ್ನ ತುಂಬ್ಯಾನ ರಾಯಣ್ಣಾಗ
ನಿನ್ನ ಆಶೀರ್ವಾದ ಇರಲಿ ಹೋಗಿ ಬರತೀನಿ ತಂಗೆವ್ವಾ ಈಗ
ಅಷ್ಟಂದು ರಾಯಣ್ಣ ತಾನು ಪಾದಕ್ಕ ಎರಗಿದ್ದಾನಾಗ
ಅವರ ಸಂದ ಉಳದೀತ್ರೆಪ್ಪಾ ಇಂಗನ ಮಠದ ಊರೊಳಗೆ
ದಾತರಿಲ್ಲದಂತಾ ಜಗಳಾ ಯಾತಕಪ್ಪಾ ರಾಯಾ ನಿನಗ

ನಿಂಗನ ಮಠದ ದಾರಿಯೊಳಗ ಮೂರುದಿವಸ ಮಿಕ್ಕಿತ್ತಾಗ
ನಮ್ಮ ರಾಯಪ್ಪ ಸತ್ತಾನಂತ ದಂಡು ತಿರಗಾಕ ಹತ್ತಿತ್ತಾಗ
ಅವನ ಬುದ್ಧಿಯುಳ್ಳ ಒಡ್ಡರ ಯಲ್ಲಾ ಸಮಾಧಾನ ಹೇಳತಾನ ದಂಡಿಗಿ
ಭೂಮಿಗಿ ಕಿವಿಯ ಹಚ್ಚಿ ಕಾಲ ಸಪ್ಪಳ ಕೇಳ್ಯಾನಾಗ
ಹೋಗ ಬ್ಯಾಡರಿ ತಮ್ಮಗಳಿರಾ ರಾಯಣ್ಣ ಬಂದ ಅಂತ ಹೇಳ್ಯಾನಾಗ
ಇಷ್ಟು ಅಂದು ಒಡ್ಡರ ಯಲ್ಲಾ ದಂಡಿನೆದುರಿಗಿ ಬಂದಾನಾಗ
ದಂಡಿನೆದುರಿಗಿ ಬಂದು ಯಲ್ಲಣ್ಣ ಕೈಮುಗಿದು ನಿಂತಾನಾಗ
ಬರುವ ಗುರ್ತಾ ಹೇಳತೀನಿ ಕಾಲಸಪ್ಪಳ ಮಾಡಬ್ಯಾಡ್ರೀಗ
ಇಷ್ಟು ಅನ್ನುದು ರಾಯಣ್ಣ ಕೇಳಿ ಕುಲುಕುಲು ನಕ್ಕಾನಾಗ
ನನ್ನ ಬುದ್ಧಿಯುಳ್ಳ ಒಡ್ಡರ ಯಲ್ಲಣ್ಣ ಮುಂದಕ ಬಾರೋ ಈಗ
ಮುಂಡಾಸ ಕೈಯಿಲೆ ತಗಿದು ಯಲ್ಲಣ್ಣಗ ಹಾಕಿದಾನಾಗ
ಬುದ್ಧಿಯುಳ್ಳ ಯಲ್ಲಣ್ಣ ನಿನಗ ಒಪ್ಪತತಿ ಮುಂಡಾಸೀಗ
ದವಡಾಸಿ ದಂಡು ಬಂತೋ ಬಾಳೇಕುಂದದ ಕೊಳ್ಳಕ್ಕಾಗ
ಬಿಚ್ಚಗತ್ತಿ ಚನಬಸ್ಯಾ ತಮ್ಮಾ ಮುಂದಕ ಬಾರೋ ಬಹಾದ್ದೂರಾ
ಮುಂಡಾಸದಾನ ಗುಂಡಗಡಗಿ ಕೊಟ್ಟಾನ ಚನಬಸವಣ್ಣಗಾ
ಅವರಿಗಿಷ್ಟು ಮಾಡುದೆಲ್ಲಾ ಗಜವೀರ ನೋಡಿಕೊಂತಾನಾ
ಚಿಟ್ಟನ ಚೀರಿ ಗಜವೀರ ಮುಂಗೈ ಕಡಕೊಂತಾನಾಗ
ಇನ್ನ ಮೂರ ದಿವಸಕ ಜಗಳದ ಮಾರಿ ಬೇಕ ಯಣ್ಣಾ ನನಗ
ಬಾಳೇಕುಂದದ ಗುಡ್ಡಾಕಿತ್ತು ಇಡತೇನಿ ಯಣ್ಣಾ ಈಗ
ಇಷ್ಟ ಕೇಳಿ ರಾಯಣ್ಣಾ ತಾನು ಸಮಾಧಾನ ಹೇಳ್ಯಾನ ಗಜವೀರಗ
ನನ್ನ ರಕ್ತ ಮಾನ್ಯದ ಹೊಲಾ ಜೋಳಾ ಒಕ್ಕಲೆ ತಮ್ಮಾ ಈಗ
ಜೋಳ ಒಕ್ಕಿ ಹಗೇಕ ಹಾಕಿ ಹೋಗನಂತಾನ ರಾಯಣ್ಣಾಗ

ಅಷ್ಟು ಹೊತ್ತಿಗೆ ಗಜವೀರಾ ಕೇಳುತ್ತಿದ್ದಾನು ರಾಯಣ್ಣಾಗ
ಯಾರ ಭರವಸಿ ಯಾರಿಗೆ ಆಣಿ ಮಾಡಬೇಕು ಕಕ್ಕೇರಿಯೊಳಗ
ಕಾಣಿ ಭೀಮಣ್ಣಾ ನೀನು ಕರ್ಣ ಹಿಡಿಯಲೇ ತಮ್ಮಾ ಈಗ
ಇದು ಮಾತು ಖರೆಐತಿ ನಡಿರಂತಾನು ರಾಯಣ್ಣಾಗ
ಒತ್ತರದಿಂದ ದಂಡು ಬಂತು ಕಕ್ಕೇರಿಯ ತುರಮಂದ್ಯಾಗ
ಬಿಷ್ಟೆವ್ವನ ಗುಡಿಮುಂದ ಸುಮ್ಮನೆ ನಿಂತಿತು ದಂಡೆಲ್ಲಾಗ
ಅಷ್ಟ ಹೊತ್ತಿಗೆ ದಂಡಿಗೆಲ್ಲಾ ಹೇಳುತ್ತಿದ್ದಾನು ಗಜವೀರಾಗ
ಯಾಕೋ ಯಾಕೋ ತಮ್ಮಗಳಿರಾ ಸುಮ್ಮನೆ ನಿಂತಿರುತಾನಾಗ
ಇಷ್ಟ ಕೇಳಿ ರಾಯಪ್ಪ ತಾನು ತಯಾರ ಮಾಡಾಕ್ಹತ್ಯಾನಾಗ
ಕರಿಯ ಕಂಬಳಿಯ ಮಡಚಿ ಗದ್ದಗಿ ಹಾಕತಿದ್ದಾ ರಾಯಣ್ಣಾಗ
ನಡಕಟ್ಟಿ ರಾಯನ ದಂಡ ತಯ್ಯಾರಾದೀತು ಗುಡಿಯೊಳಗ
ಕತ್ತಿ ಮುಟ್ಟಿ ರಾಯಣ್ಣನ ದಂಡು ಆಣಿ ಮಾಡಾಕ ಹತ್ತಿತಾಗ
ನಿನ್ನ ಮ್ಯಾಲ ಎಳ್ಳಷ್ಟು ಎರಡಿಲ್ಲೊ ಗಜವೀರಾ ನಾನೀಗ

ಹಂಗ ಕತ್ತಿ ಮುಟ್ಟಿ ಆಣಿ ಮಾಡಿತು ದಂಡೆಲ್ಲಾಗ
ಹಿಂದಿನಿಂದ ಗಜವೀರ ತಾನು ಆಣಿ ಮಾಡುತ್ತಿದ್ದನಾಗ
ಇದರಾಗ ಫಿತೂರಿ ಮಾಡಿದವನ ಗುದ್ದಿ ಕೊಲ್ತೇನಿ ನೆತ್ತಿಮ್ಯಾಗ
ಇದರಂತೆ ಕತ್ತಿ ಮುಟ್ಟಿ ಆಣಿ ಮಾಡತಾನ ಗಜವೀರಾಗ
ಅವರ ಸಂದ ಉಳದೀತ್ರೆಪ್ಪಾ ಕಕ್ಕೇರಿಯ ತುರಮಂದ್ಯಾಗ
ದಾತರಿಲ್ಲದಂತಾ ಜಗಳಾ ಯಾತಕಪ್ಪಾ ರಾಯಾ ನಿನಗ

ಅಷ್ಟೆಮಾಡಿ ರಾಯಣ್ಣ ತಾನು ದಂಡು ಕರಕೊಡ ಬಂದಾನಾಗ
ತೀವ್ರದಿಂದ ಬಂದೀತ ದಂಡು ಬಾಳೇಕುಂದದ ಕೊಳದಾಗ
ಬಾಳೇಕುಂದದ ಕೊಳ್ಳಕ ಬಂದು ಹೇಳತಿದ್ದಾನ ರಾಯಣ್ಣಾಗ
ನನ್ನ ಬುದ್ಧಿಯುಳ್ಳ ಯಲ್ಲಣ್ಣ ಹುಷಾರಿತಪ್ಪಾ ದಂಡಿನೊಳಗ
ಮಂಗಳವಾರ ಮಧ್ಯಾಹ್ನಕ್ಕೆ ದಂಡ ಕರಕೊಂಡ ಬಾರೋ
ಅಷ್ಟು ದಂಡಿಗೆ ಕಣ್ಣ ಹಬ್ಬ ಮಾಡಸ್ತೇನೆ ಅಂತಾನೋ
ದಂಡಿಗೆ ಕೈ ಮುಗಿದ ಹಿಂದಕ ರಾಯಣ್ಣ ತಿರಗಿದ್ದನಾಗ
ದವಡಾಸಿ ಬಂದಾನು ಬಂಟಾ ಸಂಗವಳ್ಳಿ ಸ್ಥಳದಾಗ
ತಾನು ಕೂಡ್ರುವ ಕಟ್ಟಿ ನೋಡಿ ಕಣ್ಣ ತುಂಬ ನೀರತಂದಾನೊ
ತಳವಾರ ಫಕೀರ ತಮ್ಮಾ ತೀವ್ರದಿಂದ ಬಾರೋ
ಬಾಳ್ಯಾನ ಮೂವತ್ತೈದ ರೂಪಾಯಿ ಕೊಡತೇನಿ ಚಾವಡಿಯೊಳಗ
ಕುಲಕರ್ಣಿ ಬಾಳ್ಯಾನ ಕರಕೊಂಡ ಬಾರೋ ಚಾವಡಿಯೊಳಗ

ಇಷ್ಟೇ ಕೇಳಿ ಫಕೀರ ತಾನು ಊರ ಒಳಗ ಹೊಕ್ಕನಾಗ
ಅಪ್ಪಪ್ಪ ಬಾಳಪ್ಪನವರ ಅದಿರೇನ್ರಪ್ಪಾ ಮನಿಯಾಗ
ಬಾರೋ ಫಕೀರಾ ಯಾಕ ಕರಿಯಾಕ ಬಂದ್ಯೊ ನನಗ
ಫಕೀರ ಕೇಳಿ ಹೇಳುತ್ತಿದ್ದಾನು ಬಾಳಣ್ಣಗಾಗ
ಕಿತ್ತೂರ ಮಲ್ಲಸರ್ಜನ ಹುಲಿಯು ಕುಂತೈತಿ ಚಾವಡಿಯೊಳಗ
ನಿಮ್ಮನ್ನ ಕಂಡಗಳಿಗೆ ಮುರಕೊಂಡ ತಿಂತೈತೀಗ
ನಿಮ್ಮ ಮೂವತ್ತೈದ ರೂಪಾಯಿ ಇಟಕೊಂಡು ಕುಂತಾನೀಗ
ಇದನ್ನು ಕೇಳಿ ಬಾಳಪ್ಪ ತಾ ಉಚ್ಚಿಹೋದಾ ದೋತರದಾಗ
ಸುಳ್ಳ ಮನಿಯಾ ಇಲ್ಲಂತ ಹೇಳೋ ಹೋಗೋ ನೀನೀಗ
ಫಕೀರ ತಾನು ಓಡಿ ಬಂದಾನ ಚಾವಡೀಗಿ
ಅಂಜಿ ಹೇಳಲ್ಯೊ ಅಳುಕಿ ಹೇಳಲ್ಯೋ ಯಣ್ಣಾ ನಿನಗ
ಅಂಜ ಬ್ಯಾಡಲೇ ತಮ್ಮಾ ನೆಟ್ಟಗ ಹೇಳು ಅಂತಾನಾಗ
ಅಂಜಿ ನಡುಗಿ ಫಕೀರಾ ಖರೇ ಮಾತ ಹೇಳತಿದ್ದಾನಾಗ
ಮನಿಯಾಗ ಅದಾನು ಬಾಳ್ಯಾ ಇಲ್ಲಂತ ಹೇಳಂದಾನು ನನಗ
ಇಷ್ಟ ಕೇಳಿ ರಾಯಣ್ಣ ಸುಮ್ಮನಾದನು ಚಾವಡಿಯೊಳಗ
ಬಿರಿಬಿರಿ ಬಂದಾನು ಬಂಟಾ ತನ್ನ ಅರಮನಿಗಿ ಆಗ
ಮಗನ ಮಾರಿ ಕಾಣದ ತಾಯಿ ಆರತಿಂಗಳಾಗಿತ್ತಾಗ
ಯಾವ್ವಾ ಕೆಂಚವ್ವ ತಾಯಿ ಕದಾತಗಿಯವ್ವಾ ರಾಯಣ್ಣಗ
ಮಗನ ದನಿಯ ಕೇಳಿ ಕೆಂಚವ್ವ ಕದಾತಗದಾಳಾಗ
ಅವಸರದಿಂದ ಚಕಮಕಿ ಕಡಿದು ದೀಪಾ ಹಚ್ಯಾಳ್ರೆಪ್ಪಾ ಆಗ

ಯಾಕೋ ರಾಯಣ್ಣ ಇಷ್ಟ ದಿನಾ ತಡಾ ಯಾಕೋ ನಿನಗ
ಇಷ್ಟ ಕೇಳಿ ರಾಯಣ್ಣ ತಾನು ಕಣ್ಣೀಗಿ ನೀರತಂದಾನಾಗ
ಸುಳ್ಳ ತಾಯಿಗೆ ಸಮಾಧಾನ ಹೇಳತಿದ್ದಾನು ರಾಯಣ್ಣಾಗ
ಹಸಿವು ಬಹಳ ಆಗೀತಿ ಅಡಗಿ ಮಾಡ ಅಂತಾನಾಗ
ಇಷ್ಟ ಹೊತ್ತಿಗಿ ವೈರಿ ಬಾಳ್ಯಾ ಪಿತೂರಿ ನಡಿಸ್ಯಾನ ಸಂಗೋಳ್ಯಾಗ
ಅವರ ಸಂದ ಉಳದೀತ್ರೆಪ್ಪಾ ಸಂಗೊಳ್ಳಿಯ ಸ್ಥಳದಾಗ
ದಾತರಿಲ್ಲದಂತಾ ಜಗಳಾ ಯಾತಕಪ್ಪಾ ರಾಯಾ ನಿನಗ

ತಳವಾರ ಫಕೀರ ಲಗುಮಾಡಿ ಬಾರೋ ನೀನೀಗ
ತುಡಗ ರಾಯಾ ಒಬ್ಬನೇ ಬಂದು ಸಿಕ್ಯಾನ ಸಂಗೋಳ್ಯಾಗ
ಸಂಪಗಾಂವಿಗೆ ಲಗುಮಾಡಿ ಹೋಗಿ ಬರಬೇಕೀಗ
ಹೇಳಿ ಬಾಳಣ್ಣ ತಾನು ಲಗುಮಾಡಿ ಲಕೋಟಿ ಕೊಟ್ಟಾನ ಕೈಯಾಗ

ಕಟ್ಟಿ ಒಡೆದು ಸುಭೇದಾರ ಕಾಗದ ನೋಡಿಕೊಂತಾನಾಗ
ಕಾಗದನೋಡಿ ಸುಭೇದಾರ ಮುಂಗೈ ಕಡಕೊಂತಾನಾಗ
ಏಳ ಮಂದಿ ಬಾರಿನ್ನವರ್ನ ಕೊಟ್ಟು ಕಳಿಸ್ಯಾನ ಸುಭೇದಾರಾಗ
ತೀವ್ರದಿಂದ ಕುಲಕರ್ಣಿ ಮನೆಗೆ ಬಂದಾರವರಾ
ಹಲವು ತರದ ಅಡಿಗೆ ಮಾಡಿ ಉಣಿಸ್ಯಾನ ಅವರೀಗೆ
ಸಂಜಿ ತಾಸೊತ್ತ ಇತ್ತಂತ ಊರಾಗ ತಿರುಗ್ಯಾಡತಿದ್ದರಾಗ
ಊರಾನ ಗಂಡ ಹೆಣ್ಣ ಜನಾ ಮಾತಾಡತ್ತಿದ್ದರಾಗ
ರಾಯಪ್ಪಣ್ಣನ ಹೊಡಿಯಲಾಕ ಬಂದಾರು ಈ ಜನಾ
ಏಳ ಮಂದಿ ಬಾರಿನವರು ಕೂಡಿ ಕೇಳತ್ತಿದ್ದರ ಜನರನ್ನಾ
ಆ ತುಡುಗ ರಾಯಾನ ಹೊಲದ ದಾರಿ ತೋರಿಸರಿ ನಮಗಾ
ದ್ಯಾವಲಾರ್ಪದ ಮಾರ್ಗದೊಳು ಕಳ್ಳಿ ಬೆಳೆದೈತಿ ನೋಡಾ
ಇದೆ ಈಗ ಸಂಜಿ ಕಡೆ ಹೊಲಕ ಬರತಾನಂತಾರಾಗ
ಇಷ್ಟೇ ಕೇಳಿ ಏಳು ಮಂದಿ ದವಡಾಸಿ ಬಂದಿದ್ದರಾಗ
ತೀವ್ರದಿಂದಲಿ ಬಂದಾರವರು ದ್ಯಾವಲಾರ್ಪದ ಮಾರ್ಗದಾಗ
ನಡಕಳ್ಳಿಗೆ ಬಂದು ಅವರು ಸುಮ್ಮನೆ ಕುಂತಾರಾಗ
ಅಷ್ಟೊತ್ತಿಗೆ ಕೆಂಚವ್ವ ತಾಯಿ ಅಡಿಗೆ ತೈಯಾರ ಮಾಡ್ಯಾಳಾಗ
ಅಡಗಿ ಆಗೇತಿ ರಾಯಣ್ಣ ಊಟ ಮಾಡಬಾ ಅಂತಾಳಾಗ
ಅಣ್ಣ ಸಿದ್ದಪ್ಪ ಬಂದರ ಊಟ ಮಾಡತೀಸಿ ಹಡದವ್ವಾ
ಕೇಳಿ ಕೆಂಚವ್ವ ತಾನು ಹೇಳತಿದ್ದಾಳು ರಾಯಣ್ಣಗಾ
ಅಣ್ಣ ಸಿದ್ದಪ್ಪ ಆದಾನು ರಕ್ತ ಮಾನ್ಯದ ಹೊಲದಾಗ
ಬುಟ್ಟಿತುಂಬ ಹಡದವ್ವ ಹೊಲಕ ಹೋಗತೇನಂತಾನಾಗ
ಅವಸರದಿಂದ ಕೆಂಚವ್ವ ಬುಟ್ಟಿ ತುಂಬಿ ಕೊಟ್ಯಾಳಾಗ
ಸಂಜಿ ಗಳಿಗಿ ಹೊತ್ತಿತರ ಹೊಲದ ದಾರಿ ಹಿಡಿದನಾಗ
ತುರ್ತದಿಂದ ಬಂದಾನ ಬಂಟಾ ದ್ಯಾವಲಾರ್ಪದ ಮಾರ್ಗದಾಗ
ಅಲ್ಲಿ ಪಾಂಡವರ ದೇವರನ್ನ ನೋಡಿದಾನಾಗ
ಬುಟ್ಟಿ ಇಳಸಿ ರಾಯಣ್ಣ ಬೇಡಿಕೊಳ್ಳಾಕತ್ಯಾನಾಗ
ನಮ್ಮ ರೋಗಪ್ಪರನವರ ಹಯಾ ಇರಬೇಕ ನನ್ನ ಮ್ಯಾಗ
ಅದರಂತೆ ರಾಯಾ ಬೇಡಿಕೊಂತಾನ ಪಾಂಡವರಿಗಾಗ
ದ್ಯಾವಲಾರ್ಪದ ಮಾರ್ಗ ಬಿಟ್ಟು ಅಡ್ಡಮಾರ್ಗ ಹಿಡಿದನಾಗ
ತುರ್ತದಿಂದ ಬಂದಾನ ರಾಯಣ್ಣ ರಕ್ತಮಾನ್ಯದ ಹೊಲದಾಗ
ರಕ್ತ ಮಾನ್ಯದ ಹೊಲಕ ಬಂದು ಬುಟ್ಟಿ ಇಳಸ್ಯಾನು ಗುಡಸಲದಾಗ
ಅಣ್ಣ ಸಿದ್ದಪ್ಪನ ಕರಕೊಂಡ ಊಟ ಮಾಡತಾನ ಕಣದಾಗ
ಊಟ ಮಾಡಿ ರಾಯಣ್ಣ ತಾನು ಹೇಳತಿದ್ದಾನ ಸಿದ್ದಣ್ಣಗಾಗ

ದಂಡ ಬಹಳ ಕೊಡೇತಿ ಬಾಳೇಕುಂದದ ಕೊಳದಾಗ
ಸಣ್ಣ ದೊಡ್ಡ ಮಂದಿನೆಲ್ಲಾ ಹಚ್ಚಪ್ಪಾ ಯಣ್ಣ ಕೆಲಸಕ್ಕಾ
ಮಂದಿ ಹಚ್ಚಿ ತೆನೆ ಮುರಸಿ ಮಾಡಸಪ್ಪಾ ರಾಸೀನ
ಹೆಣ್ಣ ಮಕ್ಕಳ ಬಂದರ ಮರೆಯದೆ ಕೊಡು ಜೋಡ ಕೂಲಿನಾ
ಬೇಕಾದಷ್ಟು ಗೋದಿ ಬ್ಯಾಳಿ ತಂದಾ ಮಾಡಪ್ಪ ಕಣಾ ಹಬ್ಬಾನಾ
ಇಳವು
ಚಿಟ್ಟಾನಿಯಂತಹ ಗಜವೀರ ಇರತಾನ ದಂಡಿನ್ಯಾಗ
ಅಂವಗ ತಿನ್ನಾಕ ಕೋಡೋ ಬುಂದೇ ಬಾಸುರಿನಾ
ಬಿಚ್ಚಗತ್ತಿ ಚನಬಸವಣ್ಣನ ಫಳಾರ ಮರತಿಯೋ
ಅಂವಗ ಫಳಾರ ತಂದ ಕೋಡೋ ಬೇಡಿದ ಉತ್ತತ್ತಿನ
ಅವರ ಸಂದ ಉಳದೀತ್ರೆಪ್ಪಾ ರಕ್ತಮಾನ್ಯದ ಹೊಲದಾಗ
ದಾತರಿಲ್ಲಂತಾ ಜಗಳಾ ಯಾತಕಪ್ಪಾ ರಾಯಾ ನಿನಗ

ಅಷ್ಟ ಕೇಳಿ ರಾಯಣ್ಣ ತಾನು ಹಿಂದಕ್ಕೆ ತಿರಗಿದ್ದಾನಾಗ
ತುರ್ತದಿಂದ ಬಂದಾನು ಬಂಟಾ ಹುಲಗಲಿ ಹಳ್ಳದ ದಾರಿಯೊಳಗ
ಹವಣಿ ಕೊಡಾ ತಕ್ಕೊಂಡು ಸಿದ್ದಪ್ಪಾ ಒರತಿ ನೀರಿಗೆ ಬಂದಾನಾಗ
ಒರತಿಯೊಳಗೆ ಕೊಡಾ ಇಟ್ಟ ಅಡರಾಸಿ ಓಡಿ ಬಂದಾನಾಗ
ಓಡಿ ಬಂದು ತಮ್ಮನ ಮುಂದೆ ಹೇಳತಿದ್ದಾನ ಸಿದ್ದಣ್ಣಾಗ
ಯಾರೋ ಏಳಮಂದಿ ಜನರು ಕಳ್ಳಾಗ ಕುಂತಾರೀಗ
ಇಷ್ಟ ಕೇಳಿ ರಾಯಣ್ಣಸಿಟ್ಟ ಭಾಳ ಆದಾನೋ ತಾನಾ
ಯಾರ ಯಾಕ ಆಗ ಒಲ್ಲರು ಕಣಕ ಹೋಗಪ್ಪ ನೀನಾ
ಅಣ್ಣಗ ಹೇಳಿ ರಾಯಣ್ಣ ಹಿಂದಕ್ಕೆ ತಿರುಗಿದನುತಾನಾ
ತೀವ್ರದಿಂದ ಬಂದಾನು ಬಂಟಾ ಸಂಗವಳ್ಳಿ ಸುಡಗಾಡಕ್ಕಾ
ಹರಕ ಕೋರಿ ತಕ್ಕೊಂಡು ತಲಿಮ್ಯಾಲ ಸುತಕೊಂಡನಾಗ
ಮುದುಕರ ವೇಷ ಹಾಕಿಕೊಂಡು ರಾಯಾ ಸಿಂಗಾರಾದಾನ ಸುಡಗಾಡದಾಗ
ಕಳ್ಳಿಯ ಸಮೀಪ ಬಂದು ಬಂಟಾ ಬಲಬಾರೆ ನೆಳ್ಳತ್ತಿದ್ದನಾಗ
ಅವರ ಸನಿಯಾಕ ಬಂದು ಬಂಟಾ ಬರಲಾರೆ ಕೆಮ್ಮುತ್ತಿದ್ದನಾಗ
ಆಹಾ ಅಂತ ಏಳು ಮಂದಿ ಸರಾಬರಾ ಕತ್ತಿ ಹಿರದಾಗ
ಎಲಾ ಬ್ಯಾಡ ಸೋಳೇಮಗನ ಎಷ್ಟ ಹೆದರತಿಲೆ ನಮಗ
ಆ ತಂಡಗ ರಾಯಾ ಬಂದನಂತ ಕಡಿಯತಿದ್ವಿ ನಾವು ನಿನಗ
ಆ ಹುಡುಗ ರಾಯಾ ಬರುವ ಸುದ್ದಿ ತಿಳಸ್ತಿ ಏನೋ ನಮಗ
ರೋಖ ಐದನೂರು ರೂಪಾಯಿ ಕೊಡತೀವ ನಿನಗ ಈಗ
ಇಷ್ಟ ಕೇಳಿ ರಾಯಪ್ಪ ತಾನು ಹೇಳುತಿದ್ದಾನ ರಾಜೇಸಾಹೇಬಗ

ಆ ಹುಡುಗ ರಾಯಾ ಇರುವುದು ನನಗೇನ ಗೊತ್ತಪ್ಪ ಈಗ
ನನಗ ತಲೆಬಾಗೇತಿ ಬತ್ತಿ ಕೊಡರೆಂತಾನಾಗ
ಏಳಮಂದಿ ಸೇದಿದ ಕರಬತ್ತಿ ಕೈಯಾರ ಕೊಟ್ಟರಾಗ
ಸುಳ್ಳು ಸೇದಿದಂಗ ಮಾಡಿ ಇಟ್ಟ ಬಿಟ್ಟಾನೋ ಕಲ್ಲಿನ ಮ್ಯಾಗ
ಕಲ್ಲಿನ ಮ್ಯಾಲೆ ಗುರ್ತಾಮಾಡಿ ಇಟ್ಟ ಮೆಲಕ್ಕೆದ್ದಾನಾಗ
ರಾಜೇಸಾಹೇಬ ಬಂದ ಮತ್ತ ಕೇಳತಾನ ರಾಯಣ್ಣಾಗ
ಆ ಹುಡುಗ ರಾಯಾ ಸಿಕ್ಕರ ಈಗ ಕಡಿತೀವಿ ಗೆಬ್ಬಿಯಮ್ಯಾಗ
ಇಷ್ಟ ಕೇಳಿ ರಾಯಪ್ಪ ತಾನು ಮತ್ತ ಕೇಳತೀನಿ ನಿಮಗ
ಯಾಕ ಆಗವಲ್ಲದರೆಪ್ಪ ತಿರುಗಿ ಬಂದ ಹೇಳತೀನಿ ನಿಮಗ
ಕೆಮ್ಮಿಕೊಂತ ನೆಳ್ಳಿಕೊಂತ ಮುಂದಕ ಬಂದಾನಾಗ
ಒಂದ ಬಾಂದಿನ ಸರಿಗೈ ಬಂದು ಹಿಂದಕ ತಿರಿಗಿದ್ದನಾಗ
ತಲಿಮ್ಯಾಲಿನ ಕೊರಿ ತೆಗೆದು ಚೆಲ್ಲಿ ಬಿಟ್ಟಾನು ರಾಯಾಣ್ಣಾಗ
ಹೊಳಿಯ ಒಡಲದೊಳಗೆ ರಾಯಾ ಜಳಕಾ ಮಾಡಾಕತ್ಯಾನಾಗ
ಗುಡಗಿ ಚೆಣ್ಣ ತೊಟ್ಟು ಮ್ಯಾಲೆ ಹಿಡಿಗಾವಿ ಧರಸಿದ್ದನಾಗ
ಹಡ್ಡದ ಮಟಾ ಶಮನಾ ಬಿಟ್ಟು ಒತ್ತಿ ಸುತ್ಯಾನ ಮುಂಡಾಸಾಗ
ಕತ್ತಿ ಢಾಲು ಕೈಯಾರ ಹಿಡಿದು ತಯಾರಾಗತಾನು ಹೊಳಿಯಾಗ
ಕಳ್ಳಿ ಸಿನಿಯಾಕ ಬಂದು ರಾಯಾ ಬಲುಬಾರಾ ಜಿಗದಿದ್ದನಾಗ
ಮುಂಬರುವ ಬಂಟಾ ಯಾಂವ ಅದಿರಿ ಬರ್ರಿ ಅಂತಾನಾಗ
ಇಷ್ಟ ಕೇಳಿ ಏಳು ಮಂದಿ ಮೇಲಕ್ಕೆದ್ದಾರು ಆಗಿಂದಾಗ
ಮೇಲಕ್ಕೇಳುವದರೊಳಗ ಆರ ಮಂದಿನ ಕಡದನಾಗ
ಯಾಕೋ ರಾಜೇಸಾಬ ಬಲುಬಾರೆ ಬೈತಿದ್ದಿ ನನಗ
ಇಷ್ಟ ಕೇಳಿ ರಾಜೇಸಾಹೇಬ ಹೇಳಿಕೊಂತಾನು ರಾಯಣ್ಣಾಗಾಗ
ದೇವರಾಣಿ ದೊಡ್ಡಪ್ಪಗ ನಿನಗ ಭೇದ ಇಲ್ಲಂತಾನಾಗ
ಕೇಳಿ ರಾಯಣ್ಣಾ ತಾನು ಬತ್ತೀ ಇಟ್ಟೇನಿ ನೋಡಿಗ
ಬತ್ತಿ ನೋಡಿದ ಬಳಿಕ ಬಾಯಿ ಹೋತೋ ಸಾಬಂದಾಗ
ಇವಾರು ಹೆಣಾ ಹೊತ್ತ ಕೊಂಡ ಹೋಗಬೇಕ ನೀನೀಗ
ಇವಾರು ಹೆಣಾ ಹ್ಯಾಂಗ ನೆಗಿವ್ಯಾವ ಯಣ್ಣಾ ನನಗ

ಅಂಜಿ ನಡುಗಿ ರಾಜೇಸಾಹೇಬ ಹೇತಕೊಂಡಾನ ಕಚ್ಚಾಗ
ವೈರಿ ಬಾಳ್ಯಾನ ಮನಿಗಿ ಹೋಗಿ ಸುದ್ದಿ ಹೇಳಲೆ ಈಗ
ಮಂಗಳವಾರ ಮಧ್ಯಾಹ್ನ ಬರತೀನ್ನಂತ್ಹೇಳ ಬಾಳ್ಯಾಗ
ಸುದ್ದಿ ಹೇಳಾಕ ನಿನ್ನೊಬ್ಬನ ಜೀವಂತ ಬಿಡತೀನೀಗ
ಅವರ ಸಂದ ಉಳಿದೀತ್ರೆಪ್ಪ ದ್ಯಾವಲಾರ್ಪಣಿದ ಮಾರ್ಗದಾಗ

ದಾತರಿಲ್ಲದಂತಹ ಜಗಳಕಾ ಯಾತಕಪ್ಪ ರಾಯಾ ನಿನಗ

ಇಷ್ಟ ಹೇಳಿ ರಾಯಪ್ಪ ಹಿಂದಕ ತಿರುಗಿದನಾಗ
ಅಷ್ಟ ಹೊತ್ತಿಗೆ ಯಲ್ಲಣ್ಣ ದಂಡ ಕರಕೊಂಡ ಬಂದಾನಾಗ
ದಂಡಿನೆದುರಿಗಿ ಹೋಗಿ ರಾಯಾ ಕೈಮುಗಿದ ನಿಂತಾನಾಗ
ನಾವು ಬೈಲಿಗೆ ಬೀಳತೀವಿ ಕಾಲ ಸಪ್ಪಳ ಮಾಡಬ್ಯಾಡ್ರೀಗ
ಒತ್ತರದಿಂದ ಬಂದೀತು ದಂಡು ರಕ್ತಮಾನ್ಯದ ಹೊಲದಾಗ
ಗಟ್ಟಿಯುಳ್ಳ ಗಜವೀರಗ ಊಟಕ್ಕ ಕೊಟ್ಟಾ ರಾಯಣ್ಣಾಗ
ಇಂಬಾಗಿ ಮಡ್ಡಿಯ ಮ್ಯಾಲ ಕುಂತ ಊಟ ಮಾಡೀಗ
ಬಿಚ್ಚಗತ್ತಿ ಚನಬಸವಣ್ಣ ಫರಾಳ ಮಾಡೋ ಗುಡಿಸಿಲದಾಗ
ಅಷ್ಟ ಹೊತ್ತಿಗೆ ಸಂಗೊಳ್ಳಾಗ ಫಿತೂರಿ ನಡಿಸ್ಯಾನೋ ಬಾಳ್ಯಾ
ಮ್ಯಾದಾರ ಪರಶ್ಯಾನ ಮಗನ ಹುರುಪು ಬಹಳಿತ್ತೊ ಊರಾಗ
ಕುಲಕರ್ಣಿ ಬಾಳ್ಯಾನ ಕಡೆ ವೀಳೆ ಹಿಡಿದಿದ್ದನಾಗ
ರಾಯಾನ ಚಂದ ತರತೇನಂತ ವಚನ ಕೊಟ್ಟಾನ ಬಾಳ್ಯಾಗ
ರೋಖ ಐದನೂರ ರೂಪಾಯಿ ತಕ್ಕೊಂಡಾನೋ ಕೈಯೊಳಗ
ಕತ್ತಿ ಢಾಲು ಕೈಲಿ ಹಿಡಿದು ಸಿಂಗಾರಾಗತಾನ ಮನಿಯೊಳಗ
ಒತ್ತರದಿಂದ ಬಂದಾನ ಹಣಮಂತ ರಕ್ತಮಾನ್ಯದ ಕಣಕಾಗ
ಅಷ್ಟೊತ್ತಿಗೆ ರಾಯಾನ ದಂಡ ಊಟಕ್ಕ ಕುಂತಿತ್ತ ಕಣದಾಗ
ಅಷ್ಟ ಮಂದಿಗೆ ನೀಡಕೊಂತ ಒಬ್ಬನೇ ಉಲಿದಾನ ರಾಯಣ್ಣಾಗ
ಕಣಕಿ ಇಕ್ಕಲ ಹತ್ತಿರ ರಾಯಾ ಸುಮ್ಮನೆ ಕುಂತಿದ್ದಾಗ
ತೊಗರಿ ಸಾಲಿನೊಳಗ ಡೊಗ್ಗಿ ಬರತಿದ್ದ ಹನಮಂತನಾಗ
ತೊಗರಿ ಸಾಲ ಅಗಳಾಡುದು ರಾಯಣ್ಣ ಕಣ್ಮುಟ್ಟಿ ನೋಡಿದನಾಗ
ಸನಿಯಾಕ ಬಂದಗಳಿಗ್ಗೆ ರಾಯಾ ಜುಟ್ಟಿಲ ಹಿಡದಾನ ಹಣಮ್ಯಂದಾಗ
ಜುಟ್ಟಿಲ ಹಿಡಿದ ಗಳಿಗ್ಗೆ ಹನಮ್ಯಾ ಹೇಳತಿದ್ದಾನ ರಾಯಣ್ಣಾಗ
ಹಣಮಂತನ ಹರಕಿ ಕೊಡಲು ಹಿಡಿಯಬ್ಯಾಡೋ ಎಣ್ಣಾ ಈಗ
ನಿನ್ನ ಮಗನಾಗಿ ಇರತೀನಿ ಬಿಟ್ಟ ಬಿಡೋ ರಾಯಣ್ಣಾ ನನಗ
ಇವರು ಗದ್ದಲ ಮಾಡುವದೆಲ್ಲಾ ಗಜವೀರಾ ಕೇಳ್ಯಾನ್ರೀಗ
ಗಟ್ಟಿ ಹಿಡದಿರೋ ರಾಯಣ್ಣ ಗುದ್ದಿ ಕೊಲ್ತೀನಿ ನೆತ್ತಿಮ್ಯಾಗ
ಕೆಟ್ಟ ಹಬಸ್ಯಾನ ದನಿ ಕೇಳಿ ಹೇತಗೊಂಡಾನೋ ಹಣಮಂತಾಗ
ಗಜವೀರ ಬಂದರ ಇವನು ದುಲ್ಲಂತಾನು ರಾಯಣ್ಣಗಾಗ
ಕತ್ತಿ ಢಾಲು ಕಸಗೊಂಡು ಒದ್ದಬಿಟ್ಟಾನು ಮುಕಳಿ ಮ್ಯಾಗ
ಓಡಿ ಹೋಗಿ ಬಾಳ್ಯಾನ ಮುಂದ ಹೇಳತಿದ್ದಾನು ಹನಮಂತಾಗ
ನಮ್ಮ ತಾಯಿ ಹೊಟ್ಟಿ ತಣ್ಣಗಿತ್ತು ತಿರುಗಿ ಬಂದೇನ ನಾನಾ

ಮತ್ತೊಮ್ಮೆ ತಾಯಿ ಹೆಟ್ಟೀಲೆ ತಿರುಗಿ ಬಂದಾಂಗೋ ನಾನಾ
ನೀನು ರೂಪಾಯಿ ಕೇಳಿದರ ಕೊಡತೇನಿ ತಿರು ಈಗ
ಅಷ್ಟೊತ್ತಿಗೆ ರಾಯಣ್ಣನ ದಂಡು ಊಟ ಮಾಡಿತ ಕಣದಾಗ
ಅಮಟೂರ ಬಾಳಪ್ಪಗ ಹೇಳಿ ಕಳಿಸ್ಯಾನು ರಾಯಣ್ಣಾಗ
ಹತ್ತು ಹದಿನಾರ ಎತ್ತಿನ ಹಳೇಬಂಡಿ ಬರಲೆಂತಾನಾಗ
ಇದರಂತೆ ಭೀಮಣ್ಣ ಕರ್ಣಿ ಹಿಡಿಯಲೇ ತಮ್ಮಾ ಈಗ
ಇಷ್ಟ ಕೇಳಿ ಭೀಮಣ್ಣ ಕರ್ಣಿ ಹಿಡದಾನ ಕಣದಾಗ
ಕರ್ಣಿ ಸಪ್ಪಳ ಕೇಳಿ ಬಂಡಿ ಕೊಳ್ಳ ಕಟ್ಯಾರಾಗ
ರಕ್ತಮಾನ್ಯದ ಹೊಲಕ ಕೊಳ್ಳ ಕಟ್ಯಾರು ಬಂಡೀನಾಗ
ರಕ್ತಮಾನ್ಯದ ಕಣಕ ಬಂದು ಕೊಳ್ಳ ಹರಿದಾನು ಬಂಡಿನಾಗ
ಮುತ್ತಿಕೊಂಡು ದಂಡೆಲ್ಲಾ ಜೋಳಾ ಹೇರಿತು ಬಂಡ್ಯಾಗ
ಒತ್ತರದಿಂದ ಬಂಡೀ ಹೊಡದಾರು ಅಮಟೂರ ಬಾಳಪ್ಪನಲ್ಲೀಗಿ
ಗಂಗಿ-ಗೌರಿ ಅನ್ನುವ ಹಗೇದ ಬಾಯಿ ತೆಗೆದು ಬಿಟ್ಯಾರಲ್ಲಿ
ಮುತ್ತಿಕೊಂಡು ಹಗೆಗಳ ತುಂಬಿ ಬಿಟ್ಯಾರ ತಂದು ತಂದಲ್ಲಿಗಿ
ಜೋಳಾ ತುಂಬಿ ರಾಯಣ್ಣ ತಾನು ಹೇಳತಿದ್ದಾನ ಬಾಳಣ್ಣಗ
ನನ್ನ ಹಡದ ತಾಯಿ ಕೆಂಚವ್ವಗ ಬಹಳ ಜೋಕೆಪ್ಪ ಬಾಳಣ್ಣಾ
ನನ್ನ ತಂದಿ ಭರಮಣ್ಣನ ಶೂರತನಕ್ಕ ಅಂಜಕಿಲ್ಲೊ ನನಗಾ
ನಾನು ತಿರುಗಿ ಬರುವುದು ಭರವಸಿ ಇಲ್ಲೋ ನನಗ
ಇಷ್ಟು ಅಂದು ರಾಯಣ್ಣ ಸಂತೋಷದಿಂದ ನೀರ ತಂದನಾಗ
ಇಂಗ್ರೇಜರನ್ನ ಹೊರಗ ಹಾಕಿದಾಗ ಸಮಾಧಾನ ನನಗ
ಮಗನಪ್ಪಿ ಕೆಂಚವ್ವ ದುಃಖ ಮಾಡತಾಳ್ರಿ ಧರಣಿ ಮ್ಯಾಗ
ತಾಯಿಗೆ ಸನಮಂತ ಹೇಳ್ಯಾನ ರಾಯಣ್ಣ ಧರಣಿಯ ಮುಟ್ಯಾಗ
ಅಷ್ಟು ಅಂದು ರಾಯಪ್ಪ ತಾನು ಬಿದ್ದಾನಾಗ
ಅವರ ಸಂದು ಉಳದೀತ್ರೆಪ್ಪಾ ಅಮಟೂರ ತುರುಮಂದಿಯೊಳಗ
ದಾತರಿಲ್ಲದಂತಹ ಜಗಳ ಯಾತಕಪ್ಪ ರಾಯಾ ನಿನಗ

ತಾಯಿ ಪಾದಕ್ಕ ಬಿದ್ದು ರಾಯಾ ದಂಡ ಕರಕೊಂಡು ಹೊಂಟನಾಗ
ಒತ್ತರದಿಂದ ಬಂದೀತು ದಂಡು ಬಾಳೇಕುಂದದ ಕೊಳದಾಗ
ಬಾಳೇಕುಂದದ ಕೊಳ್ಳಕ ಬಂದು ಕೇಳತಿದ್ದಾನು ಗಜವೀರ
ವೈರಿ ಬಾಳ್ಯಾನ ಹೊಲಾ ತೋರಿಸಬೇಕೋ ಯಣ್ಣಾ ಈಗ
ಇಷ್ಟ ಕೇಳಿ ರಾಯಣ್ಣ ತಾನು ಕುಲುಕುಲು ನಕ್ಕನಾಗ
ಮೊಗಲಾವಿ ಸೀಮಿ ಹುಡುಗರಿಗೆ ಕೈ ಪಂಜು ಹಚ್ಚಿರಂತಾನಾಗ
ನಡಕಟ್ಟಿ ರಾಯಣ್ಣನ ದಂಡು ತಯ್ಯಾರಾದೀತು ಕೊಳ್ಳದಾಗ

ಕಾಳಿ ಭೀಮಣ್ಣ ನೀನು ಕಣಿ ಹಿಡಿಯಲೇ ತಮ್ಮಾ ಈಗ
ತೀವ್ರದಿಂದ ಬಂದೀತ ದಂಡು ವೈರಿ ಬಾಳ್ಯಾನ ಹೊಲಕಾಗ
ವೈರಿ ಬಾಳ್ಯಾನ ಹೊಲಾ ಇವನೋಡ್ರಿ ತಮ್ಮಗಳೀರಾ ನೀವೀಗ
ಊರಾನ ಜನರನೆಲ್ಲಾ ಮಾತಾಡಿಸಿ ಬರೋಣ ತಮ್ಮಾ ಈಗ
ಬಿಚ್ಚಗತ್ತಿ ಚೆನ್ನನ ಹಿಂಬಾಲ ಕರಕೊಂತಾನಾಗ
ದವಡಾಸಿ ಬಂದಾನ ಬಂಟಾ ಸಂಗವಳ್ಳಿ ಬೇಲಿಯೊಳಗ
ಅಷ್ಟು ಹೊತ್ತಿಗೆ ರಾಯಣ್ಣನ ದಂಡು ತೈಯಾರಾದೀತ ಹೊಲದಾಗ
ಹತ್ತು ಹದನಾರಕ್ಕಡಿ ಗೂಡು ಬೆಂಕಿ ಹಚ್ಚಿ ಸುಡತಾರಾಗ
ಆ ಉರಿಯ ಬೆಳಕು ಊರಮ್ಯಾಲ ಬಿದ್ದೀತಾಗ
ಊರಾನ ಹೆಣ್ಣು-ಗಂಡು ಜನಾ ಮಾತಾಡಾಕ ಹತ್ತಿದ್ದಿತಾಗ
ಕುಲಕರ್ಣಿ ಬಾಳಪ್ಪನ ಹೊಲದ ಬೆಳಕ ನೋಡ್ರಿ ಈಗ
ಮತ್ತೆ ಮ್ಯಾದಾರ ಪರಸ್ಯಾನ ಮಗನ ಹುರುಪ ಎದ್ದೀತ ಊರಾಗ
ಕತ್ತಿ ಢಾಲು ಕೈಯಾಗ ಹಿಡಿದ ಜಿಗಿದಾಡತಿದ್ದಾನ ಓಣಿಯೊಳಗ
ತುಡುಗ ರಾಯಾ ಸಿಕ್ಕರ ಹೊಡಿಯತಿದ್ದೇನು ಕೆನ್ನಿಯ ಮ್ಯಾಗ
ಇಷ್ಟ ಅನ್ನುದು ನಿಂತಕೊಂಡ ಕೇಳತಿದ್ದನು ರಾಯಣ್ಣಾಗ
ಬೇಲಿ ಸನಿಯಾಕ ಬರಬಿಟ್ಟು ಧೀನಂತ ಜಿಗದಿದ್ದನಾಗೆ
ಏನಬರಾ ಕಡದಲೇ ಪರತ್ಯಾ ಅಂತ ಎದುರಿಗೆ ನಿಂತಾನಾಗ
ಕತ್ತಿ ಢಾಲು ಒಕ್ಕೊಟ್ಟ ಪರಶ್ಯಾ ಓಡುತ್ತಿದ್ದಾನ ಓಣಿಯೊಳಗ
ಓಡಿಹೋಗುವ ಪರಶ್ಯಾನ ಕಂಡು ಕುಲುಕುಲು ನಗುತ್ತಿದ್ದನಾಗ
ಅಷ್ಟೊತ್ತಿಗೆ ಯಲ್ಲಣ್ಣಾ ದಂಡ ಕರಕೊಂಡ ಬಂದಾನಾಗ
ದವಡಾಸಿ ಬಂದೀತೋ ದಂಡು ಸಂಗವಳ್ಳಿ ತುರಮಂದ್ಯಾಗ
ಡಗ್ಗಾಲಮಂಡಿ ಊರಿ ಗಜವೀರಾ ಚೀರಲಬ್ಬಿ ಹೊಡದಾನಾಗ
ಕೆಟ್ಟದ ಹಬಸ್ಯಾನ ದನಿಕೇಳಿ ಗಡಬಡಿ ನಡಿಶ್ಯಾನೋ ಬಾಳ್ಯಾ
ರಾಯಾನ ದಂಡ ಬಂತ ಅಂತ ಓಡಿಹೋಗತಾನ ಹಿತ್ತಲದಾಗ
ಕಟ್ಟದ ಕುಣಿಯಾಗ ಡೊಗ್ಗಿ ಕೊಂಡ ಚಿಪ್ಪಾಡಿ ಎಳಕೊಂಡಾನ ಮ್ಯಾಗ
ಗಜವೀರನ ದನಿಕೇಳಿ ಓಡಿಬಂದಾನು ರಾಯಣ್ಣಾಗ
ದಂಡಿನ ಎದುರಿಗೆ ಬಂದು ಕೈಯ ಮುಕ್ಕೊಂಡು ನಿಂತಾನಾಗ
ಈ ಊರೊಳಗ ಬಾಳ್ಯಾನ್ಹೊರ್ತು ಮರ್ಮ ಇಲ್ಲಿ ತಮ್ಮಾ ನಮಗ
ದವಡಾಸಿ ಬಂದೀತ ದಂಡು ವೈರಿ ಬಾಳ್ಯಾನ ಮನಿಗೀಗ
ತಳವಾರ ಫಕ್ಕೀರಪ್ಪ ಮಲಗಿದ್ದರೀ ಕಟ್ಟಿಮ್ಯಾಗ
ಚಾಡಕೋರ ಮಲಗ್ಯಾನು ನೋಡು ಕಟ್ಟಿಮ್ಯಾಗ
ಇಷ್ಟ ಕೇಳಿ ಚನಬಸ್ಯಾ ತಾನು ಧೀನಂತ ಜಿಗದಿದ್ದನಾಗ
ಕಾಲ ಮೆಟ್ಟಿ ಕಾಲ ಹಿಡಿದು ಸೀಳಿ ಒಗದಾನೋ ರಸ್ತೆದಾಗ

ಮೊಗಲಾಯಿ ಸೀಮಿ ದಂಡ ಏಕದಮ್ಮ ಮುಗಿಬಿದ್ದಾರಾಗ
ರಸ್ತೆದಾಗ ನಿಂತು ರಾಯಣ್ಣ ಹೇಳತಿದ್ದಾನ ಸೈನಿಕರಿಗಾಗ
ಹೆಣ್ಣು ಮಕ್ಕಳನ ಮುಟ್ಟಬ್ಯಾಡ್ರಿ ದೋಷ ಖಚಿತ ನಮಗ
ತೊಟ್ಟಿಲದಾಗಿನ ಗಂಡೆಂಬು ವಂಶ ಚಂದ ಆಡೀರಿ ಈಗ
ಬಿಳಿ ಅರಿವಿ ಮೂದಲ ಬಿಡದ ಸುಲಗಿ ಮಾಡಿರಿ ಮನಿಯಾಗ
ಅಷ್ಟೊತ್ತಿಗೆ ಯಲ್ಲಣ್ಣ ಬಾಳ್ಯಾನ ಹುಡಕಾಕ ಹತ್ಯಾನಾಗ
ಮನಿಯಲ್ಲಾ ಹುಡುಕಿದನು ವೈರಿ ಬಾಳ್ಯಾ ಸಿಗಲಿಲ್ಲಾಗ
ಹೊರಗ ಬಂದು ರಾಯಣ್ಣ ಮುಂದ ಯಲ್ಲಣ್ಣ ಹೇಳತಿದ್ದನಾಗ
ವೈರಿ ಬಾಳ್ಯಾ ನನಗ ಮಾತ್ರ ಸಿಗವಲ್ಲನೋಯಣ್ಣಾ ಈ
ಹಿತ್ತಲದಾಗ ಸಂಶಯ ಬರತೈತಿ ನೋಡಿ ಬರತೇನಂತಾನಾಗ
ಹಿತ್ತಲದಾಗ ಬರತಾರಂತ ಅಡರಾಸಿ ಬಾಳ್ಯಾ ಎದ್ದಾನಾಗ
ಓಡಿಹೋಗಿ ಬಲಭೀಮನ ಬೆಣ್ಣ ಬಿದ್ದಾನೋ ಬಾಳ್ಯಾ ಆಗ
ಅಷ್ಟೊತ್ತಿಗೆ ಒಡ್ಡರ ಯಲ್ಲಣ್ಣ ಹುಡಕ ಹತ್ಯಾನ ಹಿತ್ತಲದೊಳಗ
ಹಿತ್ತಲದಾಗ ಸಿಗವಲ್ಲ ಬಾಳ್ಯಾ ಇದೇ ಈಗ ಹೋಗ್ಯಾನ ಹೊರಗ
ಹುಷಾರೀರೋ ಯಲ್ಲಣ್ಣ ಹುಡಕ ತೆಗೆಯತೀವ ನಾವೀಗ
ಗಜವೀರನ ಕರಕೊಂಡ ಹೊಂಟಾನ ರಾಯಾ ಹೊರಹೊರಗ
ದವಡಾಸಿ ಬಂದಾರ ಬಂಟರಾ ಬಲಭೀಮನ ಗುಡಿಯೊಳಗ
ಬಲಭೀಮನ ಗುಡಿಗಿ ಬಂದು ಬೇಡಿಕೊಂತಾನೋ ರಾಯಣ್ಣಾಗ
ವೈರಿ ಬಾಳ್ಯಾ ಸಿಕ್ಕರ ನಿನಗ ಬಂಗಾರ ಜಡಸ್ತೇನೋ ಈಗ
ಇಳುವು
ಹಿಂದುಗಡೆ ಗಜವೀರ ಬಂದು ಬೇಡಿಕೊಂತಾನಾಗ
ವೈರಿ ಬಾಳ್ಯಾ ಸಿಕ್ಕರ ಸುಟ್ಟು ತಿಂತೇನಿ ನಿನ್ನ ಗುಡಿಯಾಗ
ಗಜವೀರ ವೀರತನದಿಂದ ಕೂಗಿ ಬೇಡಿಕೊಂತಾನಾಗ
ಗರ್ಜನೆ ಮಾಡಿ ರಾಯಣ್ಣ ಮತ್ತ ಬೇಡಿಕೊಂತಾನ ಬಲಭೀಮಗ
ದೇಶಕ್ಕ ಘಾತಕ್ಕನಾದ ವೈರಿ ಕೊಡೋ ನಮಗೀಗ
ನೀ ದೇವರಾದರ ಎದ್ದು ಪ್ರಸನ್ನಾಗೋ ನಮಗೀಗ
ವೀರ ಮಕ್ಕಳ ನಾವು ಸೂರಿಯಿಂದ ಹೋರಾಡತೇವೀಗ
ಅವರ ಸಂದ ಉಳದೀತ್ರೆಪ್ಪಾ ಬಲಭೀಮನ ಗುಡಿಯೊಳಗ
ದಾತರಿಲ್ಲದಂತದ ಜಗಳ ಯಾತಕಪ್ಪ ರಾಯಾ ನಿನಗ

ಅವರಿಬ್ಬರೂ ಮಾತನಾಡತಾ ತಮ್ಮ ದಂಡಿಗೆ ಬಂದಾರಾಗ
ಬಾಳ್ಯಾ ನನಗ ಸಿಗಲಿಲ್ಲ ಅಂತಾನ ಗಜವೀರ ಗರ್ಜಸಿದಾಗ
ದವಡಾಸಿ ಬಂದೀತ ದಂಡು ಬಾಳೇಕುಂದದ ಕೊಳ್ಳಕ್ಕಾಗ

ಬಾಳೇಕುಂದದ ಕೊಳ್ಳಕ ಬಂದ ಸುಮ್ಮನೆ ಮಲಗಿದ್ದ ಯಲ್ಲಪ್ಪಾಗ
ರಾಯಣ್ಣನ ಹಾವಳಿ ಕೇಳಿ ಇಂಗ್ರೇಜಾ ದಂಡು ತೈಯಾರ ಮಾಡ್ಯಾನಾಗ
ಹತ್ತನೂರ ಇಂಗ್ರೇಜಿ ದಂಡು ತೈಯಾರಾದೀತ ಕೊಳ್ಳದಾಗ
ಇಂಗ್ರೇಜಿ ದಂಡ ಬಂದದ್ದು ಗೊತ್ತಿದ್ದಿಲ್ಲೋ ರಾಯಣ್ಣಗಾಗ
ನನಗೊಂದು ಕೆಟ್ಟ ಕನಸಾ ಬಿದ್ದಿ ತಪ್ಪಾ ಯಣ್ಣಾ ಈಗ
ನನ್ನ ಕೆಟ್ಟ ಕನಸಿನ್ಯಾಗ ಇಂಗ್ರೇಜಾನ ದಂಡ ಬಂದೀತೀಗ
ನನ್ನ ಶೂರ ಯಲ್ಲಣ್ಣ ತಯಾರ ಮಾಡಿರ್‍ಯೋ ದಂಡನೀಗ
ಡಗಲಿ ಚಣ್ಣ ತೊಟ್ಟು ಶಸ್ತ ಹೆಗಲಮೇಲೆ ಹಾಕ್ಯಾನಾಗ
ಮೆಣಚ ಬಡಗಿ ಬಂದೂಕಾ ಕೈಯಾಗ ಹಿಡದ ತೈಯಾರಾದನಾಗ
ದವಡಾಸಿ ಬಂದಾನು ಎಲ್ಲಾ ಇಂಗ್ರೇಜಿ ದಂಡಿನೊಳಗ
ನಡು ದಂಡಿನೊಳಗ ಹಾದು ಮುಂದಕ ಪಾರಾದನಾಗ
ದಂಡಿನ ಕಡೆ ಪಡೆ ನಿಂತು ಲೆಕ್ಕಾ ಮಾಡತಾನು ದಂಡೆಲ್ಲಾಗ
ಹತ್ತನೂರಾ ಇಂಗ್ರೇಜಿ ದಂಡು ಲೆಕ್ಕಾ ಮಾಡಿಕೊಂಡಾನಾಗ
ಲೆಕ್ಕಾಮಾಡಿ ಯಲ್ಲಣ್ಣ ಓಡಿ ಬಂದಾನ ಒಂದೇ ಉಸರಿನಾಗ
ಓಡಿಬಂದು ರಾಯಣ್ಣನ ಮುಂದ ಹೇಳಿದಾನ ಯಲ್ಲಣ್ಣಾ
ಇಂಗ್ರೇಜಿ ದಂಡು ಒಳ್ಳೆ ಭರಪೂರಾ ಕೂಡೆತಂತಾನಾಗ
ಅದಕೊಂದು ಹಂಚಿಕಿ ನಾನು ಬ್ಯಾರೆ ಮಾಡತೀನಂತಾನಾಗ
ತೆಕ್ಕಿ ತುಂಬ ಕಾತಿ ಹಗ್ಗಾ ಕಾತಿಹಗ್ಗಾಬಗಲಾಗ ಹಿಡಕೊಂಡಾ
ಇಂಗ್ರೇಜಿ ದಂಡಿನ ಮುಂದಿನ ಮಡ್ಡಿ ಹತ್ಯಾನ ಯಲ್ಲಣ್ಣಾ
ಮಳಾ ಮಳಾ ಕಾತಿ ಹರಿದು ಬೆಂಕಿ ಹಚ್ಚತಾನ ಕಾತಿಗಾಗ
ಕಂಟಕೊಂದು ಕಾತಿಕೊಳ್ಳಿ ಕಟ್ಟಗೊಂತ ಹೋಗುತ್ತಿದ್ದನಾಗ
ಕೊಳ್ಳಿ ಬೆಳಕಾನೋಡಿ ಇಂಗ್ರೇಜಿ ದಂಡ ಮಾತನಾಡತಿದ್ದಿತಾಗ
ರಾಯನ ದಂಡ ಮಾತ್ರ ಅಡಗಿ ಹೋಗೆತಂತಾರಾಗ
ಇಪ್ಪಂದು ಏಕದಮ್ಮ ಕವಾಯತ ಮಾಡತಿದ್ದರಾಗ
ಕೊಳ್ಳಿ ಬೆಳಕಾ ನೋಡಿ ಇಂಗ್ರೇಜಿ ದಂಡು ಮದ್ದು ಸುಡ್ಯಾತ್ತಿತಾಗ
ಮುಂದೆ ಮದ್ದಿಗೆ ಇಂಗ್ರೇಜಿ ದಂಡು ಗುಂಡ ಹೊಡೆಯುತ್ತಿದ್ದಿತಾಗ
ಅಷ್ಟೊತ್ತಿಗೆ ರಾಯಣ್ಣನ ದಂಡು ಹಿಂದ ಬಂದ ನಿಂತಿತಾಗ
ಇಂಗ್ರೇಜಿ ಹತ್ತಿಲಿದ್ದ ಮದ್ದೆಲ್ಲ ತೀರಿ ಹೋತೋ ಕ್ಷಣದಾಗ
ಅಷ್ಟೊತ್ತಿಗೆ ಯಲ್ಲಣ್ಣ ಹೇಳುತ್ತಿದ್ದಾನೋ ದಂಡಿನೆಳಗ
ಯಾಕೋ ತಮ್ಮಗಳಿರಾ ಸುಮ್ಮನೆ ಯಾಕ ನಿಂತೀರೀ
ಬಂದೂಕ ತಿರಿವಿ ಹಿಡಿದು ಹೊಡಿಯಾ ಹತ್ಯಾನ ಗಜವೀರಾ
ಮೊಗಲಾಯಿ ಸೀಮಿ ದಂಡು ಏಕದಮ್ಮ ಮುಗಿಬಿದ್ದಾರಾಗ
ಹಸಿದುಂಟು ಕಡದಂಗ ಕಡದ ಚೆಲ್ಯಾರ ದಂಡೆಲ್ಲಾಗ

ಅಡರಾಸಿ ಗಜವೀರಾ ಬಂದ ಹೇಳತಿದ್ದಾನೋ ರಾಯಣ್ಣಗಾಗ
ಊಟಾ ಆಗಲಿಲ್ಲೋ ರಾಯಣ್ಣಾ ಈ ದಂಡು ಎಲ್ಲಾ ನನಗ
ಇಷ್ಟ ಕೇಳಿ ರಾಯಣ್ಣ ಕುಲುಕುಲು ನಗತಾನಾಗ
ದವಡಾಸಿ ಬಂದೀತ ದಂಡ ಬಾಳೇಕುಂದದ ಕೊಳದಾಗ
ಬಾಳೇಕುಂದದ ಕೊಳ್ಳಕ ಬಂದು ಕೇಳತಿದ್ದಾನ ಗಜವೀರಾ
ಸಂಪಗಾಂವಿ ಕಚೇರಿ ಒಂದಾ ಎದಿಮ್ಯಾಗ ಐತೋ ನನಗಾ
ರಾಯಣ್ಣ ಕೇಳಿ ತಾನು ನಕಲ ಮಾಡ್ಯಾನ ಗಜವೀರಗಾಗ
ಸಂಪಗಾಂವಿ ಕಚೇರಿ ಮುರಿಯುವದಾಗುದುಲ್ಲೊ ನಮಗ
ಸಂಪಗಾಂವಿ ಕಚೇರಿ ಬಹಳ ಬಂದು ಬಸ್ತ ಐತೀಗ
ಇಷ್ಟ ಕೇಳಿ ಗಜವೀರಾಗ ಹೊಂಚಹಾಕಿಕೊಂಡಾನ ಮನದಾಗ
ಬಿಡು ಬಿಡು ರಾಯಪ್ಪಣ್ಣಾ ಹೆದರಿಕೆ ಹೇಳಬ್ಯಾಡ ನನಗ

ಸಂಪಗಾಂವಿ ಕಚೇರಿ ಮುರಿಯುವದಿಲ್ಲೇನೊ ನಾನಾ
ಸಂಪಗಾಂವಿ ಕಚೇರ ಮುರಿಯದಿದ್ದರೆ ಶೂರರೇನಾ
ನಾ ಮುರಿಯದಿದ್ದರೆ ನನಗ ಉಡಸರಿ ಶೀರಿಯನಾ
ವೀರ ಗಜವೀರ ಚೀರ್‍ಯಾನ ಕೇಸರಿಯಂಗ ರಣಧೀರನಾ
ದನಿಗೆ ದನಿ ಬರತೈತ್ಯೋ ಏರೇರಿ ಭೂಮಿ ಮ್ಯಾಗಾ
ತಾಯಿ ಬಲಾ ಇರಲ್ಯೋ ರಾಯಣ್ಣಾ ನಮ್ಮ ಮ್ಯಾಗಾ
ಅವರ ಸಂದ ಉಳಿದೀತ್ರೆಪ್ಪಾ ಬಾಳೇಕುಂದದ ಕೊಳ್ಳದಾಗ
ದಾತರಿಲ್ಲದಂತಹ ಜಗಳ ಯಾತಕಪ್ಪಾ ರಾಯಾ ನಿನಗ

ಇಷ್ಟ ಕೇಳಿ ರಾಯಣ್ಣ ದಂಡಿಗೆ ಯುಕ್ತಿಯಿಂದ ಕೇಳಿದಾಗ
ಮೊಗಲಾಯಿ ಸೈನಿಕರಿಗೆ ಕೆಪಂಜ ಹಚ್ಚಿರಂತಾನಾಗ
ನಡಿಕಟ್ಟಿ ರಾಯನ ದಂಡು ತೈಯಾರಾದೀತ ಕೊಳದಾಗ
ಕಾಲಿ ಭೀಮಣ್ಣಾ ಕಣಿ ಹಿಡಿಯಲೇ ತಮ್ಮಾ ನೀನೀಗ
ನಡಕಟ್ಟಿ ದಂಡಿನ ಮುಂದ ಕರ್ಣಿ ಹಿಡಿದಾನ ಭೀಮ್ಯಾ ಆಗ
ದವಡಾಸಿ ಬಂದೀತು ದಂಡು ಸಂಪಗಾಂವಿ ತುರಮಂದ್ಯಾಗ
ಕಾಳಿ ಶಬ್ದಾ ಸಂಪಗಾಂವಿ ಸುಭೇದಾರಾ ಕೇಳತಿದ್ದನಾಗ
ರಾಯಾನ ದಂಡು ಬರಾಕತ್ತೇತಿ ಅಂತ ಸಂಪಗಾಂವಿ ಬಿಡಾಕತ್ಯಾನಾಗ
ತನ್ನ ಕುಟುಂಬ ಸಹಿತವಾಗಿ ಊರ ಬಿಡತಾನ ಸುಭೇದಾರಾಗ
ದವಡಾಸಿ ಬಂದೀತು ದಂಡು ಸಂಪಗಾಂವಿ ತುರುಮಂದ್ಯಾಗ
ಕಾಳಿ ಶಬ್ದಾ ಸಂಪಗಾಂವಿ ಸುಭೇದಾರಾ ಕೇಳತಿದ್ದನಾಗ
ರಾಯಾನ ದಂಡು ಬರಾಕತ್ತೇತಿ ಅಂತ ಸಂಪಗಾಂವಿ ಬಿಡಾಕತ್ಯಾನಾಗ

ತನ್ನ ಕುಟುಂಬ ಸಹಿತವಾಗಿ ಊರ ಬಿಡತಾನ ಸುಭೇದಾರಾಗ
ದವಡಾಸಿ ಬಂದೀತು ದಂಡು ಸಂಪಗಾಂವಿ ಊರೊಳಗ
ಡಗ್ಗಾಲಮಂಡಿ ಊರಿ ಗಜವೀರಾ ಚೀರಲಬ್ಬಿ ಹೊಡದಾನಾಗ
ವೀರ ಹಬಸ್ಯಾನ ದನಿ ಕೇಳಿ ದಡಬಡಿಕಿ ಹುಟ್ಟಿತವರಿಗಾಗ
ಹರಕೆ ಕೋರಿಯ ಸಿಂಬಿ ಮಾಡಿ ಪಾದಕ್ಕ ಕಟ್ಟಿದ್ವಾನಾಗ
ಸಿಂಬ ಗರ್ಜನಮಾಡಿ ಗಜವೀರಾ ಒದ್ದ ಮುರದಾನ ಕಟಂಜನಾಗ
ಮೊಗಲಾಯಿ ಸೂರರಾ ಎಕದಂ ಮುಗಿಬಿದ್ದಾರ ವಿಸ್ತಾರಾಗಿ
ಮಧ್ಯಾಹ್ನ ಆರು ತಾಸು ಹೊತ್ತಿಗೆ ಬೆಂಕಿ ಹಚ್ಯಾರ ಕಚೇರಿಗಿ
ಸಂಪಗಾಂವಿ ಕಚೇರಿನೆಲ್ಲಾ ಸುಟ್ಟ ಬೂದಿ ಮಾಡಿದರವರಾ
ಅಷ್ಟೊತ್ತಿಗಿ ರಾಯಣ್ಣ ತಾನು ಹುಡುಕುತ್ತಿದ್ದನ ಸುಭೇದಾರನಾ
ಸುಭೇದಾರ ಸಿಗದ ಕಾಲಕ್ಕ ಕತ್ತಿ ಹಿರದಾನ ದಡದಂದಾ
ಜನಾ ಹೋದ ಬಳಿಕ ಇದೊಂದು ಗುರುತು ಇರಲೆಂತಾನಾ
ಕೇಸರಿ ಗರ್ಜಿಸಿದಂಗ ಗರ್ಜಿಸಿ ಉಕ್ಕಿನ ಕಂಬಾ ಕಡಿದನಾ
ಉಕ್ಕಿನ ಕಂಬದಾಗ ರಾಯಣ್ಣನ ಕತ್ತಿ ನಟ್ಟ ಬಂದಿತಾಗ
ಸಂಪಗಾಂವಿ ಕಛೇರಿ ಹೊನ್ನ ಎಳದ ತಂದಾನೊ ತುರಮಂದ್ಯಾಗ
ಅಷ್ಟ ಹೊತ್ತಿಗೆ ಗಜವೀರಾ ಮತ್ತು ಕೇಳತಾನ ರಾಯಣ್ಣಾಗ
ಬೀಡಿ ಹಳ್ಳಿ ಕಚೇರಿ ಒಂದ ಎದಿಮ್ಯಾಲ ಐತೋಯಣ್ಣಾ ಈಗ
ಇಷ್ಟ ಕೇಳಿ ರಾಯಣ್ಣ ತಾನು ಮತ್ತ ಹೇಳತಾನು ಗಜವೀರಗಾಗ
ಬೀಡಿ ಹಳ್ಳಿ ಕಚೇರಿ ಬಹಳ ಬಂದುಬಸ್ತಿ ಐತಿ ಈಗ
ಈ ವಿಚಾರ ಕೇಳಿ ಗಜವೀರ ಹಾಕಿದ ನಿಂತಕೊಂಡ ಅಕಲಾ
ಬಿಡೋ ರಾಯಪ್ಪಣ್ಣಾ ಬಂತ ನನಗ ಶಕ್ತಿ ಮತ್ತು ಯುಕ್ತಿನಾ
ನಡಿಯೋ ಯಣ್ಣಾ ಮುರದ ಬರೋನ ಬೀಡಿ ಕಚೇರಿನಾಗ
ಇಂಗ್ರೇಜಿಯರಿಗೆ ಬೀಳಲಿನ್ನಾ ನಮ್ಮ ಶಕ್ತಿ ಗುರತವನಾ
ಕಾಳಿ ಭೀಮಣ್ಣನ ಕಾಳಿ ರಣಕಾಳಿಯಾಗಿ ಕೂಗಿತಾಗ
ಕಾಳಿ ದನಿಕೇಳಿ ಬೀಡಿ ರೈತರ ಮಾತಾಡತಿದ್ದಾರಾಗ
ರಾಯನ ದಂಡು ಬಂದೀತಂತ ಊರ ಬಿಡಾಕ ಹತ್ಯಾರಾಗ
ದವಡಾಸಿ ಬಂದೀತ ದಂಡು ಬೀಡಿ ಊರ ತುರಮಂದ್ಯಾಗ
ಡಗ್ಗಾಲಮಂಡಿ ಊರಿ ಗಜವೀರಾ ಚೀರಲಬ್ಬಿ ಹೊಡದಾನಾಗ
ಕೆಟ್ಟ ಹಬಸ್ಯಾನ ದನಿಕೇಳಿ ಗಡಬಡ ನಡಶ್ಯಾರೋ ಆಗ
ಹರಕ ಕೋರಿಯ ಸಿಂಬಿ ಮಾಡಿ ಅಂಗೈಯಿಗೆ ಸುತ್ತಿದ್ವಾನಾಗ
ಚಿಟ್ಟನೆ ಚೀರಿ ಗಜವೀರಾ ಗುದ್ದಿ ಮುರಿದಾನೋ ಕಟಂ ಜನಾಗ
ಮೊಗಲಾಯಿ ಸೀಮಿಯ ಸೈನಿಕರ ಎಕದಂ ಮುಗಿಬಿದ್ದಾರಾಗ
ಎಲಿಗೆ ಸುಣ್ಣಾ ಹಚ್ಚೂದರೊಳಗ ಲೂಟಿ ಮಾಡತಾರ ಊರೊಳಗ

ಬೀಡಿಹಳ್ಳಿ ಕಚೇರಿ ಹೊನ್ನ ಎಳೆದು ತಂದಾರ ತುರಮಂದ್ಯಾಗ
ಅಷ್ಟು ಎಲ್ಲಾ ಹೊನ್ನ ತಕ್ಕೊಂಡು ತಲಿಮ್ಯಾಲೆ ಹೊತಕೊಂಡಾರಾಗ
ದವಡಾಸಿ ಬಂದೀತ ದಂಡು ಬಾಳೇಕುಂದದ ಕೊಳದಾಗ
ಬಾಳೇಕುಂದದ ಕೊಳ್ಳಕ ಬಂದು ಕೇಳುತ್ತಿದ್ದಾನ ಗಜವೀರಾ

ಹಂಗ ಒಬ್ಬರ ನಮ್ಮ ಹೊನ್ನ ಕಲಾಲ ಆಗತೈತೋ ರಾಯಣ್ಣಾ
ಬಾಳೇಕುಂದದ ಮಡ್ಡಿಮ್ಯಾಗ ಕಿಲ್ಲೆ ಕಟ್ಟಿಸೂನಂತಾನಾಗ
ಅಷ್ಟೊತ್ತಿಗೆ ರಾಯಣ್ಣಗ ಅಪಶಕುನಾಗಿ ತಿಳಿದ ಬಂದೀತಾಗ
ಯಾರ ಬ್ಯಾಡ ಅಂತಾನು ಕಟ್ಟಿ ಸೂನಂತಾನು ರಾಯಣ್ಣನಾಗ
ಕಿತ್ತೂರ ಅರಸ ಕೂಡಿ ಒಂದನಾಗಿ ಇಂಗ್ರೇಜನರ ಕಳಸೂನೀಗ
ಕಿತ್ತೂರ ನಾಡೀನ ವೀರರ ನಾವೆಲ್ಲ ಇಂಗ್ರೇಜರನ ದೂಡೂನೀಗ
ಯಾರ ಬ್ಯಾಡಜ ಅಂತಾರಪ್ಪ ನಿನ್ನ ವಿಚಾರದಂಗ್ನಂದ ಗಜವೀರೀಗ
ಅವರ ಸಂದ ಉಳಿದೀತ್ರೆಪ್ಪಾ ಬಾಳೇಕುಂದದ ಕೊಳದಾಗ
ದಾತರಿಲ್ಲದ ಜಗಳಾ ಯಾತಕಪ್ಪಾ ರಾಯಾ ನಿನಗ

ಅಷ್ಟೆ ಆದ ಬಲಿಕ ಗಜವೀರಾ ಮತ್ತ ಕೇಳತಾನ ರಾಯಣ್ಣಗಾಗ
ಹಳ್ಯಾಳ ಕಚೇರಿಯೊಂದು ಎದಿಮ್ಯಾಲೈತೋ ಎಣ್ಣಾ ನಮಗ
ಇಷ್ಟ ಕೇಳಿ ರಾಯಣ್ಣ ತಾನು ಮಾರಿ ಕಿಂಕರ ಮಾಡ್ಯಾನಾಗ
ಹಳ್ಯಾಳ ಮೇಲೆ ನಮ್ಮ ಲಢಾಯಿ ಬ್ಯಾಡೋ ತಮ್ಮಾ ಈಗ
ರಾಯಪ್ಪಣ್ಣಾ ಏನ ಬರಾ ಜಿಗದ್ಯೋ ಕೇಸರಿಯಂಗ
ಹೇಳಿದರ ನನ್ನ ದಂಡ ಗಾಬರಿ ಆಗತೈತಂತಾನಾಗ
ಜಿಗಿಯಾಕ ಭೂಮಿತಾಯಿ ಕರುಣಾ ಇತ್ತ ನಮ್ಮ ಮ್ಯಾಗ
ಹಳ್ಯಾಳ ದಾಗಿನ ಹೊನ್ನಾ ಹಿಡಿಯಬ್ಯಾಡ್ರಿ ನೀವೀಗ
ಹಿಡಿದರ ಕಕ್ಕೇರಿ ಬಿಷ್ಟವ್ವನ ಆಣೆಆಗೇತಿ ನಿಮಗೀಗ
ಮೀನ ಗಂಡಕ ಗುಂಡ ಬಡಿದು ಪಾರಾದೀತೋ ಈಗ
ಇಷ್ಟ ಕೇಳಿ ರಾಯಣ್ಣನ ದಂಡು ಬಂದು ನಿಂತೀತ ಸುತ್ತಮುತ್ತಾ
ರಾಯಣ್ಣನ ಸಂಕಟ ಮಾಡೂದ ನೋಡಿ ಕಣ್ಣಿಂಗಿ ನೀರ ತಂದಾರಾಗ
ಗಟ್ಟಿಯುಳ್ಳ ಗಜವೀರಾ ಹೆಗಲಮ್ಯಾಲೆ ತಗೊಂಡಾನಾಗ

ದವಡಾಸಿ ದಂಡು ಬಂದೀತ ಬಾಳೇಕುಂದದ ಕೊಳದಾಗ
ಬಾಳೇಕುಂದದ ಕೊಳ್ಳದಾಗ ಡೇರಿ ಹೊದಿಸಿದ್ದನಾಗ
ಬುದ್ಧಿಯುಳ್ಳ ಸೈನಿಕರೆಲ್ಲಾ ವಿಚಾರ ಮಾಡಿರೀಗ
ಯುದ್ಧ ಮಾಡಿ ಮಡಿಯುದು ನಮ್ಮ ಧರ್ಮವೀಗ

ಈ ದೇಶದಿಂದ ಇಂಗ್ರೇಜರನೋಡಿಸುದು ನಮ್ಮ ಗುರಿ ಈಗ
ಎಲ್ಲಾ ರೀತಿಯಿಂದ ಫಾಯಾ ಕಟ್ಟೆರಿ ಮನಸಿನಾಗ
ದುಃಖದಾಗ ರಾಯಾನ ದಂಡ ಸುಮ್ಮನೆ ಕುಂತಿತೀಗ
ಡೇರೆದಾಗ ಅವರ ಸಂದ ಉಳಿದೀತ್ರೆಪ್ಪಾ ಕೊಳ್ಳದಾಗ
ದಾತರಿಲ್ಲದ ಜಗಳಾ ಯಾತಕಪ್ಪಾ ರಾಯಾ ನಿನಗ

ರಾಯಣ್ಣಗ ಗುಂಡ ಬಡದೈತಿ ಅಂತ ಜಾಹೀರಾತ ದೇಶದಮ್ಯಾಗ
ಹದಿನೆಂಟು ನೂರು ಇಂಗ್ರೇಜಿ ದಂಡು ಬಂದೀತ ಕೊಳದಾಗ
ಇಂಗ್ರೇಜಿ ದಂಡು ಬಂದದ್ದು ಗೊತ್ತಿದ್ದಿಲ್ಲೋ ರಾಯಣ್ಣಗಾಗ
ರಾಯಣ್ಣನ ಗೊತ್ತು ಹಚ್ಚಿ ಕೊಲ್ಲಬೇಕಂತಾನ ಇಂಗ್ರೇಜಿ ಆಗ
ಅಷ್ಟೊತ್ತಿಗೆ ಗಜವೀರ ತಾನ ಮತ್ತ ಕೇಳಿದ ರಾಯಣ್ಣಗ
ಮೊಗಲಾಯಿ ಸೈನಿಕರ ಪ್ಯಾಟಿ ನೋಡತೀವ ಅಂತಾರಣ್ಣಾ ಈಗ
ಕಿತ್ತೂರ ಪ್ಯಾಟಿ ನಾನು ತೋರಿಸಿಕೊಂಡ ಬರತೀನೀಗ
ಹೊರಸಿನ ಮ್ಯಾಗ ಮಲಗಿಕೊಂಡ ಬರತೀನೀಗ
ಹೊರಸಿನ ಮ್ಯಾಗ ಮಲಗಿಕೊಂಡ ಹೇಳತಿದ್ದನಾಗ
ಹದನೈದು ದಿವಸಕ ನನ್ನ ಕಾಲ ಮಾಯತೈತಿ ತಮ್ಮಾ ಆಗ
ಕಕ್ಕೇರಿಬಿಷ್ಟವ್ವನ ಮೂರ್ತಿ ಐತೋ ಅದರಮ್ಯಾಗ
ರಾಯಣ್ಣಾ ಹೇಳಿದ ಮಾತ ಕೇಳಲಿಲ್ಲರಿ ಗಜವೀರಾಗ
ಬಿಡೋ ರಾಯಪ್ಪಣ್ಣಾ ಹಿಂತಾ ಮಾತ ಹೇಳಬ್ಯಾಡ ನನಗ
ದಕ್ಕಿ ಆದರ ನನಗಾಗಲಿ ಹೋಗಿ ಬರತೀನಿ ಈಗ
ಕಾಳಿ ಭೀಮಣ್ಣಾ ನೀನು ಕರ್ಣಿ ಹಿಡಿಯಲೇ ಈಗ
ಹಳ್ಳಾಳ ಮಾಲ ನಡಕಟ್ಟಿ ಕರ್ಣಿ ಹಿಡದಾನ ಭೀಮಣ್ಣಾಗ
ಕರ್ಣಿ ಶಬ್ದಾಕೇಳಿ ಅವರು ಅತಗೊಂಡ ಕುಂತಾರ ಕಚೇರ್‍ಯಾಗ
ಕಚೇರ್‍ಯಾಗಿನ ಜನರೆಲ್ಲಾ ಒಬ್ಬರಕೊಬ್ಬರ ಮಾತಾಡಾಕ್ಹತ್ಯಾರಾಗ
ರಾಯಣ್ಣನ ದಂಡ ಬರತೈತಿ ಅದಕೇನ ಹಂಚೀಕಿ ಅಂತಾರಾಗ
ಅಷ್ಟೊತ್ತಿಗೆ ಒಬ್ಬ ಮ್ಯಾದಾರ ಕೇಳತಿದ್ದಾನು ಕಚೇರ್‍ಯಾಗ
ಅವನ ಗುರ್ತಾ ಹೇಳರಿ ನನಗ ಹೊಡೆಯತೇನಂತಾನಾಗ
ಇಷ್ಟ ಕೇಳಿ ರಾಯಣ್ಣನ ಗುರ್ತಾ ಹೇಳಿದ್ದಾರ ಮ್ಯಾದಾರವಗ
ಅಷ್ಟ ದಂಡಿನೊಳಗ ಮೊಳಾ ಎತ್ತರ ಇರತಾನು ರಾಯಾ
ಗುಡಗಿ ಚೊಣ್ಣ ತೊಟ್ಟು ಮ್ಯಾಲ ಹಿಡಗ್ಯಾಂವಿ ಧರಿಸತಾನಾ
ಕುಡಿ ಕುಡಿ ಹುಬ್ಬಿಗೆ ಗಂಧಾ ಧರಿಸಿರತಾನ ರಾಯಾ
ಅಷ್ಟ ದಂಡಿನಾಗ ಅವನ ಕತ್ತಿ ಮೇಲೆ ಇರತೈತಿ ಇನ್ನಾ
ಅಷ್ಟ ಹೇಳಿ ಜನರೆಲ್ಲರೂ ಮನಿಕಡಿಗಿ ಬಂದಿದ್ದರಾಗ

ಜೋಡಲಳಿಗಿ ಬಂದೂಕಬಾರ ಮಾಡ್ಯಾನ ಮ್ಯಾದಾರಾಗ
ಮಾಳಗಿ ಹತ್ತಿ ಜಿರಗಂಡ್ಯಾಗ ಕುಂತಾನ ಮ್ಯಾದಾರಾಗ
ದವಡಾಸಿ ಬಂದೀತು ದಂಡು ಹಳ್ಯಾಳ ತುರುಮಂದ್ಯಾಗ
ಡಗ್ಗಾಲ ಮಂಡಿ ಊರಿ ಗಜವೀರ ಚೀರಲಬ್ಬಿ ಹೊಡದಾನಾಗ
ಕೆಟ್ಟಿ ಹಬಸ್ಯಾನ ದನಿಕೇಳಿ ದಡಬಡಾ ಕದಾ ಹಾಕ್ಯಾರಾಗ
ಮೊಗಲಾವಿ ಸೈನಿಕರು ಸುತ್ತಮುತ್ತು ಮುಗಿಬಿದ್ದಾರಾಗ
ಕಚೇರಿ ಅಂಗಳದೊಳಗ ರಾಯಣ್ಣ ಸುಮ್ಮನೆ ನಿಂತಿದ್ದನಾಗ
ಕುಡಿ ಕುಡಿ ಹುಬ್ಬಿಗೆ ಗುರಿ ಇಟ್ಟ ಕುಂತಾನ ಮ್ಯಾದಾರಾಗ
ಥಳ್ಳನೆ ಕಣ್ಣ ತಗದ ಮೇಲಕ್ಕೆ ನೋಡ್ಯಾನ ರಾಯಣ್ಣಾಗ
ಮೇಲಕ ನೋಡೂದರೊಳಗೆ ಹಿಚಕಿ ಬಿಟ್ಯಾನ ಮ್ಯಾದಾರಾಗ
ಕಿವಿಗೆ ಬೆಂಕಿ ಬೀಳುದರೊಳಗ ರಾಯಾ ಧೀನಂತ ಜಿಗಿದಿದ್ದನಾಗ
ಗುಂಡಿನ ಹೊಗಿಯಾಗ ಮ್ಯಾದಾರನ ಚಂಡ ಕೋದಾನ ರಾಯಣ್ಣಾಗ
ಮೀನ ಗಂಡಕ ಗುಂಡ ಬಡಿದು ಪಾರ ಆದೀತೋ ರಾಯಣ್ಣಗಾಗ
ಬಿಚ್ಚಗತ್ತಿ ಚನಬಸ್ಯಾ ತಾನು ಹೇಳತಿದ್ದಾನ ರಾಯಣ್ಣಗಾಗ
ಏನಾರಾ ಗದ್ದಲಾ ಮಾಡಸ ಬ್ಯಾಡಂತ ಹೇಳತಿದ್ದನಾಗ
ಶೂರ ಹಬಸ್ಯಾ ಹೇಳಿದರ ಕೇಳಲಿಲ್ಲ ಅವನ ಮಾತಾಗ
ಗದ್ದಲಾ ಮಾಡೋದಿಲ್ಲೋ ಎಣ್ಣಾ ಹೋಗಿ ಬರತೀವಿ ಅಂತಾರಾಗ
ಮಳ್ಳತನಕ ಬಿದ್ದು ರಾಯಣ್ಣ ಅಪ್ಪಣಿ ಕೊಟ್ಯಾನ ಗಜವೀರಗ
ಬುದ್ಧಿಯುಳ್ಳ ಯಲ್ಲಣ್ಣ ಹುಷಾರಾಗಿರಪ್ಪ ದಂಡಿನೊಳಗ
ಹೊರಸಿನ ಮ್ಯಾಲ ಮಲಗಿರಾಯಣ್ಣ ಕೈಮುಗಿತಾನ ದಂಡಿಗಾಗ
ಮುಂಜಾನೆ ಗಳಗಿ ಹೊತ್ತೇರಿ ಅಪ್ಪಣಿ ಕೊಟ್ಯಾನ ದಂಡಿಗಾಗ
ದಡಡಾಸಿ ಬಂದೀತ ದಂಡು ಸಿಂದೀಗಡಂಗಕಾಗ ಗಡಂಗದೊಳಗ
ರಾಯಣ್ಣನ ದಂಡು ಸಿಂದಿ ಕುಡಿದೀತ ಬಲ್ಲಾಂಗ
ದಂಡಿನೊಳಗ ಒಬ್ಬ ಯಲ್ಲಣ್ಣ ಕುಡಿಯಲಿಲ್ಲಾಗ
ಏರ ಬಿಸಲಿಗಿ ರಾಯಣ್ಣನ ದಂಡಿಗಿ ನಿಸೆ ಆದೀತ ಭರಪೂರಾ
ಕಿತ್ತೂರ ಪ್ಯಾಟಿ ನಡು ಪ್ಯಾಟ್ಯಾಗ ಬಂದರಾ ಪೂರಾ
ಬುದ್ಧಿಯುಳ್ಳ ಯಲ್ಲಣ್ಣ ಎಲ್ಲರಿಗೂ ಬುದ್ಧಿ ಹೇಳಿದನಾ
ಸಂತಿ ಬೆದರೀತ ಯಣ್ಣಾ ಚೀರಬ್ಯಾಡ ಅಂತಾನವನಾ
ನಿಸೇದ ಒಳಗ ರಾಯಣ್ಣನ ದಂಡು ಕಿತ್ತೂರ ಕಿಲ್ಲೆ ಹತ್ತಿತಾಗ
ಅಷ್ಟರೊಳಗ ಇಂಗ್ರೇಜಿ ದಂಡು ಬೆನ್ನು ಹತ್ತಿತಾಗ
ಕಿಲ್ಲೇದ ಮ್ಯಾಗ ನಿಂತ ಗಜವೀರ ಸುತ್ತಮುತ್ತ ನೋಡಿದನಾಗ
ಸುತ್ತಮುತ್ತ ಇಂಗ್ರೇಜಿ ದಂಡು ನೋಡುತ್ತಿದ್ದಾನು ಗಜವೀರಾ
ನಿಸೇದ ಒಳಗ ಗಜವೀರಾ ತಾ ಹೇಳಿದಾನ ದಂಡಿಗಾಗ

ನಾವ ಅಷ್ಟೂರ ಹೋದರೆ ಈಡಾಗುವುದಿಲ್ಲ ಈಗ
ಒಬ್ಬೊಬ್ಬ ಹೋಗಿ ನೀವು ಲಡಾಯಿ ಮಾಡಿ ಬರ್‍ರೀಗ

ಇಷ್ಟ ಕೇಳಿ ಒಡ್ಡರ ಯಲ್ಲಣ್ಣ ಕಣ್ಣ ತುಂಬ ನೀರತಂದಾನಾಗ
ನಮ್ಮ ರಾಯಣ್ಣ ಇದ್ರ ಇಂತಾ ಹೊತ್ತ ಬರತಿದ್ದಿಲ್ಲೋ ನಮಗ
ಅದರಾಗಲಿ ರಾಯಣ್ಣನ ಸ್ಮರಿಸಿ ಮಾಡೂನ ಯುದ್ಧ ಈಗ
ಈಗ ಒಲ್ಲೆವಂದರ ಹ್ಯಾಂಗ ಬಿಡಾಕ ಬರತತಿ ನಮಗ
ಭೂಮಿ ತಾಯಿ ತೋರಲಿ ಶಕ್ತಿ ಬಿಷ್ಟವ್ವ ನೀಡಲಿ ಯುಕ್ತಿನೀಗ
ಕಿತ್ತೂರವರ ಕಣ್ಣ ತೆರದ ಕೊಡಲಿ ಮದ್ದ ಗುಂಡವನೀಗ
ನಾ ಮೊದಲ ಹೋಗತೇನಿ ತಮ್ಮಾ ಲಡಾಯಿ ನೋಡಿರಂತಾನಾಗ
ಅವರ ಸಂದ ಉಳಿದೀತ್ರೆಪ್ಪಾ ಕಿತ್ತೂರ ಕಿಲ್ಲೆದಾಗ
ದಾತರಿಲ್ಲದ ಜಗಳಾ ಯಾತಕಪ್ಪಾ ರಾಯಾ ನಿನಗ

ದಂಡಿಗೆ ಕೈಮುಗಿದು ಯಲ್ಲಣ್ಣ ಧೀನಂತ ಜಿಗದಿದ್ದನಾಗ
ಏಳನೂರಾಳು ಕಡಕೊಂತ ಯಲ್ಲಣ್ಣ ಹೋಗತಿದ್ದನಾಗ
ಕೈಯ ಸೋತ ಯಲ್ಲಣ್ಣ ಹಿಂದಕ ತಿರಗತಿದ್ದನಾಗ
ಇವನ ಒಬ್ಬನ ಹೊಡೆದರ ಗುಳದಾಳಿ ಹರಿತಂತಾರಾ
ಅಷ್ಟೊಂದು ಇಂಗ್ರೇಜಿ ದಂಡು ಏಕದಂ ಮುಗಿಬಿದ್ದಿತಾಗ
ಕಮ್ಮಾರ ಮೀರಾ ಧೀನಂತ ಜಿಗದಿದ್ದನಾಗ
ಎಂಟನೂರ ಇಂಗ್ರೇಜಿ ದಂಡ ಕಡಕೊಂತ ಹೋಗತಿದ್ದನಾಗ
ಕೈಸೋತ ಮೀರಾ ಧೀರಾ ಹಿಂದಕ ತಿರಿಗಿದನಾಗ
ಹಿಂದಕ ತಿರಗಿದ ಗಳಿಗ್ಗೆ ಏಕದಂ ಮುಗಿಬಿದ್ದಾರಾಗ
ಹಣಿ ಪಟ್ಟಿಗೆ ಗುಂಡ ಬಡದು ತಿರುಗಿ ಬಿದ್ದಾನ ಸೂರಾ
ಜಿಡ್ಡಿ ಮನಿ ಫಕೀರ ವೀರಾವೇಶದಿಂದ ಜಿಗಿದಾಡಕ್ಹತ್ತಿದ್ದನಾಗ
ಐದನೂರ ಇಂಗ್ರೇಜಿ ದಂಡು ಕಡಕೊಂತ ಹೋಗತಿದ್ದನಾಗ
ಕೈಸೋತ ಫಕೀರ ತಾನ ಹಿಂದಕ ತಿರಗಿದ್ದನಾಗ
ಹಿಂದಕ ತಿರಗಿದ ಗಳಿಗ್ಗೆ ಮುಗಿಬಿದ್ದರಾಗ
ಎದಿಗೆ ಗುಂಡು ಬಡಿದು ತಿರುಗಿದಾನ ಫಕೀರಾಗ
ರಜಪೂತ ರಾಮಸಿಂಗನ ಕುದರಿ ಕುಣದಾಡತೈತಿ ರಣದಾಗ
ರಾಮಸಿಂಗ ದಂಡಿನಕೂಡ ಲಡಾಯಿ ಮಾಡಾಕ್ಹತ್ಯಾನಾಗ
ಇಂಗ್ರೇಜಿ ದಂಡ ಸಿಟ್ಟಿಗೆದ್ದ ಮುಕ್ಕಿತ ರಾಮಸಿಂಗನಾಗ
ಹನ್ನೊಂದನೂರಾಳಾ ರಾಮಸಿಂಗಾ ಚಂಡ ಕಡಿದನಾಗ
ಐದನೂರ ಇಂಗ್ರೇಜಿ ದಂಡು ಕುದರಿ ತುಳದ ಕೊಂದಿತಾಗ

ಕೈಯ ಸೋತ ರಾಮಸಿಂಗ ಕುದರಿ ತಿರಿವ್ಯಾನ ಹಿಂದಕಾಗ
ಹಿಂದಕ ಹೊಳ್ಳಿದ ಕೂಡಲೆ ಏಕದಂ ಮುಗಿಬಿದ್ದರಾಗ
ಹಣಿ ಪಟ್ಟಿಗೆ ಗುಂಡು ಬಡಿದ ತಿರುಗಿ ಬಿದ್ದಾನ ರಾಮಸಿಂಗಾಗ
ಕುದರಿಗೆ ತೆಕ್ಕಿ ಬಿದ್ದು ಜೋತಾಡತಾನ ರಾಮಸಿಂಗಾಗ
ತಲಿಗೆ ಗುಂಡು ಬಡಿದು ಕುದರಿ ತಿರುಗ ಬಿದ್ದೀತ ರಣದಾಗ
ಮೊಗಲಾಯಿ ವೀರ ಸಿಂಹಗಳು ಏಕದಂ ಮುಗಿಬಿದ್ದಾವಾಗ
ಒಬ್ಬೊಬ್ಬನು ನೂರಾರು ಕಡಕೊಂತ ಕಾದಾಡಾತ ಹತ್ತಿದರಾ
ನಿಸೇದ ಒಳಗ ಹೋರಾಡ್ಯಾರ ವೀರರಾ ದಿಕ್ಕ ತಿಳಿದ್ಹಂಗಾ
ರಾಯಣ್ಣನ ದಂಡ ಸೋಲು ಲಕ್ಷಣ ಕಂಡೀತಾಗ
ಅಷ್ಟ ಹೊತ್ತಿಗೆ ಗಜವೀರನ ನಿಸೆ ಇಳಿದೀತ ಸಂಪೂರ್ಣ
ನಿಸೆದೊಳಗ ಅಪ್ಪಣೆ ಕೊಟ್ಟಿದ್ದೂ ಗೊತ್ತಿದ್ದಿಲ್ಲೋ ಗಜವೀರಾಗ
ತನ್ನ ದಂಡು ಎಲ್ಲೇತಿ ಅಂತ ನೋಡಿಕೊಂತಾನು ಗಜವೀರಾಗ
ಕಿಲ್ಲೆದೊಳಗ ನೋಡುವದರೊಳಗ ಕತ್ತಿ ಹಂದರ ಹಾಕಿತ್ತಾಗ
ವೀರ ಒಡ್ಡರ ಯಲ್ಲಣ್ಣ ನೆನಸಿ ಕಣ್ಣ ತುಂಬ ನೀರ ತಂದಾನಾಗ
ನನ್ನ ರಾಯಣ್ಣ ಕೇಳಿದರ ಏನ ಹೇಳಲಿ ಅಂತಾನಾಗ
ದುಃಖ ಸೈರಿಸಿ ಬಂಟಿ ತೈಯಾರಾದಾನು ಗಜವೀರಾಗ
ಮಂಡಿ ಊರಿ ಗಜವೀರಾಗ ಗುಂಡು ಜಡಿಯುತ್ತಿದ್ದಾನಾಗ
ಬಂದೂಕ ತಿರುವಿ ಹಿಡಿದು ಇಂಗ್ರೇಜಿ ದಂಡು ಹೊಡಿಯಾಕ ಹತ್ಯಾನಾಗ
ಒಬ್ಬ ಮನುಷ್ಯನ ತಗೊಂಡು ಮತ್ತೊಬ್ಬಗ ಹೊಡಿದಾನಾಗ
ಕಂಟಿಗೆ ಕಟ್ಟಿದ ಕುದುರೆಗಳನ್ನು ಗುದ್ದಿ ಕೊಂದಾನ ಟೊಂಕದಮ್ಯಾಗ
ಹನ್ನೆರಡ ಮಣದ ಚಿಲಕತ್ತಿನಂಗಿ ಇತ್ತೊ ಮೈಯೊಳಗ
ಇಂಗ್ರೇಜಿ ದಂಡಿಗೆಲ್ಲ ಹೊಡೆದು ಬಡೆದು ಕೊಂದಾನ ಗಜವೀರಾಗ
ಕತ್ತಿ ಹೊರಿಕಟ್ಟಿ ಇಟಿಗೊಂಡು ಹೊಂಟಾನು ತೆಲಿಮ್ಯಾಗ
ಒಡ್ಡರ ಯಲ್ಲಣ್ಣ ನೆನಸಿ ದುಃಖ ಮಾಡುತ್ತ ಹೊಂಟಾನಾಗ
ದವಡಾಸಿ ಬಂದಾನೋ ಗಜವೀರಾ ಬಾಳೇಕುಂದದ ಕೊಳ್ಳಕ್ಯಾಗ
ಕೊಳ್ಳಕ್ಕ ಬಂದು ಡೇರೇದ ಹಿಂದ ಸುಮ್ಮನ ಕುಂತಾನ ಗಜವೀರಾಗ
ಅಷ್ಟ ಹೊತ್ತಿಗೆ ರಾಯಣ್ಣಗ ಜಂಪ ಹತ್ತಿತ್ತೊ ಡೇರೇದಾಗ
ಗಜವಾರನ ಕಣ್ಣೀರ ಹೊರಸಿನ ಬುಡುಕ ಹರದಾವಾಗ
ರಾಯಣ್ಣನ ಕತ್ತಿ ಕನಸಿನಾಗ ಹೋಗಿ ಹೇಳ ಹತ್ತಿತಾಗ
ಕಿತ್ತೂರ ಪ್ಯಾಟ್ಯಾಗ ನಿನ್ನದಂಡು ಮಡಿದು ಹೋದಿತೆಂದಿತಾಗ
ಕೇಳಿ ರಾಯಪ್ಪ ತಾನು ಚಟ್ಟನೆ ಮೇಲಕ್ಕೆದ್ದಾನಾಗ
ಬಿಚ್ಚಗತ್ತಿ ಚನಬಸಪ್ಪ ತಮ್ಮಾ ಮುಂದಕ ಬಾರೋ ಈಗ
ನನ್ನ ಕನಸಿನಾಗ ಇಂಗ್ರೇಜಿ ದಂಡು ಬಂದಂತಾಗಿತ್ತಾಗ

ನನ್ನ ದಂಡು ಕಿತ್ತೂರ ಪಾಟ್ಯಾಗ ಸೋತಂಗಾಗಿತ್ತಾಗ

ಇಷ್ಟ ಅನ್ನುದು ಗಜವೀರಾ ಹಿಂದಕುಂತ ಕೇಳತಿದ್ದನಾಗ
ಹೌದು ಹೌದು ರಾಯಣ್ಣ ಸುಳ್ಳಲ್ಲ ಅಂತಾನಾಗ
ಕೇಳಿ ರಾಯಣ್ಣ ಕಣ್ಣ ತುಂಬ ನೀರತಂದಾನಾಗ
ಕೆಟ್ಟ ಹಬಸ್ಯಾ ಹೇಳಿದರ ಕೇಳಲಿಲ್ಲ ನನ್ನ ಮಾತಾಗ
ನನ್ನ ಯಲ್ಲಣ್ಣ ಎಲ್ಲಿ ಹುಡಕದರ ಸಿಕ್ಕಾನೀಗ
ನನ್ನೆದುರಿಗೆ ಲಢಾಯಿ ಮಾಡಿ ಎಮಡಿಯಲಿಲ್ಲೊ ತಮ್ಮಾ
ಯಲ್ಲಣ್ಣನ ನೆನಸಿ ರಾಯಣ್ಣ ಕಣ್ಣ ತುಂಬಾ ನೀರತಂದಾ
ಅವರ ಸಂದ ಉಳದೀತ್ರೆಪ್ಪಾ ಬಾಳೇಕುಂದದ ಕೊಳ್ಳದಾಗ
ದಾತರಿಲ್ಲದಂತಹ ಜಗಳ ಯಾತಕಪ್ಪ ರಾಯಾ ನಿನಗ

ರಾಯಣ್ಣ ದಂಡ ಮುಳಗೀತಂತ ಜಾಹಿರಾತೋ ದೇಶದಮ್ಯಾಗ
ನೇಗಿನಾಳದ ಯಂಕನಗೌಡ ತಯಾರ ಆಗಾಗ ಹತ್ಯಾನಾಗ
ಕುದಾನಪುರದ ನಿಂಗನಗೌಡನ ಚೆಣ್ಣಕ್ಕ ಕರಕೊಂತನಾನಾಗ
ಅವರಿಬ್ಬರು ಮಾತಾಡಿ ದವಡಾಸಿ ಬಂದಾರಾಗ
ಧಾರವಾಡಕ ಬಂದ ಕೇಳತಿದ್ದಾರ ಇಂಗ್ರೇಜಿ ಸಾಹೇಬಗಾಗ
ತುಡುಗ ರಾಯಣ್ಣನ ಹಿಡಕೊಟ್ಟರ ಏನ ಕೊಡತೀರಂತಾರಾಗ
ಏಳನೂರ ಊರ ಇನಾಮ ಹಾಕಿ ಕೊಡತೀನಿ ನಿಮಗ
ಇಷ್ಟ ಕೇಳಿ ವಚನ ತಕ್ಕೊಂಡು ಹಿಂದಕ ತಿರುಗಿದರಾಗ
ರಾಯಣ್ಣನ ಹುಡುಕೂತ ನಡದಾರಾಗ ಗೌಡರಾ
ಇತ್ತ ಕಡೆಗೆ ರಾಯಣ್ಣಗ ಚನ್ನಮ್ಮ ಚೀಟಿ ಕಳಸಿದಳಾಗ
ಬರಬೇಕಂತ ಕಿತ್ತೂರಿಗೆ ಹೊಂಟಾನೋ ಬಂಟನಾಗ
ಹತ್ಯಾನ ತನ್ನ ಬತ್ತಲೆ ಕುದುರಿ ಕತ್ತಿಯ ಸಹಿತನಾಗ
ಉಳದ ರಾಯಣ್ಣ ಬಂಟರ ಹತ್ಯಾರವನ ಬೆನ್ನ ಹಿಂದಾಗ
ಅವರ ಹಂತೇಲಿ ಕೂಡೇತಿ ಲಿಕ್ಕವಿಲ್ಲದ ದಂಡಾಗ
ಚನ್ನಮ್ಮಗ ಆಗೇತಿ ಬಹು ಹರ್ಷ ಬಂಟರನ ನೋಡಿ ಆಗ
ಸುತ್ತ-ಮುತ್ತ ಬೆನ್ನ ಹತ್ತೇತಿ ಇಂಗ್ರೇಜಿನ ದಂಡಾಗ
ಮಲ್ಲಸರ್ಜಾನ ದುಃಖ ಬಂದ ಹೋದೀತ ಮನಸಿನಾಗ
ರಾಯಣ್ಣ ಚಿಂತೀಸಬೇಡ ತಾಯಿ ಈ ಲಢಾಯಿದಾಗ
ಎಲ್ಲಾರು ಒಟ್ಟಾಗಿ ಫಿರಂಗ್ಯಾರನ ಹಾಕೂನು ದೇಶದ ಹೊರಗ
ರಾಯಣ್ಣನ ಮಾತಿಗೆ ಚನ್ನಮ ಆದಾಳ ದುರ್ಗಾದೇವಿಯಾಗ
ನೆನಸಿ ಮಲ್ಲಸರ್ಜಾನ ಕತ್ತಿ ಹಿಡಿದಾಳ ಕೈಯಾಗ

ಊದಿಸ್ಯಾರ ರಣಕಹಳಿ ಬಾರಿಸ್ಯಾರ ನಗಾರಿಯಾಗ
ಭದ್ರಪಡಿಸ್ಯಾರ ಕೋಟೆಯ ಬಾಗಿಲಗಳನಾಗ
ತಯಾರಾದೀತ ಮದ್ದುಗುಂಡು ಆಗಿಂದಾಗ ಕೋಟ್ಯಾಗ
ದಂಡ ನಿಂತೀತ ಕೋಟಿ ಒಳಗ ತಯಾರಾಗಾಗಿ
ಒಮ್ಮಿಲೆ ತಗದಾರೋ ಕೋಟಿಯ ಬಾಗಿಲಗಳನಾಗ
ಪಶ್ಚಿಮ ದಿಕ್ಕಿಗಿ ರಾಯಣ್ಣ ಸವರ್‍ಯಾಣ ವೈರಿಯ ಚಂಡಗಳನಾಗ
ಉತ್ತರ ದಿಕ್ಕಿಗಿ ರಾಯಣ್ಣ ಸವರ್‍ಯಾಣ ವೈರಿಯ ಚಂಜಗಳನಾಗ
ಉತ್ತರ ದಿಕ್ಕಿಗಿ ಚನ್ನಮ್ಮ ನಿಂತಾಳ ದುರ್ಗಿಯಾಗಿ ಆಗ
ಫಿರಂಗ್ಯಾರ ಹೆಣಗಳಬಿದ್ದಾವ ಬಣವಿಯಂಗ ಆಗ
ಕುದರಿ ಬಿದ್ದಾವ ಒಂದರಮ್ಯಾಲ ಒಂದು ದಿಕ್ಕಿಲ್ಲದಂಗ
ರಕ್ತ ಹರಿಯಿತೋ ಮುಂಗಾರಿ ಮಂ ಹರದಂಗ
ಕೋಟಿಯಿಂದ ತೋಪಿನಗುಂಡ ಹಾರಿದಾವ ಸಿಡ್ಲಮಿಂಚಿನಂಗ
ಥ್ಯಾಕರೆ ಹೇಳತಾನ ಅಂಜಿ ಸೈನಿಕರಿಗೆ ಹಿಂದ ಸರಿಯದಂಗ
ಸಿಂಹ ಗರ್ಜಿಸಿದಂಗ ರಾಯಣ್ಣ ಗರ್ಜಿಸಿದಾನಾಗ ರಣದಾಗ
ದುರ್ಗಿಯಾಗಿ ಕೂಗಿ ಹೇಳಿದಾಳ ಚನ್ನಮ್ಮ ತನ್ನ ಬಂಟರಿಗಾಗ
ರಾಯಣ್ಣ ಚನ್ನಮ್ಮರ ಬಂಟರು ಹೋರಾಡ್ಯಾರ ಸಂಜೀತನಕ
ರಾಯಣ್ಣ ಹೇಳತಾನ ಕಲಿಗಳಿಗೆ ಗೆಲವು ನಮ್ಮದೀಗ
ಹಾರಿಸಿರಿ ಇಂಗ್ರೇಜಿಯರಿಗೆ ತೋಪಗಳ ಬಿಡದೀಗ
ಕ್ಷಣ ಕ್ಷಣಕ ರಾಯಣ್ಣನ ಮಾತಿಗೆ ಕಾವೇರಿತು ರಣಕಾಗ
ಕಿತ್ತೂರ ವೀರರು ಗುರಿಯಿಟ್ಟಾರ ತೋಪಿಂದ ಥ್ಯಾಕರೆಗಾಗ
ಡಂ ಎನ್ನುವದರೊಳಗ ಥ್ಯಾಖರೆ ಬಿದ್ದಾನೋ ಭೂಮಿಯ ಮ್ಯಾಗ
ಅವನ ಪ್ರಾಣಪಕ್ಷಿ ಹಾರಿ ಹೋಯಿತ ಗೊತ್ತಿಲ್ಲದಂಗ
ಉಳಿದ ಪಿರಂಗ್ಯಾರ ಸೈನ್ಯ ಓಡಿತೋ ಜೀವದಾಸೆಯಿಂದಾಗ
ಇತ್ತ ಕಿತ್ತೂರ ಕೋಟಿಯೊಳಗ ಮೊಳಗಿತು ಜಯಭೇರಿಯಾಗ

ಚನ್ನಮ್ಮ ಹರಿಸ್ಯಾಳ ಕತ್ತೂರ ಪುತ್ರರನಾಗ
ಕಿತ್ತೂರ ವೀರರಿಗೆ ಮಾನಸನ್ಮಾನ ಮಾಡಿದಳಾಗ
ರಾಯಣ್ಣಗ ಹೇಳತಾಳ ಕಿತ್ತೂರ ಬಿಡಬ್ಯಾಡ ರಾಯಣ್ಣಾ ಈಗ
ದೇಶದ ಭವಿಷ್ಯ ನಿಂತತಿ ನಿನ್ನ ತೆಲಿಯಮ್ಯಾಲೀಗ
ರಾಯಣ್ಣ ಹೇಳತಾನ ಹೋಗಿ ಬರತೀನಿ ತಾಯಿ ತಿಗಗ
ಚನ್ನಮ್ಮನಿಂದ ವಚನ ಪಡದ ಹೊಂಟಾನ ನಡುರಾತ್ರ್ಯಾಗ
ಕುದುರಿ ಓಡಿಸುತ ಹೋಗ್ಯಾನ ಬಾಳೇಕುಂದದ ಕೊಳದಾಗ
ಅವರ ಸಂದ ಉಳದೀತ್ರೆಪ್ಪಾ ಬಾಳೇಕುಂದದ ಕೊಳದಾಗ

ದಾತರಿಲ್ಲದಂತಹ ಜಗಳ ಯಾತಕಪ್ಪ ರಾಯಾ ನಿನಗ
ಬೆಳಗಾಂವ ಜಿಲ್ಲಾ ಪೈಕಿ.....೧ಲನೆಯ ಚೌಕ
ರಾಯಣ್ಣ ದಣದ ಮಲಿಗ್ಯಾನ ಹೊರಸಮ್ಯಾಲ ಡೇರೇದೊಳಗ
ಹೊತ್ತ ಪುರುದುರೊಳಗ ಬಂದು ಗೌಡರು ಕುಂತ ಹೇಳತಾರ ರಾಯಣ್ಣಾಗ
ನಿನ್ನ ಮ್ಯಾಗ ಏಟೇಟು ಎರಡ ಇಲ್ಲೊ ಯಣ್ಣ ಈಗ
ಘಟ್ಟದ ಕೆಳಗಿನ ಹುಡುಗರನ ತಂದ ಕೊಡತೀವಿ ನಿನಗ
ಕೇಳಿ ರಾಯಣ್ಣ ಹಿಗ್ಗಿದಾನ ತನ್ನ ಮನದೊಳಗ ಆಗಿಂದಾಗ
ಸೈನ್ಯ ಕೂಡುಸುದುಕ ಘಟ್ಟದ ಕೆಳಗ ಬಂದಾನ ಹಿಂಬಾಲಾಗ
ಗೌಡ್ರ ಹೇಳತಾರ ವ್ಯಾಳೆ ಆಗತೈತಿ ಜಳಕಾ ಮಾಡೋಣಂತಾರಾಗ
ಮಳ್ಳತನಕ ಬಿದ್ದು ರಾಯಣ್ಣ ಜಳಕಾ ಮಾಡಿರಿ ಅಂತಾನಾಗ
ನೇಗಿನಾಳಗೌಡ ಕೇಳಿದಾನು ಯಾಕೋ ರಾಯಣ್ಣ ಜಳಕಾ ಮಾಡುದುಲ್ಲೇನೀಗ
ಚಿಂತಿ ಒಳಗ ರಾಯಣ್ಣ ತಾನು ಮೇಲಕ್ಕೆದ್ದಿದ್ದಾನಾಗ
ಡೌರಿ ಬೆಣಚಿ ಹಳ್ಳದ ಬಂಟಾ ಅರವಿ ತಗಿತಿದ್ದಾನಾತ
ಬಾಯೊಳಗ ಕತ್ತಿ ಹಿಡಿದು ಜಳಕಾ ಮಾಡಾಕ್ಹತ್ಯಾನಾಗ
ನೇಗಿನಾಳ ಗೌಡಾ ಕೇಳ್ಯಾನು ರಾಯಣ್ಣ ಭರವಸಿ ಇಲ್ಲೇನೋ ನಿನಗ
ಹಂಗಸೂರ ಜಳಕಾ ಮಾಡುವಾಗ ಹಿಡಿತಾರ ಗುಳದಾಳಿ ಬಾಯಾಗ
ಹಂಗ ನೀನು ಕತ್ತಿ ಹಿಡಕೊಂಡೆಲ್ಲೊ ಬಾಯಾಗ ಈಸುವಾಗ
ಕೇಳಿ ರಾಯಣ್ಣ ಬಾಯಾನ ಕತ್ತಿ ಕೊಡತಾನ ಗೌಡರಿಗಾಗ
ಕತ್ತಿ ಕೊಟ್ಟ ಬಳಿಕ ಗೌಡ ಕುಸಿಯಾದಾನ ಮನಸಿನ್ಯಾಗ
ಜಳಕಾಮಾಡಿ ರಾಯಣ್ಣ ಚೊಣ್ಣಾ ತೊಡಕಾ ಹತ್ಯಾನಾಗ
ಅಷ್ಟೊತ್ತಿಗೆ ಸಿಳ್ಳನೆ ಸೀಟಿ ಹೊಡೆದು ಮುಗಿಬಿದ್ದಾರ ಬಂಟಗಾಗ
ಬಟ್ಟ ಬರೇ ಮೈಲ್ಯೆ ರಾಯಣ್ಣನ ಬಿಗಿ ಬಿಗಿದು ಕಟ್ಟತಿದ್ದರಾಗ
ಅಷ್ಟಹೊತ್ತಿಗೆ ಗೌಡರು ತಾವು ಮಸಲತ್ತು ಮಾಡಿ ಕುಂತಾರಾಗ
ರಾಯಣ್ಣನ ಕೊರಳ ಮ್ಯಾ ಇಟ್ಟಾರ ಹತಿಯಾರ ಆಗಿಂದಾಗ
ಆತಗೊಂತ ಗಜವೀರಾ ತಾನು ಬೆನ್ನ ಹತ್ಯಾನು ರಾಯಣ್ಣಾಗಾಗ
ಹೊತ್ತ ತಂದಾರ ರಾಯಣ್ಣನ ಹೊರಸಲ ಮ್ಯಾಗ ಧಾರವಾಡಕ
ಇಂಗ್ರೇಜಿ ಸಾಹೇಬನ ಮುಂದೆ ಹೇಳತಾರ ರಾಯಣ್ಣನ ಹಿಡಿದ ಕೌತುಕ
ಹೆಬ್ಬುಲಿ ಬಿದ್ದಾಂಗ ಬಿದ್ದಾನೋ ರಾಯಣ್ಣ ಹೊರಸಲಮ್ಯಾಗ
ಸಾಹೇಬ ಹೇಳತಾನ ಗೌಡರಿಗೆ ಗಲ್ಲ ಹಾಕರಿ ನಂದಗಡದಾಗ
ಇಂಗ್ರೇಜಿ ಸಿಪಾಯಿಗಳು ಹೊತ್ತ ಓದಾರ ನಂದಗಡಕ
ಗಜವೀರ ತಾನು ಮತ್ತ ಕೇಳತಾನ ರಾಯಣ್ಣಾಗಾಗ
ಈಗ ಅಪ್ಪಣಿ ಕೊಟ್ಟರ ಯಣ್ಣಾ ಗುದ್ದಿ ಕೊಲ್ಲತೀನಿ ನೆತ್ತಿಮ್ಯಾಗ
ಇಂದಿಗೆ ತೀರಿತು ನಮ್ಮ ಋಣ ದೇಶಕೀಗ ಗಜವೀರಾ

ನೀ ಚಿಂತಿ ಮಾಡಬ್ಯಾಡೋ ನನ್ನ ಸಾವಿಗೆ ತಮ್ಮಾ ಈಗಾ
ಪಿರಂಗ್ಯಾರನ ಹೊಡೆಯುದಕ ಹುಟ್ಟಿತಾರೋ ಮನಿ ಮನಿಗಿ ವೀರರಾ
ಇಷ್ಟು ಹೇಳಿ ಗೌಡರಿಗೆ ಹೇಳತಾನ ದೇಶದ್ರೋಹಿಗಲು ನೀವೀಗಾ
ನಿಮ್ಮನ ಮುಟ್ಟದಿಲ್ಲೋ ಗಾಳಿ, ಬೆಂಕಿ, ನೀರ, ನೆಲಾ, ಪ್ರಾಣಿ ಪಕ್ಷಿಗಳಾ
ನಿಮಗ ಜಾಗವಿಲ್ಲೋ ಸ್ವರ್ಗದಲ್ಲಿ ಸತ್ತಮ್ಯಾಗ ಇರುದಕಾ
ಆಗ ರಾಯಣ್ಣನ ಗಲ್ಲಕ ಕೊಡತಾರ ಗಡದಾಗ
ತನ್ನ ಬಂದೂಕ ಹೊಳಿಸಿ ಎದಿಗಿ ಹೊಡಕೊಂಡಾನಾಗ ಗಜವೀರಾಗ
ಬಿಚ್ಚಗತ್ತಿ ಚನಬಸಪ್ಪ ಸೇವಾ ಮಾಡಾಕ ಬಂದಾನಾಗ
ಒಣಾದೊಂದು ಆಲದ ಟೊಂಗಿ ಅವನ ಗೋರಿ ಮ್ಯಾಗ ಊರ್‍ಯಾನಾಗ
ಸಂಗವಳ್ಳಿ ಮೋದಿನ ಸಾಬ ಸಾರಿ ಹೇಳತಾನ ದೇಶದಮ್ಯಾಗ
ಅವರ ಸಂದ ಮುಗದೀತ್ರೆಪ್ಪಾ ನಂದಗಡದ ಗಿಡದ ಬುಡದಾಗ
ದಾತರಿಲ್ಲದಂತಹ ಜಗಳ ಯಾತಕಪ್ಪ ರಾಯಾ ನಿನಗ

||ಬೆಳಗಾವಂ ಜಿಲ್ಲಾ ಪೈಕಿ.....೯ನೆಯ ಚೌಕ||

ರಾಯಣ್ಣನ ದಂಗೆಯ ವಿವರಗಳನ್ನು ಈ ಲಾವಣಿ ಕ್ರಮಬದ್ಧವಾಗಿ ಹೇಳುತ್ತದೆ. 'ಹಿತ್ತಲ ಕಾಸಿ ಸುತ್ತೇಳ ಸಮದುರ ಮತ್ತು ನಮ್ಮ ನಾಡವಳಗ ಹಿಂತಾವರು ಯಾರ್‍ಯಾರು ಬಂದಿದ್ದಿಲ್ಲ' ಎಂದು ಹೇಳುವ ಸುಬೇದಾರನ ಮಾತಿನಿಂದ ರಾಯಣ್ಣನು ಎಂತಹ ಕ್ರಾಂತಿಕಾರಿಯಾಗಿದ್ದನೆಂಬುದು ವಿದಿತವಾಗುತ್ತದೆ. ಈತನ ಉಗ್ರಗಾಮಿತ್ವದ ಬಗೆಗೆ ಸುಬೇದಾರನು ಬರೆದಿದ್ದ ಪತ್ರವನನು 'ಸಾಹೇಬನು ಓದಿಕೊಂಡು ಟೊಪ್ಪಿಗೆವೊಗೆದು ಮುಂಗೈ ಕಡಿದು ಶಿಟ್ಟಿನಿಂದ ಹಲ್ಲು' ಕಡಿಯುತಾನೆ. ಅಲ್ಲಿ ಬ್ರಿಟಿಷ್ ಅಧಿಕಾರಿಗಳು ಪ್ರತಿಭಟನೆಯ, ದಂಗೆಯ ಹಿನ್ನೆಲೆಗಳನ್ನು ತಿಳಿಯುವ ಗೋಜಿಗೆ ಹೋಗುವುದಿಲ್ಲ. ಆದರೆ ರಾಯಣ್ಣನಿಗೆ ಗಲ್ಲು ವಿಧಿಸಿದವನೇ ಆತನನ್ನು ಸಾಯಿಸಬಾರದಿತ್ತು ಎಂದು ಮರುಕು ಪಡುತ್ತಾನೆ. ತಾನು ಮಾಡಿದಂತಹ ಆ ತಪ್ಪನ್ನು ಆತ ಶವಸಂಸ್ಕಾರಕ್ಕೆಹತ್ತು ರೂಪಾಯಿ ಕೊಡುವುದರ ಮೂಲಕ ನಿವಾರಿಸಿಕೊಳ್ಳುತ್ತಾನೆ. ಆತನ ಸಮಾಧಿಯ ಮೇಲೆ ಜನ ಗಿಡಗಳನ್ನು ನೆಡುತ್ತಾರೆ. ಅವು ಬೆಳೆದು ತೊಟ್ಟಿಲುಗಳಾಗಿ ಜೋತಾಡುತ್ತಿವೆ. ಈ ಸತ್ಯವಂತನಿಗೆ ನಡೆದುಕೊಂಡವರಿಗೆ ಪುತ್ರ ಸಂತಾನವಾಗುತ್ತೆಂದು ಭಾವಿಸಿದ ಜನ ಕೈ ಮುಗಿಯುತ್ತಾರೆ. ಲಾವಣಿಯ ಕೊನೆಯಲ್ಲಿ ಬರುವ ಈ ನಂಬಿಕೆಯನ್ನು ಈ ವಿವರಣೆ ಸಮರ್ಥಿಸುತ್ತದೆ.

### ೪.೧. ಸಾಮಾಜಿಕ ಸಂಬಂಧಗಳು

ಕಥನಗೀತೆಗಳ ಸಾಮಾಜಿಕ ಸಂಬಂಧವೆಂದರೆ ಇಲ್ಲಿ ಸಮುದಾಯಗಳು ತಮ್ಮೊಳಗೆ ಯಾವ ರೀತಿಯ ಕೊಡು-ಕೊಳೆಗಳನ್ನು ಹೊಂದಿದ್ದವು ಮತ್ತು ಹೊಂದಿವೆ ಎನ್ನುವುದೇ ಆಗಿದೆ. ಅಂದರೆ, ಭಾರತವನ್ನು ಬ್ರಿಟೀಷ್ ಸರ್ಕಾರ ಸ್ವಾಧೀನ ಪಡಿಸಿಕೊಂಡ ನಂತರದ ಅತಿ ಮುಖ್ಯ ಪರಿಣಾಮವೆಂದರೆ ಎಲ್ಲಾ ಪಾರಂಪರಿಕ ಜಾತಿ ವರ್ಗಗಳನ್ನು ಮೀರಿ ಸೃಷ್ಟಿಯಾದ ಹೊಸ ಸಾಮಾಜಿಕ ವರ್ಗಗಳು, ದಕ್ಷಿಣ ಆರತದ ಕೆಲವು

ಪ್ರದೇಶಗಳಲ್ಲಿ ಮತ್ತು ರಾಜ್ಯಗಳಲ್ಲಿ ಪಾರಂಪರಿಕವಾಗಿ ಕೆಲವು ಪಾಳೆಯಗಾರರು ಮತ್ತು ಆಳರಸರು ಮುಂದುವರೆದರಾದರೂ, ಸಮಾಜದಲ್ಲಿ ಅವರು ನಿರ್ವಹಿಸುವ ಪಾತ್ರದಲ್ಲಿ ಅತ್ಯದ್ಭುತವಾದ ಬದಲಾವಣೆಯಾಯಿತು. ಬ್ರಿಟೀಷ್ ಪೂರ್ವದ ಯುಗದಲ್ಲಿ ಇದ್ದ ರೀತಿಯಲ್ಲಿ ಅವರು ಏಕಾಧಿಪತಿಗಳಾಗಿರಲಿಲ್ಲ. ಯುದ್ಧ ನಿರತರಾಗಿದ್ದ ಪಾಳೆಯಗಾರರು ಒಂದೋ ಅವನತಿ ಹೊಂದಿದ್ದರು, ಇಲ್ಲವೇ ಹೊಸ ಸನ್ನಿವೇಶದಲ್ಲಿ ಜವಿನ್ದಾರರು ಅಥವಾ ರಾಜರಾಗಿ ಮಾರ್ಪಾಟು ಹೊಂದಿದ್ದರು. ಸ್ವಾತಂತ್ರ್ಯದ ಮಹತ್ವಾಕಾಂಕ್ಷಿಯನ್ನು ಅವರು ಹೊಂದುವ ಪರಿಸ್ಥಿತಿಯಲ್ಲಿರಲಿಲ್ಲ. ತಮ್ಮ ಬದಲಾದ ಪರಿಸ್ಥಿತಿಯನ್ನು ಅವರು ವಸ್ತು ನಿಷ್ಠವಾಗಿ ಇಷ್ಟಪಡಲು ಪ್ರಾರಂಭಿಸಿದ್ದರಲ್ಲದೆ ಬ್ರಿಟೀಷ್ ಸಾಮ್ರಾಜ್ಯಶಾಹಿಯನ್ನು ಬಿಟ್ಟರೆ ತಮಗೆ ಉಳಿಗಾಲವೇ ಇಲ್ಲ ಎಂದು ನಂಬತೊಡಗಿದ್ದರು." (ಡಾ.ಎಸ್.ಚಂದ್ರಶೇಖರ್, ದಕ್ಷಿಣಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪು:೨೦) ಅಲ್ಲದೆ "ತಮ್ಮ ಹಿತರಕ್ಷಣೆಗಾಗಿ ಇದು ಅನಿವಾರ್ಯವಾದ ಮಾರ್ಗವಾಯಿತೆಂದು ಪ್ರಕಟ ಪಡಿಸುತ್ತಾ ಸಾಮಾಜಿಕ, ಆರ್ಥಿಕ, ವೃತ್ತಿಪರ ಗುಂಪುಗಳು ಜಾತೀಯ ಧಾರ್ಮಿಕ ಹಾಗೂ ವೃತ್ತಿಪರ ಸಂಘಟನೆಗಳನ್ನು ರಚಿಸಿಕೊಂಡವು. ಅಷ್ಟರಿಂದಲೇ ಗ್ರಾಮಾಂತರ ಪ್ರದೇಶದಲ್ಲಿ ಇಡಿಯಾಗಿ ಎಲ್ಲ ಸಮುದಾಯಗಳನ್ನು ಬಡಿದೆಬ್ಬಿಸಲಾಯಿತು, ಎಂದರ್ಥವಲ್ಲ. ಆದರೆ ಸ್ವಲ್ಪ ಮಟ್ಟಿನ ಜನರನ್ನು ಬಡಿದೆಬ್ಬಿಸಲು ಸಾಧ್ಯಾವಾಯಿತು ಅವರು ಪ್ರಭಾವೀ ಜನಗಳ ನೇತೃತ್ವದಲ್ಲಿ ಜಾತಿ, ಇತ್ಯಾದಿಗಳ ಆಧಾರಗಳ ಮೇಲೆ ಸಂಘಟಿತರಾದರು" (ಅದೇ, ಪು:೭೩) ಈ ಎಲ್ಲಾ ಅಂಶಗಳಿಗಿಂತ ಮುಖ್ಯವಾಗಿ ಸಮಾಜದಲ್ಲಿರುವ ಜನಪದ ಗಾಯಕರು, ಲಾವಣಿಕಾರರೂ ಕೂಡ ಜನರು ತಮ್ಮ ಇಚ್ಛೆಗನುಸಾರವಾಗಿ ಸಂಘಟಿತರಾಗಲು ಕಾರಣವಾದರು. ಇದರ ಜೊತೆ ಜೊತೆಯಲ್ಲೇ ದಕ್ಷಿಣ ಭಾರತದಲ್ಲಿ ಬ್ರಾಹ್ಮಣೇತರ ಸಾಮಾಜಿಕ ಪ್ರಜಾಸತ್ತಾತ್ಮಕ ಚಳುವಳಿಯು ಕೂಡ ಬೆಳೆಯುತ್ತಿದ್ದು ಈ ಚಳುವಳಿಯು ತಿಲಕರ ಪ್ರಭಾವಕ್ಕೆ ಒಳಗಾಗದಿದ್ದುದು ಆಶ್ಚರ್ಯಕರವಾಗಿದೆ. ಇದನ್ನು ಯಾರೂ ಅರ್ಥ ಮಾಡಿಕೊಳ್ಳುವವರು ಇರಲಿಲ್ಲವೆಂದಲ್ಲ, ಅನೇಕರಿಗೆ ಇದು ಸಾಧ್ಯವಿರಲಿಲ್ಲವಾದರೂ, ಸಮುದಾಯಗಳು ಅನೇಕ ಪರಸ್ಪರ ವಿರೋಧಧ ತಿಳುವಳಿಕೆಗಳ ಮಧ್ಯೆ ಆ ಬೆಳವಣಿಗೆಗಳನ್ನು ಮನಗಾಣಬಲ್ಲವಾಗಿದ್ದವು. ಆದರೆ "ರೂಢಿಯಲ್ಲಿರುವ ಸಾಮಾಜಿಕ ಮನೋಧರ್ಮವನ್ನು ಛಿದ್ರಗೊಳಿಸುವ ಕೇವಲ ಪಾವಿತ್ರ್ಯ ನಾಶವು ನೇತ್ಯಾತ್ಮಕವಾದ ಅಥವಾ ಹೊಣೆಗಾರಿಕೆಯನ್ನು ಹೊರದ ವಿರೋಧ ಮಾತ್ರ ಆಗುತ್ತದೆ. ಇದು ಇಲ್ಲವಾದ ಮೇಲೆ 'ಮತ್ತೊಂದು' ಹೇಗಿರಬೇಕೆಂಬ ಕಟ್ಟುವಿಕೆಯ ಬಗ್ಗೆ ಖಚಿತ ಚಿಂತನೆ ಇಲ್ಲದಾಗ ನಾಶದ ಸಿಟ್ಟು ಸಿನಿಕತನವಾಗುತ್ತದೆ. ತೆಲುಗಿನ ದಿಗಂಬರ ಕಾವ್ಯದಲ್ಲಿ ಪ್ರತಿಸಂಸ್ಕೃತಿಯ ನಿರ್ಮಾಣದ ಇಂಥ ಚಿಂತನೆಯಿರಲಿಲ್ಲ, ಕಪ್ಪು ಚಳುವಳಿಯ ಮಹತ್ವವಿರುವುದೇ ಜನಾಂಗೀಯ ಸಂಸ್ಕೃತಿಯ ನಿರಾಕರಣೆಯ ನಂತರ ಕಪ್ಪು ಸಂಸ್ಕೃತಿಯನ್ನು ಗಟ್ಟಿಯಾಗಿ ಸೈದ್ಧಾಂತಿಕ ನೆಲೆಯಲ್ಲಿ ಜನಪರವಾಗಿ ರೂಪಿಸುವುದರಲ್ಲಿ, ಆಳುವ ಸಂಸ್ಕೃತಿ ಹೀನವಾಗಿಸಿದ ದುಡಿವ ಸಂಸ್ಕೃತಿಯ ಸಂಕೇತಗಳೆಲ್ಲವನ್ನು ಅದು ಸೈದ್ಧಾಂತಿಕವಾಗಿಯೇ ಘನತೆಗೊಳಪಡಿಸಿತು." (ಡಾ.ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಪು:೧೫) ಹಾಗೆನೇ ಸಮಾಜವನ್ನು

ಅರ್ಥಮಾಡಿಕೊಳ್ಳುವುದರಲ್ಲಿ, ಹೋರಾಟವನ್ನು ರೂಪಿಸುವಲ್ಲಿ ಮತ್ತು ರಾಜ್ಯ ಪ್ರಭುತ್ವದ ಸ್ವರೂಪವನ್ನು ಗುರುತಿಸುವಲ್ಲಿ ವರ್ಗಗಳಲ್ಲಿ ಆಧರಿಸಿದ ವಿಶ್ಲೇಷಣೆಗೆ ಮಹತ್ವದ ಸ್ಥಾನವಿದೆ." (ಜಿ.ರಾಮಕೃಷ್ಣ, ಮಧ್ಯಮ ವರ್ಗ:ಒಂದು ಚಿಂತನೆ, ಪು:೧೧೦)

ಇತಿಹಾಸದಲ್ಲಿ ಆಗಿ ಹೋದ ಯಾವುದೇ ರಾಜನೊಬ್ಬನ ಆಳ್ವಿಕೆ, ಕೆರೆಗೆ ಬಲಿಯಾಗುವಿಕೆ, ಚಿತೆಗೇರುವುದು, ಮುಂತಾದ ಅಂಶಗಳನ್ನೆಲ್ಲಾ ಜನಪದರು ತಮ್ಮ ಅನುಭವದ ರೂಢಿಗಳನ್ನಾಗಿ ಮಾರ್ಪಡಿಸಿಕೊಂಡು ಅವುಗಳನ್ನು ಕಥನ ಗೀತೆಯ ರೂಪದಲ್ಲಿ ಪ್ರಕಟಪಡಿಸುತ್ತಾ ಹೋಗುತ್ತಾರೆ. ಅದು ವ್ಯಷ್ಠಿ ನೆಲೆಯಿಂದ ಸಮಷ್ಠಿ ನೆಲೆಯತ್ತ ಚಲಿಸುತ್ತದೆ. ಇದು ಕ್ರಮೇಣ ಪರಂಪರೆಯಲ್ಲಿ ಬಾಯಿಂದ ಬಾಯಿಗೆ ಹರಿದು ಬರುವುದರಿಂದ ಕಾಲಕ್ರಮೇಣ ಅನೇಕ ರೀತಿಯ ಮಾರ್ಪಾಟುಗಳಿಗೆ ಒಳಗಾಯಿತು. ಈ ಮಾರ್ಪಾಟಾಗುವಿಕೆ ಸಮುದಾಯಗಳಿಗೆ ಅನಿವಾರ್ಯದ ಸ್ಥಿತಿಯಾಗಿದೆ. ಹೀಗೆ ಅನೇಕ ರೀತಿಯ ಮಾರ್ಪಾಟುಗಳೊಂದಿಗೆ ಕಥನ ಗೀತೆಗಳ ನಾಯಕರು ಅಥವಾ ನಾಯಕಿಯರುಗಳು ದೈವತ್ವಕ್ಕೇರಿ ಇತಿಹಾಸ ಸೇರುತ್ತಾರೆ. ಸಮಾಜದಲ್ಲಿ ರಾಜ ಮಹಾರಾಜ ಮೊದಲಾದ ಪ್ರತಿಷ್ಠಿತ ಪೀಠಗಳನ್ನು ಅಲಂಕರಿಸಿದವರ ಕತೆಗಳನ್ನು ಸಂಗತಿಗಳನ್ನು ಆಸ್ಥಾನಿಕರಿಂದ ಬರೆಸುವುದಾಗಲೀ ಬರೆಯುವುದಾಗಲೀ ಅಪರೂಪವೆಂದೇನೂ ಅಲ್ಲ. ಆದರೆ ಅಂತಹವರ ಅಥವಾ ಅಂತಹ ಸಂಗತಿಗಳ ಚರಿತ್ರೆ ಬರೆಯುವವರ ಅಸಡ್ಡೆಗೆ, ನಿರ್ಲಕ್ಷ್ಯಕ್ಕೆ ಗುರಿಯಾದ ಬದುಕಿನ ಹಲವಾರು ಬಾಬತ್ತುಗಳನ್ನು ಜಾನಪದ ಒದಗಿಸುತ್ತಾ ಬಂದಿದೆ ಎಂಬುದಂತೂ ಸತ್ಯ, ಈ ದೃಷ್ಟಿಯಿಂದ ಅಂತಹ ಬದುಕಿನ ಅರಿವಿಗಾಗಿ ಅನಿವಾರ್ಯವಾಗಿ ಇತಿಹಾಸಕಾರನು ಜಾನಪದದ ಅಧ್ಯಯನಕ್ಕೆ ತೊಡಗುವಂತಾಗುತ್ತದೆ. ಆಧುನಿಕ ಸಂದರ್ಭದಲ್ಲಿ, ಬರಹ ರೂಪಕ್ಕಿಳಿದಿರುವ ಜನಪದ ಕಥನ ಗೀತೆಗಳಲ್ಲಿ ಇತಿಹಾಸಕ್ಕೆ ಸಂಬಂಧಿಸಿದ ಜನಪದ ಗೀತೆಗಳು ಕಡಿಮೆ, ರಾಜ ಮಹಾರಾಜರನ್ನು ಕುರಿತಾಗಲೀ ಚಕ್ರವರ್ತಿಗಳನ್ನು ಕುರಿತಾಗಲೀ ಜನಪದ ಗೀತೆಗಳು ಹುಟ್ಟಿಕೊಂಡಿರುವುದು ವಿರಳ, ಜನಪದ ಕಾವ್ಯ ಪ್ರಪಂಚದಲ್ಲಿ ಚಾರಿತ್ರಿಕವೆನ್ನಬಹುದಾದ ಶುದ್ಧಾಂಗವಾಗಿ ಸ್ಥಾಯಿಯಾಗಿ ಉಳಿದುಕೊಂಡು ಬಂದಿರುತ್ತವೆಂದು ಹೇಳುವುದೂ ಕಷ್ಟ." (ಡಾ.ಜಿ.ಆರ್.ತಿಪ್ಪೇಸ್ವಾಮಿ, ಮೌಖಿಕ ಕಥನ, ಪು,೩೧೩೨) "ಆದರೆ ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಭಾರತೀಯ ಸಮಾಜ ವ್ಯವಸ್ಥೆಯ ಅತಿ ಮುಖ್ಯ ಲಕ್ಷಣವೊಂದನ್ನು ನೆನಪಿನಲ್ಲಿಡಬೇಕಾಗುತ್ತದೆ. ಅದೆಂದರೆ 'ಅಸಮಾನ ಬೆಳವಣಿಗೆ,' ಅಂದರೆ ಹರಪ್ಪಾ ಸಂಸ್ಕೃತಿಯ ಹುಟ್ಟಿನಿಂದ ಇಲ್ಲಿಯವರೆಗೂ ನಮ್ಮ ಚರಿತ್ರೆಯಲ್ಲಿ ನಾವು ನೋಡುವ ವಿಶಿಷ್ಟತೆಯೆಂದರೆ ಯಾವುದೇ ಕಾಲಕ್ಕೂ ಸಮಾಜದ ಎಲ್ಲಾ ಗುಂಪುಗಳ ಬೆಳವಣಿಗೆ ಒಂದೇ ಮಟ್ಟದ್ದಾಗಿರಲಿಲ್ಲ. ಈಗಲೂ ಕೂಡ ನಮ್ಮ ಸಮಾಜದಲ್ಲಿ ಚರಿತ್ರೆಯ ಯಾವುದೋ ಒಂದು ಹಂತದಲ್ಲಿ ಸ್ಥಗಿತಗೊಂಡು ಬಿಟ್ಟ ಪಳೆಯುಳಿಕೆಯಂತಿರುವ ಉಪಸಮಾಜಗಳನ್ನು ಅಥವಾ ಗಣಗಳನ್ನು (Tribes) ಕಾಣುತ್ತೇವೆ." (ರಾಜೇಂದ್ರಚೆನ್ನಿ, ಅಮೂರ್ತತೆ ಮತ್ತು ಪರಿಸರ, ಪು:೨೧೧) ಈ ಎಲ್ಲಾ ಉಪ ಸಮಾಜಗಳು ತಮಗೆ ಬೇಕಾದ ರೀತಿಯಲ್ಲಿ ಕಥನಗಳನ್ನು ಕಟ್ಟಿಕೊಂಡಿವೆ. ಆ ಮೂಲಕ ತಮ್ಮ ನಿರೂಪಣೆಗಳನ್ನು ಮಾಡುತ್ತಿವೆ.

"ಅಂದರೆ ವ್ಯವಸ್ಥೆಯ ವಾಸ್ತವಗಳನ್ನು ನೇರವಾಗಿ ಎದುರು ಹಾಕಿಕೊಳ್ಳದೇ ಆ ವಾಸ್ತವಗಳಿಂದ ಹುಟ್ಟಿದ ಮನೋಸ್ಥಿತಿಗೆ ಧರ್ಮ ಪರಿಹಾರವನ್ನು ದೊರಕಿಸುವ ಪ್ರಯತ್ನ ಮಾಡುತ್ತದೆ." (ಅದೇ, ಪು:೨೧೫) ಆದರೆ "ಜನ ಸಾಮಾನ್ಯರ ಬದುಕಿನಿಂದ ದೂರವಾದ ಮಧ್ಯಮ ವರ್ಗದ ಬುದ್ಧಿಜೀವಿಗಳು ಜನಪದ ಆಚರಣೆಗಳಲ್ಲಿ ತಾವು ಕಳೆದುಕೊಂಡ ಜೀವನೋತ್ಸಾಹವನ್ನು ಮಾತ್ರ ಭ್ರಮಿಸುವ ತೆವಲಿನಲ್ಲಿರುತ್ತಾರೆ. ಆದ್ದರಿಂದ ಇಂದು ತಮ್ಮ ಪ್ರಯೋಜಕತೆಯನ್ನು, ಸತ್ವವನ್ನು ಕಳೆದುಕೊಂಡ ಆಚರಣೆಗಳನ್ನು ವೈಭವೀಕರಿಸಿ ತಪ್ಪುಮಾಡುತ್ತಾರೆ. ಇನ್ನೊಂದು ಕಡೆಗೆ ಸಂಸ್ಕೃತಿಯೊಂದಿಗೆ ಭಾವನಾತ್ಮಕ ಸಂಬಂಧವನ್ನು ಕಳೆದುಕೊಂಡವರಿಗೆ ಆಚರಣೆಗಳನ್ನು ಶೋಷಣೆ, ಮೂಢನಂಬಿಕೆ ಇಂಥ ಪರಿಕಲ್ಪನೆಗಳಿಂದ ಬೇರ್ಪಡಿಸಿ ನೋಡಲಾಗುವುದಿಲ್ಲ. (ಅದೇ, ಪು:೨೧೭) ಅಂದರೆ ಯಾವುದೇ ಒಂದು ಆಚರಣೆ ಹುಟ್ಟಿಕೊಂಡ ಪರಿಸರವನ್ನು ನಾವು ಒಂದು ಮೂರ್ತ ರೂಪದಲ್ಲಿ ಕಟ್ಟಿಕೊಂಡಾಗ ಮಾತ್ರ ಇದರ ಅರ್ಥ ಪೂರ್ತಿಯಾಗಿ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿಯೇ "ದಮನಿತ ವರ್ಗದ ಸೃಜನಶೀಲತೆ ಈ ರೀತಿಯ ಹೃದಯ ವಿದ್ರಾವಕ ಅಸಹಾಯಕತೆಯಿಂದ ಹುಟ್ಟಿದೆ. ಇಡೀ ವ್ಯವಸ್ಥೆ ಅದನ್ನು ಎಲ್ಲ ರೀತಿಯಿಂದಲೂ ನಿಶ್ಯಕ್ತಿಗೊಳಿಸಿರುವ ಕೇಂದ್ರದಿಂದ ಅದರ ತಾತ್ವಿಕತೆಯೆಂಬುದು ರೂಪುಗೊಂಡಿದೆ." (ಎ.ಎಸ್.ಪ್ರಭಾಕರ, ಮ್ಯಾಸಬೇಡರ ಕಥನಗಳು, ಪು:೨೫) ಹಾಗಾಗಿಯೇ ಮಧ್ಯಕಾಲೀನ ಗ್ರಾಮಗಳಲ್ಲಿ ಅಸಂಖ್ಯಾತ ವೀರಗಲ್ಲುಗಳನ್ನು ಕಾಣಬಹುದಿತ್ತು. ಅಲ್ಲದೆ ಆರ್ಥಿಕ ಸ್ಥಾನ ಮಾನದಲ್ಲಿ ಆಗುವ ಬದಲಾವಣೆಗಳನ್ನು ಅದಕ್ಕೆ ಸಂವಾದಿಯಾಗಿ ಜಾತಿಯಲ್ಲಾಗುತ್ತಿದ್ದ ಮಾರ್ಪಾಡಿನಲ್ಲಿ ಕಾಣಬಹುದಿತ್ತು. ಮತ್ತು ಜಾತಿಯಲ್ಲಿ ಆಗುವ ಬದಲಾವಣೆಗಳೇ, ಆರ್ಥಿಕ ಸ್ಥಾನಮಾನಗಳಲ್ಲಿ ಆಗುವ ಬದಲಾವಣೆಗೆ ಕಾರಣವಾಗುತ್ತಿದ್ದವು." (ಡಿ.ಡಿ.ಕೋಸಾಂಬಿ, ಪುರಾಣ ಮತ್ತು ವಾಸ್ತವ, ಪು:೩). ಈ ಬದಲಾವಣೆಗಳು ಮುಂದೆ ಸಾಮಾಜಿಕ ಸ್ಥಾನಮಾನಗಳನ್ನೂ ನಿರ್ಧರಿಸುವಂತಾದುದು ದುರಂತ.

### ೪.೨. ಆರ್ಥಿಕ ಸಂಬಂಧಗಳು

ಮಾನವನು ತನ್ನ ಆರಂಭಿಕ ಅಲೆಮಾರಿ ಜೀವನವನ್ನು ನಿಲ್ಲಿಸಿ, ಒಂದೆಡೆ ನೆಲೆ ನಿಂತು ಬದುಕಲು ಪ್ರಾರಂಭಿಸಲಿಕ್ಕೆ ಮೂಲ ಕಾರಣ ಕೃಷಿಪದ್ಧತಿ, ಅಲ್ಲಿಂದಲೆ ಮಾನವನ ಜೀವನದ ನೆಲೆಗೆ ಒಂದು ರೀತಿಯ ಭದ್ರತೆ ಸಿಕ್ಕಿದೆ ಎನ್ನಬೇಕು. ಬೇಟೆ ಸಂಸ್ಕೃತಿಯ ಕೊನೆಯ ಹಂತದಲ್ಲಿದ್ದಾಗ ಮಾನವನಿಗೆ ಏನೋ ಒಂದು ರೀತಿಯ ಆಲೋಚನೆ ದೊರೆತು ಕ್ರಮೇಣ ಕೃಷಿ ಸಂಸ್ಕೃತಿಯನ್ನು ಹಂತ ಹಂತವಾಗಿ ಅಭಿವೃದ್ಧಿಪಡಿಸಿಕೊಂಡ. ಅದರ ಪರಿಣಾವಾಗಿ ಪಶು ಸಂಗೋಪನೆ, ಲೋಹಗಳ ಬಳಕೆ, ವಿರಾಮ ಕಾಲದಲ್ಲಿ ಕಲೆಗಳ ಕಡೆ ಗಮನ ಹಾಗೂ ಆಲೋಚನೆ ಮಾಡುವಂತಹ ಪ್ರಕ್ರಿಯೆಗಳು ಅವನನ್ನು ನಿಗದಿತ ಸ್ಥಳಗಳಲ್ಲಿ ವಾಸಿಸಲು ಅನುವು ಮಾಡಿಕೊಟ್ಟವು. ಅವನು ಇಂತಹ ಪ್ರಕ್ರಿಯೆಗಳ ಕೇಂದ್ರ ಸ್ಥಳವನ್ನಾಗಿ ಮಾಡಿಕೊಂಡಿದ್ದು ನದಿ ಮುಖಜ ಪ್ರದೇಶವಾಗಿರುವುದೊಂದು ವಿಶೇಷವಾಗಿದೆ. ಇದಕ್ಕೆ ಕಾರಣ ಫಲವತ್ತಾದ ಭೂಮಿ, ಹಿತಕರವಾದ ವಾಯುಗುಣ, ಸಸ್ಯ ಸಂಪತ್ತು ಹಾಗೂ ಇನ್ನಿತರ ಸೌಕರ್ಯಗಳು. ತಾನು ಬೆಳೆದ ಬೆಳೆಯನ್ನು ವಿದೇಶಗಳಿಗೆ

ರಫ್ತು ಮಾಡಲು ಸಾರಿಗೆ ಸೌಕರ್ಯ ಕೂಡ ಅನುಕೂಲವಾಗಿದ್ದೂ ಒಂದು ಕಾರಣ. ಭೂ ಮಾರ್ಗಕ್ಕಿಂತ ವಿಶೇಷವಾಗಿ ಜಲಮಾರ್ಗವನ್ನು ಹೆಚ್ಚು ಅವಲಂಭಿಸಿದ್ದೊಂದು ಕೃಷಿ ಸಂಸ್ಕೃತಿಯ ವಿಶೇಷತೆಯಾಗಿದೆ. ವಿದೇಶಗಳಿಗೆ ರಫ್ತು ಮಾಡುವಾಗ ಅಥವಾ ಆಮದು ಮಾಡಿಕೊಳ್ಳುವಾಗ ಭೂ ಮರ್ಗಾಕ್ಕಿಂತ ಜಲ ಮಾರ್ಗವೇ ಹೆಚ್ಚು ಅನುಕೂಲಕರವಾಗಿದ್ದಿತು. ಹಾಗಾಗಿ ಕೃಷಿ ಸಂಸ್ಕೃತಿಯ ಹಂತದಲ್ಲೇ ಹಡಗು ನಿರ್ಮಾಣ ಕಲೆಯಲ್ಲಿ ತುಂಬಾ ಪರಿಣತಿಯನ್ನು ಹೊಂದಿದ್ದ ಮುಂದೆ ಕ್ರಮೇಣ ಬೇರೆ ಬೇರೆ ಅಭಿವೃದ್ಧಿಗಳಿಗೆ ಇದು ಕಾರಣವಾಯಿತು.

ಆರ್ಥಿಕತೆ ಎಂಬುದು ಯಾವಾಗಲೂ ಉತ್ಪಾದನೆಯನ್ನೇ ಹೆಚ್ಚಾಗಿ ಅವಲಂಭಿಸಿರುತ್ತದೆ ಮತ್ತು ಪ್ರತಿನಿಧಿಸುತ್ತದೆ. ಅದು ಆಹಾರ ಉತ್ಪಾದನೆಯೂ ಆಗಿರಬಹುದು. ಅಥವಾ ಬೇರೆ ವಾಣಿಜ್ಯ ಸರಕುಗಳ ಉತ್ಪಾದನೆಯೂ ಆಗಿರಬಹುದು. ಇಲ್ಲಿ ಮುಖ್ಯವಾಗಿ ಆರ್ಥಿಕ ಸಂಬಂಧದ ಕುರಿತು ಮಾತಾಡುವ ಉದ್ದೇಶವೆಂದರೆ ಸಮುದಾಯಗಳು; ಕಥನ ಗೀತೆಗಳನ್ನು ಹಾಡಿಕೊಳ್ಳುವ ಸಮುದಾಯಗಳು ಯಾವ ರೀತಿಯಲ್ಲಿ ತಮ್ಮ ಆರ್ಥಿಕ ಅಂಶಗಳನ್ನು ನಿರ್ಧರಿಸಿಕೊಳ್ಳುತ್ತವೆ ಎಂಬುದನ್ನು ತಿಳಿಯುವುದಾಗಿದೆ. ಜೊತೆಗೆ ಅವುಗಳ ಸಂಬಂಧ ಯಾವರೀತಿಯಲ್ಲಿದೆ ಎಂಬುದು ಮುಖ್ಯ ವಿಚಾರವಾಗಿದೆ. "ಆಹಾರ ಸಂಗ್ರಹಣೆಗೂ ಆಹಾರ ಉತ್ಪಾದನೆಗೂ ಮೂಲಿಕವಾದ ಒಂದು ವ್ಯತ್ಯಾಸವಿದೆ. ಈ ವ್ಯತ್ಯಾಸ ಉತ್ಪಾದನಾ ಶಕ್ತಿಗಳಲ್ಲಿ ಮಾತ್ರವಲ್ಲದೆ ಉತ್ಪಾದನಾ ಸಂಬಂಧಗಲ್ಲಿ ಕೂಡ ಕಾಣಿಸಿಕೊಳ್ಳುತ್ತದೆ." (ಬಾಲಾಗೋಪಾಲ್, ಪ್ರಾಚೀನ ಭಾರತದ ಚರಿತ್ರೆ, ಕೋಸಾಂಬಿ ಚಿಂತನೆಗಳು, ಪು:೨೫) ಹಾಗಾಗಿಯೇ ಆಹಾರದ ಉತ್ಪಾದನೆ ಎಂಬುದು ಎರಡು ವಿಷಯಗಳಲ್ಲೂ ಭಿನ್ನವೇ ಆಗಿದೆ. ಅಂದರೆ, ನೇಗಿಲು, ಪಶುಗಳು, ಹಾರೆ, ಕೊಡಲಿ, ಗುದ್ದಲಿ, ಮೊದಲಾದ ಸಲಕರಣೆಗಳು ಬೇಕು, ಉತ್ಪಾದನೆಯ ಸಂದರ್ಭದಲ್ಲಿ ಸಾಮಾನ್ಯವಾಗಿ 'ಹೆಚ್ಚುವರಿ'ಯ ಹಂತ ಹಂತ ಕೂಡ ಇರುತ್ತದೆ. ಈ ಹೆಚ್ಚುವರಿಯನ್ನು ಹಸ್ತಗತ ಮಾಡಿಕೊಳ್ಳುವ ಒಂದು ಪಾಲಕ ವರ್ಗವೂ ಇರುತ್ತದೆ. ಇದು ನಾಗರೀಕ ಸಮಾಜದ ಅಸ್ತಿತ್ವಕ್ಕೆ ಕಾರಣವಾಗುತ್ತದೆ. ಈ ಎರಡೂ ಹಂತಗಳಿಗೆ ಮಧ್ಯದ ಹಂತವಾಗಿ ನಮಗೆ ಪಶುಪಾಲನಾ ಸಮಾಜಗಲು ಗೋಚರಿಸುತ್ತವೆ. ಸಾಮಾನ್ಯವಾಗಿ ಪಶುಪಾಲನಾ ಸಮಾಜಗಳು ಎಂದಿಗೂ 'ವರ್ಗ ಸಮಾಜ'ಗಳಾಗಿರುವುದಿಲ್ಲ. ಕ್ರಮೇಣ ಇವುಗಳು ಆಸ್ತಿಯ ಪರಿಕಲ್ಪನೆಯನ್ನಿಟ್ಟುಕೊಂಡು ಬೆಳೆದಂತೆಲ್ಲಾ ವರ್ಗ ಸಮಾಜಗಳಾಗುತ್ತವೆ. ಹಾಗಾಗಿಯೇ ಕಥನಗೀತೆಗಳನ್ನು ಹಾಡುವ ಸಮುದಾಯಗಳು ಅಥವಾ ಕಥನ ಗೀತೆಗಳನ್ನು ಹಾಡುವ ಸಮುದಾಯಗಳು ಅಥವಾ ಕಥನ ಗೀತೆಪರಿಸರದ ಸಮುದಾಯಗಳು ವರ್ಗ ಸಮಾಜವನ್ನು ಪ್ರತಿನಿಧಿಸುತ್ತವೆ ಎಂದರೆ ತಪ್ಪಲ್ಲ, ಇವುಗಳನ್ನು ಕುರಿತಾದ ಅಧ್ಯಯನಗಳು ಆರಂಭಗೊಂಡವು. "ಈ ಕಾಲ ಘಟ್ಟದ ಅಧ್ಯಯನ ಮಾದರಿಗಳು, ಮುಖ್ಯವಾಗಿ ಸಮುದಾಯಗಳ ಜಗತ್ತನ್ನು 'ವಸ್ತು' ಅಥವಾ 'ಮೆಟೇರಿಯಲ್' ಎಂದೂ 'ಕ್ಷೇತ್ರ' (Field) ಎಂದೂ ಪರಿಭಾವಿಸಿದವು. ಈ ನೆಲದ ಧ್ಯಾನಸ್ಥ ಸ್ಥಿತಿಯಲ್ಲಿ ರೂಪಗೊಂಡ ಒಂದು ಸಮುದಾಯ ಮತ್ತು ವಿಶಿಷ್ಟ ಬಗೆಯ ಜ್ಞಾನದ, ತಿಳುವಳಿಕೆಯ ಈ ಜಗತ್ತನ್ನು ಕಲೋನಿಯಲ್ ಅಧ್ಯಯನ ವಿಧಾನಗಳು,

'ಮೆಟೇರಿಯಲ್' 'ಆಕರ,' ಕ್ಷೇತ್ರ (Field) ಎಂದು ಪರಿಗಣಿಸಿದವು. ಈ ಸಮುದಾಯಗಳ ವೈಭವ ಮುಗಿದು ಅವಕ್ಕೆ ಶೂನ್ಯ ಆವರಿಸಿದೆ. ಅವಕ್ಕೆ ತಮ್ಮ ಚರಿತ್ರೆಯನ್ನು ರೂಪಿಸಿಕೊಳ್ಳುವ ತಾಕತ್ತು ಇಲ್ಲ." (ಎ.ಎಸ್.ಪ್ರಭಾಕರ, ಬುಡಕಟ್ಟು, ಬದುಕಿನ ಸ್ಥಿತ್ಯಂತರಗಳು, ಪು:೧೬) ಇವುಗಳ ಚರಿತ್ರೆಯನ್ನು ಬೇರೆಯವರು ಬರೆಯುವ ಅನಿರ್ವಾತೆಯಿದೆ. ವಸಾಹಾತು ಕಾಲಘಟ್ಟ ವಿದ್ವಾಂಸರಿದ್ದ ಕಾರಣ ಅವುಗಳನ್ನು ಕತ್ತಲ ಜಗತ್ತಿನ ಗುಂಪುಗಳಂತೆ ಹಣೆಪಟ್ಟಿ ಕಟ್ಟಿದರು. ಆದರೆ ಹತ್ತೊಂಬತ್ತನೆ ಶತಮಾನದ ಆರಂಭದಿಂದ ವಸಾಹತುಷಾಹಿ ಆಡಳಿತಕ್ಕೆ ಮಾರಣಾಂತಿಕ ಹೊಡೆತನಗಳನ್ನು ನೀಡಿದ್ದೇ ಇಲ್ಲಿನ ಕೆಳ ಜಾತಿಗಳು" (ಅದೇ,ಪು:೧೭) ಕ್ರಮೇಣ ಈ ಸಮುದಾಯಗಳೆಲ್ಲವೂ ಆರ್ಥಿಕವಾಗಿ ಪ್ರಬಲವಾಗುತ್ತಾ ಹೋದವು. ಅಲ್ಲದೆ ನಗರಗಳ ನಿರ್ಮಾಣ ಪ್ರಕ್ರಿಯೆ ಆರಂಭವಾಯಿತು. "ನಗರ ಸಮುದಾಯಗಳು ತಮ್ಮ ಬಹು ವಿಧದ ಕೆಲಸ ಕಾರ್ಯಗಳ ಮೂಲಕ ನಗರ ಕೇಂದ್ರಗಳ ವಿಸ್ತರಣೆಗೆ ಕಾರಣವಾದವು. ನಗರ ಅರ್ಥವ್ಯವಸ್ಥೆಯ ಕುರಿತು ಅಧ್ಯಯನ ನಡೆಸುವಾಗ ಈ ಸಮುದಾಯಗಳು ಮತ್ತು ಅವುಗಳ ದುಡಿಮೆ ಪ್ರಮುಖ ವಿಚಾರವಾಗಿ ಕಂಡು ಬರುತ್ತದೆ. ನಗರ ಅರ್ಥ ವ್ಯವಸ್ಥೆಯ ರೂಪುಗೊಳ್ಳುವಿಕೆಯಲ್ಲಿ ನಗರ ಸಮುದಾಯಗಳು ಮತ್ತು ಅವುಗಳ ವ್ಯಾಪಾರ ಚಟುವಟಿಕೆಗಳು, ವರ್ತಕ ಸಂಘಗಳು ಹಾಗೂ ಇನ್ನಿತರ ನಗರ ಸಂಬಂಧಿ ಚಟುವಟಿಕೆಗಳು ನೇರವಾಗಿ ಭಾಗಿಯಾದವು. ನಗರ ಅರ್ಥವ್ಯವಸ್ಥೆಯು ಕೃಷಿ ಆರ್ಥಿಕತೆಗೆ ಪೂರಕವಾಗಿ ಕಾಣಿಸಿಕೊಂಡಿತು. ರಾಜ್ಯದ ಅರ್ಥವ್ಯವಸ್ಥೆಯಲ್ಲಿ ನಗರಗಳನ್ನಾಧರಿಸಿದ ಅರ್ಥ ವ್ಯವಸ್ಥೆ ನಿರ್ಣಾಯಕ ಪಾತ್ರವನ್ನು ವಹಿಸಿತು. ಆದರೆ ಇದು ದಿಢೀರನೆ ಆದ ಆರ್ಥಿಕ ಪರಿವರ್ತನೆಯಲ್ಲಿ." (ಡಾ.ಮೋಹನ್ ಕೃಷ್ಣರೈ, ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ, ಪು:೩೨) ಕಾಲ ಕ್ರಮೇಣ ಸಮುದಾಯಗಳೆಲ್ಲವೂ ಕೂಡ ಆರ್ಥಿಕ ಸ್ವಾವಲಂಭನೆ ಸಾಧಿಸುತ್ತಾ ನಡೆದಿವೆ. ಆದರೆ ಕೃಷಿ ವ್ಯವಸ್ಥೆಯ ಪ್ರಥಮ ಹಂತದಲ್ಲಿರುವ ಎಲ್ಲಾ ಸಮಾಜಗಳಲ್ಲಿ ಸ್ತ್ರೀ ಉತ್ಪಾದನೆಯ ಕೆಲಸದಲ್ಲಿ ಬಹಳ ಮುಖ್ಯ ಪಾತ್ರವಹಿಸುತ್ತಾಳೆ. ಏಕೆಂದರೆ ಕೃಷಿ ಕೆಲಸ ಸ್ತ್ರೀಯರ ಆವಿಷ್ಕಾರ ಮತ್ತು ಕೆಲಸವಾಗಿತ್ತು. ಇಂಥ ಸಮಾಜದಲ್ಲಿ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಮತ್ತು ಮಾತೃ ದೇವತಾ ಪ್ರಧಾನ ಧರ್ಮಗಳು ಹುಟ್ಟುತ್ತವೆ. ಅಲೆಮಾರಿ ಪಶುಸಂಗೋಪನಾ ಹಂತದಲ್ಲಿರುವ ಸಮಾಜದಲ್ಲಿ ಮುಂದುವರೆದ ಕೃಷಿ ಪ್ರಧಾನ ಸಮಾಜದಲ್ಲಿ ಪುರುಷಪ್ರಧಾನ ಮೌಲ್ಯ ಹಾಗೂ ಧರ್ಮಗಳು ಹುಟ್ಟಿಕೊಳ್ಳುತ್ತವೆ. ಈ ಎಲ್ಲ ಮಾಹಿತಿಯ ಪ್ರಯೋಜನವೆಂದರೆ ಅದರಿಂದ ಸಂಸ್ಕೃತಿಯ ಅಧ್ಯಯನಕ್ಕೆ ಒಂದು ವೈಜ್ಞಾನಿಕ ಮಾದರಿ ದೊರೆಯುತ್ತದೆ. ಸಮಾಜವು ಹಾಯ್ದು ಬಂದ ಒಂದು ಹಂತದ ನೆನಪುಗಳ ರೂಪದಲ್ಲಿಯಾದರೂ ಆ ಎಳೆಗಳು ಸಿಕ್ಕುತ್ತವೆ. ಅಲ್ಲದೆ ಚರಿತ್ರೆಯ ಹಲವಾರು ಹಂತಗಳ ದಾಖಲೆಗಳು ಎಂದುಕೊಂಡು ವಿಶ್ಲೇಷಿಸಿದರೆ ವರ್ಗರಹಿತ ಸಮಾಜವೊಂದು ವರ್ಗವ್ಯವಸ್ಥೆಯತ್ತ ಸಾಗಿದ ಸುಳುಹುಗಳು ಹೇರಳವಾಗಿ ಸಿಕ್ಕುತ್ತವೆ." (ರಾಜೇಂದ್ರ ಚನ್ನಿ. ಅಮೂರ್ತತೆ ಮತ್ತು ಪರಿಸರ. ಪು:೨೧೯). ಲಿಖಿತ ಇತಿಹಾಸ ಮತ್ತು ಯಾವುದೇ ರೀತಿಯ ದಾಖಲೆಗಳು ಇಲ್ಲದೇ ಇದ್ದಾಗ ಅಥವಾ ಪ್ರಭುತ್ವದಿಂದಾಗಿ ತಿರುಚಲ್ಪಟ್ಟಾಗ ಅಲಿಖಿತ ಸಾಮಗ್ರಿ ಅಥವಾ ಮೌಖಿಕ ಅಂಶಗಳು ಚರಿತ್ರೆ ರಚನೆಗೆ ಆಕರ ಸಾಮಗ್ರಿಯಾಗುವುದರಲ್ಲಿ

ಸಂಶಯವೇ ಇಲ್ಲ. ಕಾರಣ ಮೌಖಿಕ ದಾಖಲೆಗಳು ಯಾವಾಗಲೂ ಚರಿತ್ರೆಯ ಪರೋಕ್ಷ ದಾಖಲೆಗಳೇ ಆಗಿರುತ್ತವೆ. ಸಮಾಜದಲ್ಲಿ ನಡೆಯುವ ಬದಲಾವಣೆಗಳಿಂದಾಗಿ ಈ ಮೌಖಿಕ ದಾಖಲೆಗಳನ್ನು ಎಷ್ಟೇ ತಿರುಚಲಾದರೂ ಕೂಡ, ಹೀಗೆ ತಿರುಚುವ ಅಥವಾ ತಿರುಚಲ್ಪಟ್ಟ ರೀತಿ ಕೂಡ ಸಮಾಜದ ಆಶಯಗಳನ್ನೇ ಪರೋಕ್ಷವಾಗಿಯೇ ವಿವರಿಸುತ್ತಿರುತ್ತವೆ. ಆದರೆ ಕೃಷಿಗೆ ಸಂಬಂಧಿಸಿದ ಮಾಂತ್ರಿಕ ಆಚರಣೆಗಳು Sympathetic Magic ಬಗೆಯವು. ಮನುಷ್ಯ ತಾನು ಒಂದು ಕ್ರಿಯೆಯನ್ನು ಆಚರಿಸುವುದರ ಮೂಲಕ ನಿಸರ್ಗವನ್ನು, ಅಂಥದೇ ಒಂದು ಕ್ರಿಯೆಯನ್ನು ಆಚರಿಸುವಂತೆ ಪ್ರೇರೇಪಿಸಬಹುದು ಎನ್ನುವ ಬಗೆಯ ಮಂತ್ರವಿದು, ಮೂಲಭೂತವಾಗಿ ಇದು ಭೂಮಿಯ ಫಲವಂತಿಕೆ ಮತ್ತು ಹೆಣ್ಣಿನ ಫಲವಂತಿಕೆ ಮಧ್ಯೆ ಸಾಮ್ಯವನ್ನು ಗುರುತಿಸುತ್ತದೆ. ಅಲ್ಲದೆ ಸಂಭೋಗ ಮತ್ತು ಭೂಮಿ ಫಲವತ್ತಾಗುವುದು ಎರಡೂ ಒದೇ ಬಗೆಯ ಸೃಜನ ಕ್ರಿಯೆಗಳು ಎಂದು ನಂಬುತ್ತದೆ. ಆದ್ದರಿಂದ ಗಂಡು ಹೆಣ್ಣುಗಳು ಸೃಜನ ಕ್ರಿಯೆಯನ್ನು ಆಚರಿಸುವುದರ ಮೂಲಕ ಭೂಮಿಯನ್ನು ಸೃಜನಶೀಲವಾಗುವಂತೆ ಪ್ರೇರೇಪಿಸಲು ಯತ್ನಿಸುವ ಕೃಷಿ ಸಂಬಂಧಿಸಿದ ಆಚರಣೆಗಳು ಎಲ್ಲ ಜನಾಂಗ ಹಾಗೂ ಸಂಸ್ಕೃತಿಯ ಒಂದು ಹಂತದಲ್ಲಿ ಇದ್ದೇ ಇದ್ದವು.

ಹೆಣ್ಣು ಗಂಡುಗಳು ಬೆತ್ತಲೆಯಾಗಿ ತಮ್ಮ ಸೃಜನೇಂದ್ರಿಯಗಳನ್ನು ಪ್ರದರ್ಶಿಸುವ ಮೂಲಕ ಭೂಮಿಯ ಸೃಜನ ಶಕ್ತಿಯನ್ನು ಉತ್ತೇಜಿಸುವ ಆಚರಣೆಗಳು ಸಾಮಾನ್ಯವಾಗಿದ್ದವು. ಮೊದಲ ಹಂತದಲ್ಲಿ ಕೃಷಿ ಸ್ತ್ರೀಯ ಕೆಲಸವಾಗಿದ್ದರಿಂದ ಈ ಮಾಂತ್ರಿಕ ಆಚರಣೆಗಳಲ್ಲಿ ಅವಳ ಪಾತ್ರವೇ ಮುಖ್ಯವಾಗಿದ್ದು ಮಾತೃದೇವತೆಗಳ ಹುಟ್ಟನ್ನು ಇಲ್ಲಿ ಗುರುತಿಸಬಹುದು." (ರಾಜೇದ್ರ ಚನ್ನಿ, ಅಮೂರ್ತತೆ ಮತ್ತು ಪರಿಸರ, ಪು:೨೧೮-೨೧೯) ಹೀಗೆ ಆಚರಣೆಗಳ ಮೂಲಕವೂ ಸಮುದಾಯಗಳು ತಮ್ಮ ಆರ್ಥಿಕ ಸ್ವಾವಲಂಭನೆಗೆ ತುಡಿಯುವುದು ತುಂಬಾ ಆಶ್ಚರ್ಯಕರ ಸಂಗತಿಯಾಗಿದೆ. ಈ ರೀತಿಯ ಜೀವನ ದೃಷ್ಟಿ ಸ್ಥೂಲವಾಗಿ ನೋಡಿದರೆ ಭೌತವಾದಿ ಎನಿಸುವುದರಲ್ಲಿ ಯಾವುದೇ ಅನುಮಾನವಿಲ್ಲ. ಮುಂದೆ ಕ್ರಮೇಣ ಪುರುಷ ಪ್ರಧಾನ ವ್ಯವಸ್ಥೆ ರೂಪುಗೊಂಡ ನಂತರ ಈ ರೀತಿಯ ಆಚರಣೆಗಳೆಲ್ಲವೂ ಪುರುಷ ಪ್ರಧಾನ ಆಚರಣೆಗಳಾದವು. ಇಡೀ ಅರ್ಥ ವ್ಯವಸ್ಥೆ ಪುರುಷ ಕೇಂದ್ರಿತವಾಗುತ್ತಾ ಹೋಯಿತು. ಬಹಳ ಸಾಧಾರಣೀಕರಿಸಿ ಹೇಳುವುದಾದರೆ ಒಟ್ಟಾರೆ ಇರುವುದು ಎರಡು ವರ್ಗಗಳು, ಲಾಭವನ್ನು ಹಾಯಾಗಿ ಹಿರಿದುಕೊಳ್ಳುವವರು ಮತ್ತು ಇತರರ ಲಾಭಕ್ಕಾಗಿ ದುಡಿಮೆಯನು ಮಾರಿಕೊಳ್ಳುವವರು. ಇತ್ತೀಚಿನ ದಶಕಗಳಲ್ಲಿ ವೈಜ್ಞಾನಿಕ ತಾಂತ್ರಿಕ ಕ್ರಾಂತಿಯು ವ್ಯಾಪಕವಾಗಿ ಜರುಗಿ ವರ್ಗಗಳ ಇರುವನ್ನು ಮಸುಕು ಮಾಡಿವೆಯೆಂಬ ಮಾತು ಕೇಳಿಬರುತ್ತದೆ. ಆದರೆ ಅಂತಹ ಬೆಳವಣಿಗೆಯು ಉತ್ಪಾದನೆಯ ವಿಧಾನ ಮತ್ತು ಮಟ್ಟವನ್ನು ಬದಲಾಯಿಸಬಹುದೇ ವಿನಾ ಉತ್ಪಾದನಾ ಸಂಬಂಧಗಳನ್ನು ಕಡಿದು ಹಾಕುವುದಿಲ್ಲ." (ಜಿ.ರಾಮಕೃಷ್ಣ, ಮಧ್ಯಮವರ್ಗ: ಒಂದು ಚಿಂತನೆ, ಪು:೧೧೫) ಇಲ್ಲಿ ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳೆಂದರೆ, ಭೂಮಿಯ ಒಡೆತನ, ಮಿಲಿಟರಿ ಸೇವೆ, ತೆರಿಗೆ ಸಂಗ್ರಹಣೆ ಮತ್ತು ದೊಡ್ಡ ಉದ್ದಿಮೆದಾರರ ಮೂಲಕ ಸ್ಥಳೀಯ ಉತ್ಪನ್ನವನ್ನು ಸರಕಾಗಿ ಪರಿವರ್ತಿಸುವ ಪ್ರಕ್ರಿಯೆ.

### ೪.೩. ಸಾಂಸ್ಕೃತಿಕ ಸಂಬಂಧಗಳು

ವಸಾಹತುಷಾಹಿಯ ತುಳಿತಕ್ಕೆ ಒಳಗಾದ ಎಲ್ಲಾ ದೇಶಗಳು ಒಂದು ರೀತಿಯಲ್ಲಿ ದೇಶಿವಾದದ ಚಿಂತನೆಯಲ್ಲಿ ತೊಡಗಿದವು; ಮತ್ತು ವಶಾಹತುಷಾಹಿ ಧೋರಣೆಯೇ ದೇಶಿವಾದಕ್ಕೆ ಮೂಲವಾಯಿತು. ಏಕೆಂದರೆ ವಸಾಹತುಷಾಹಿ ಸಂಸ್ಕೃತಿ ಈ ದೇಶದಲ್ಲಿನ ಬಹುಮುಖಿ ಸಂಸ್ಕೃತಿಯನ್ನು ಹತ್ತಿಕ್ಕುವ ಕೆಲಸವನನು ಮಾಡಿತ್ತಷ್ಟೆ ಅಲ್ಲದೆ, ಅವುಗಳನ್ನು ನಾಶಮಾಡಿ, ಸಾಂಸ್ಕೃತಿಕ ನಿಟ್ಟಿನಲ್ಲಿ ವ್ಯಾಪಾರ ವಸಾಹತುವಿನಂತೆ ಸಾಂಸ್ಕೃತಿಕ ವಸಹಾತನ್ನಾಗಿ ಮಾಡಿಕೊಂಡಿದೆ. ಇಲ್ಲಿ ಬ್ರಿಟಿಷ್ ಸಂಸ್ಕೃತಿ ತನ್ನ ಯಾಜಮಾನಿಕೆಯನ್ನು ಮುಂದುಮಾಡಿ ಸಾಂಸ್ಕೃತಿಕ ವೈವಿಧ್ಯತೆ, ಬಹುಮುಖತೆಯೇ ಪ್ರಮುಖವಾದ ಭಾರತದಲ್ಲಿ ವಸಾಹತುಷಾಹಿಯನ್ನು ಬಲಗೊಳಿಸುವುದು ಅವರ ಉದ್ದೇಶವಾಗಿತ್ತು. ಅಲ್ಲದೆ ರಾಷ್ಟ್ರೀಯ ಕಲ್ಪನೆ ಭಾರತದ ನೆಲಕ್ಕೆ ಹೊಸದಾಗಿತ್ತು. ಪ್ರಾದೇಶಿಕ ಸಂಸ್ಕೃತಿಗಳನ್ನು ಮತ್ತು ಅವುಗಳ ವಿಶಿಷ್ಟತೆಯನ್ನು ನಾಶಮಾಡುವ ಕೆಲಸಗಳನ್ನು ಬ್ರಿಟಿಷರು ಮಾಡಿದರು. ಈ ಸಂದರ್ಭದಲ್ಲಿ ಭಾರತೀಯರ ಹೋರಾಟದ ಹಾದಿಯಲ್ಲಿ ಹುಟ್ಟಿಕೊಂಡ 'ರಾಷ್ಟ್ರೀಯತೆ' ರಾಜಕೀಯವಾಗಿ ಅನಿರ್ವಾಯವಾಗಿತ್ತಾದರೂ ಸಾಂಸ್ಕೃತಿಕವಾಗಿ ಅಷ್ಟೇ ಪರಕೀಯವಾಗಿತ್ತು. ಕಾರಣ ಸ್ಥಳೀಯ ಸಂಸ್ಕೃತಿಗಳ ವಿರುದ್ಧ ಬ್ರಿಟಿಷ್ ಸಂಸ್ಕೃತಿ ಬಲವಾದ ಎದುರಾಳಿಯಾಗಿ ತಲೆ ಎತ್ತಿತ್ತು. ಈ ಕಾರಣಕ್ಕಾಗಿ ಪರಕೀಯ ಸಂಸ್ಕೃತಿಯೊಂದರ ಬಲವಾದ ಹೊಡೆತದಿಂದ ಪಾರಾಗಲು ಮತ್ತು ಅದನ್ನು ಎದುರಿಸಿ ನಿಲ್ಲಲು ಪ್ರಾದೇಶಿಕ ಸಂಸ್ಕೃತಿಗಳು ತಮ್ಮ ಪ್ರಾದೇಶಿಕ ವಾಸ್ತವಗಳ ಬಗ್ಗೆ ತಮ್ಮ ನಂಬಿಕೆಗಳನ್ನು ಹೆಚ್ಚು ಹೆಚ್ಚು ಬಲಗೊಳಿಸುವುದು ಅನಿವಾರ್ಯವಾಗಿತ್ತು. ಇದರ ಪರಿಣಾಮವಾಗಿ ವಸಾಹತುಷಾಹಿ ಉಂಟು ಮಾಡಿದ ಸಾಂಸ್ಕೃತಿಕ ಒತ್ತಡವು ಸಾಂಸ್ಕೃತಿಕ ಪುನರುಜ್ಜೀವನ ಪ್ರಕ್ರಿಯೆಗೆ ಕಾರಣವಾಯಿತು. ಸ್ಥಳೀಯ ಸಂಸ್ಕೃತಿ ಈ ಸಂದರ್ಭದಲ್ಲಿ ಎಷ್ಟೇ ಪ್ರಬಲವಾಗಿ ಕಂಡುಬಂದರೂ, ವಸಾಹತುಷಾಹಿಯು ತನ್ನ ಸ್ವದೃಷ್ಟಿಕೋನದ ಒತ್ತಡವನ್ನೇ ಸ್ಥಳೀಯ ಸಂಸ್ಕೃತಿಯ ಮೇಲೂ ಹೇರಿತು. ಅಂದರೆ ದೇಶೀಯ ಸಂಸ್ಕೃತಿಯನ್ನು ವಸಾಹತುಷಾಹಿಯು ತನ್ನ ಸಂಸ್ಕೃತಿಯ ಕಣ್ಣುಗಳ ಮೂಲಕ ನೋಡುವ ಕೆಲಸ ಮಾಡುತ್ತಿತ್ತು. ದೇಶೀಯ ಸಂಸ್ಕೃತಿಗಳು ತಮ್ಮ ಸಂಸ್ಕೃತಿ, ಧಾರ್ಮಿಕ ಬದುಕಿನ ಕ್ರಮಗಳು, ನ್ಯಾಯ ಬದ್ಧತೆಯನ್ನು ಕಳೆದುಕೊಂಡವು. ಬ್ರಿಟೀಷ್ ವಸಾಹತುಷಾಹಿಗೆ ವಿರುದ್ಧ ಇವುಗಳಿಗೆ ಒಂದು ಬಲವಾದ ಪ್ರತಿಕ್ರಿಯೆ ನೀಡುವುದು ಸಾಧ್ಯವಾಗಲಿಲ್ಲ.

ವಸಾಹತುಷಾಹಿಯ ಪ್ರಭಾವಕ್ಕೆ ಪ್ರಮುಖವಾಗಿ ಎರಡು ಮುಖಗಳಿವೆ ಒಂದು ಸುಧಾರಣಾವಾದಿ ಮುಖವಾದರೆ, ಮತ್ತೊಂದು ಆಡಳಿತದ ಕ್ರೂರಹಸ್ತ; ಮೊದಲ ಹಂತದಲ್ಲೇ ವಸಾಹತುಷಾಹಿ ಹಲವಾರು ಬಗೆಗಳಲ್ಲಿ ತನ್ನ ಕ್ರೂರ ಹಸ್ತವನ್ನು ಭಾರತೀಯ ಬದುಕಿನ ಮೇಲೆ ಹರಡಿತು. ರಾಜಕೀಯ ಮತ್ತು ಆರ್ಥಿಕ ಮುಖದ ಕ್ರೌರ್ಯ ಭಾರತವನ್ನು ಬರಿದು ಮಾಡಿತ್ತು. ಮಿಶನರಿಗಳ ನೆರವು ಸುಧಾರಣೆಯ ರೂಪದಲ್ಲೆ ತನ್ನ ಪಟ್ಟ ಭದ್ರ ಹಿತಾಸಕ್ತಿಗಳನ್ನು ಬೆಳೆಸಿಕೊಳ್ಳುವ ತಂತ್ರಗಾರಿಕೆಯಾಗಿತ್ತು. ಇದು

ಸುಧಾರಣಾವಾದಿ ರಾಜಕೀಯದ ಜೊತೆ ಸಾಮ್ರಾಜ್ಯಷಾಹಿಯ ಆಕ್ರಮಣಶೀಲತೆಯ ಗುಣವನ್ನು ಹೊಂದಿದೆ. ವಸಾಹತುಷಾಹಿಯ ದುಷ್ಟ ಶಕ್ತಿಯು ನಯವಾಗಿ ಭಾರತೀಯ ಸಮಾಜವನ್ನು ಶೋಷಿಸುತ್ತಿತ್ತು. ಇಲ್ಲಿನ ರಾಜ ಹಾಗೂ ಪಟ್ಟಭದ್ರರ ಸ್ವಾರ್ಥಗುಣಗಳನ್ನು ತನ್ನ ಲಾಭಕ್ಕೆ ಬಳಸಿಕೊಂಡಿತು. ವಸಾಹತುಷಾಹಿ ಜತೆಗೆ ಬಂದ ಇಂಗ್ಲೀಷ್ ಶಿಕ್ಷಣ, ಸಾಹಿತ್ಯ, ಇವು ಅನಾವರಣಗೊಳಿಸಿದ ಐರೋಪ್ಯ ಸಾಂಸ್ಕೃತಿಕ ಜಗತ್ತಿನ ಪರಿಚಯ, ಉದ್ಯೋಗಾವಕಾಶ, ಆಡಳಿತ ವ್ಯವಸ್ಥೆ, ಭಾರತೀಯರ ಬದುಕಿನಲ್ಲಿ ಆಧುನಿಕತೆ ಮೂಡಿಸಿತು. ಈ ಹಂತದಲ್ಲಿ ಆಧುನಿಕತೆ ಉಂಟು ಮಾಡಿದ ಪರಿಣಾಮ ಭಾರತೀಯ ಬದುಕಿಗೆ ಹೊಸದಾಗಿತ್ತು. ಜತೆಗೆ ಪರಂಪರೆಯಿಂದ ಬಂದ ಮೌಲ್ಯಗಳಿಗೆ ಆಘಾತಕಾರಿಯೂ ಆಗಿತ್ತು. ಇತಿಹಾಸದ ಉದ್ದಕ್ಕೂ ಪರಕೀಯ ಆಕ್ರಮಣಕ್ಕೆ ತುತ್ತಾಗುತ್ತಲೇ ಬಂದಿರುವ ಭಾರತೀಯ ಸಮಾಜ ಹಿಂದೆಂದೂ ಈ ಬಗೆಯ ಆಘಾತ ಎದುರಿಸಿರಲಿಲ್ಲ. ಈ ತನಕ ದಾಳಿ ನಡೆಸಿದ ಪರಕೀಯ ಸಂಸ್ಕೃತಿಗಳು ಒಂದು ಬಗೆಯ ಅಂತರವನ್ನು ಉಳಿಸಿಕೊಂಡೇ ಬಂದಿದ್ದವು. ಅವುಗಳ ಪ್ರಭಾವಕ್ಕೆ ಒಳಗಾಗಿದ್ದರೂ ಅದು ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಅಲುಗಾಡಿಸುವಷ್ಟು ಪ್ರಬಲವಾಗಿರಲಿಲ್ಲ. ಆದರೆ ವಸಾಹತುಶಾಹಿ ವ್ಯವಸ್ಥೆಯಲ್ಲಿ ಸಾಮ್ರಾಜ್ಯಶಾಹಿ ಆಕ್ರಮಣಶೀಲತೆ ಇರುವುದರ ಜೊತೆಗೆ ತನ್ನದು ಹೆಚ್ಚೆಂದು ತೋರಿಸುವ ಹೆಚ್ಚುಗಾರಿಕೆ ಇತ್ತು. ಅಷ್ಟೇ ಅಲ್ಲದೇ ಇಲ್ಲಿಯ ಜನರಿಗೆ ದೇವರಂತೆ, ದೇವತೆಗಳಂತೆ ಕಂಡ ಮೌಲ್ಯಗಳು ವಸಾಹತುಷಾಹಿ ಕಣ್ಣುಗಳಿಗೆ ಅತಿ ಕೀಳಾದ ಮೌಢ್ಯಗಳಾಗಿಯೂ ರಾಕ್ಷಸ ಗುಣಗಳಂತೆ ಕಂಡವು. ಇದರಿಂದಾಗಿ ಭಾರತೀಯ ಸಮಾಜ ಮೊತ್ತಮೊದಲ ಬಾರಿಗೆ ವಾಸ್ತವಕ್ಕೆ ತೆರೆದುಕೊಂಡಿತು, ಹೊರಶತ್ರುವಿನ ವಿರುದ್ಧ ದೇಶದ ಎಲ್ಲಾ ಜನರನ್ನು ಒಗ್ಗಟ್ಟಾಗಿಸುವುದು ತಕ್ಷಣದ ಅನಿವಾರ್ಯವಾಗಿತ್ತು. ದೇಶೀಯ ಸಂಸ್ಕೃತಿ ಪರಕೀಯ ಸಂಸ್ಕೃತಿಯೊಂದರ ಮುಖಾಮುಖಿಯಲ್ಲಿ ತನ್ನೊಳಗೆ ಹೊಸತೊಂದು ಸುಧಾರಣವಾದಿ ಪ್ರಕ್ರಿಯೆಯನ್ನು ಪ್ರಾರಂಭಿಸಿತು. ಪರಕೀಯ ಆಳ್ವಿಕೆ ಮತ್ತು ಸಂಸ್ಕೃತಿಯ ವಿರುದ್ಧ ಒಂದು ಸಮುದಾಯವಾಗಿ ಇಡೀ ದೇಶವನ್ನು ಐಕ್ಯಗೊಳಿಸಲು 'ರಾಷ್ಟ್ರೀಯ' ಭಾವನೆ ತುರ್ತಿನ ಅನಿವಾರ್ಯವಾಗಿ ಮೂಡಿ ಬಂತು. ಅಲ್ಲದೆ ರಾಷ್ಟ್ರೀಯತೆಯ ಕಲ್ಪನೆಯ ಜೊತೆಗೆ ಸಾಂಸ್ಕೃತಿಕ ಪುನರ್‌ಸ್ಥಾಪನೆ ಅಗತ್ಯವಾಗಿತ್ತು. ಇದಕ್ಕಾಗಿ ಸಾಂಪ್ರದಾಯಿಕ ಮೌಲ್ಯಗಳ ಕಡೆಗೆ ಮತ್ತು ಅದರ ಪುನರುತ್ಥಾನ ಪ್ರಕ್ರಿಯೆಯ ಕಡೆಗೆ ನೋಡುವುದು ಅನಿವಾರ್ಯವಾಗಿತ್ತು. ಒಳಗಿನ ಎಲ್ಲಾ ಶ್ರೇಣಿಕರಣ ವ್ಯವಸ್ಥೆ, ಪರಸ್ಪರ ವಿರೋಧಿ ನಿಲುವುಗಳನ್ನು, ವರ್ಗಸಂಘರ್ಷಗಳನ್ನು, ಪ್ರಾದೇಶಿಕ, ಸಾಂಸ್ಕೃತಿಕ ಭಿನ್ನತೆಗಳನ್ನು ಮರೆತು 'ಆಧ್ಯಾತ್ಮಿಕ ಮೌಲ್ಯ, ಪರಂಪರೆಯ ಮೌಲ್ಯಗಳನ್ನೇ ಮೂಲಸ್ಥಾಯಿಯಾಗಿಸಿಕೊಂಡು ಹೋರಾಟಕ್ಕಿಳಿಯುವ ಅಥವಾ ಸ್ವರಕ್ಷಣೆಯ ತಂತ್ರಗಳಿಗೆ ಮಾರುಹೋಗಬೇಕಾಗಿತ್ತು.' ಏಕೆಂದರೆ ರಾಷ್ಟ್ರೀಯತೆ ನಮ್ಮ ಅಳಿವು ಉಳಿವಿನ ಪ್ರಶ್ನೆಯಾಗಿದ್ದಾಗ್ಯೂ ಸಾಂಸ್ಕೃತಿಕವಾಗಿ ಅಷ್ಟೇ ಪರಕೀಯವಾಗಿತ್ತು. ಆದ್ದರಿಂದ ಸಾಂಸ್ಕೃತಿಕ ಸ್ಥಿತಿಯ ಪುನರ್‌ಸ್ಥಾಪನೆ ರಾಷ್ಟ್ರೀಯತೆಯಷ್ಟೇ ಪ್ರಮುಖವಾಗಿತ್ತು. ಪ್ರಾದೇಶಿಕ ಭಿನ್ನತೆಗಳೆಲ್ಲವನ್ನು ಮರೆತು ಧಾರ್ಮಿಕ, ಪಾರಂಪಾರಿಕ

ಮೌಲ್ಯಗಳಿಗೆ ಪ್ರಾಮುಖ್ಯತೆ ನೀಡುವ ಮೂಲಕ ಏಕ ಸೂತ್ರವೊಂದರ ಸಿದ್ಧತೆ ನಡೆಯತೊಡಗಿತು. ಈ ನೆಲದ ಸಂಸ್ಕೃತಿಯ ಪ್ರತೀಕ ಮತ್ತು ಮೌಲ್ಯಗಳೆನಿಸಿದ ಧಾರ್ಮಿಕ ಮೌಲ್ಯ, ಪಾರಂಪರಿಕ ಬದ್ಧತೆಗಳನ್ನು ಒಪ್ಪಿಕೊಳ್ಳಬೇಕಾದದ್ದು ಅನಿವಾರ್ಯವಾಯ್ತು. ಇದರ ಪರಿಣಾಮವಾಗಿ ಭಾರತೀಯ ಸಮೂಹವನ್ನು ಒಂದು ಚೌಕಟ್ಟಿಗೆ, ಪರಂಪರೆಯ ಒಳಗೆ ತರುವ ಪ್ರಯತ್ನಗಳಾದವು. ಇಲ್ಲಿನ ಬಹುಮುಖ ಸಂಸ್ಕೃತಿಯಲ್ಲಿ ರಾಷ್ಟ್ರೀಯ ಕಲ್ಪನೆಯ ಮೌಲ್ಯಗಳನ್ನು ಕಂಡುಕೊಳ್ಳುವ ಸಾಧ್ಯತೆಗಳಿದ್ದುದು ಕಥನ ಗೀತೆಗಳ ಮೂಲಕ. ಆದರೆ ಇದು ಕೂಡ ಹಾಗೆಯೇ ಉಳಿದುಬಿಡಲಿಲ್ಲ. ಅನೇಕ ವಿಚಾರಗಳಲ್ಲಿ ತನ್ನೊಳಗಿನ ಹುಳುಕನ್ನು ತಿದ್ದುವ, ಪರಿಷ್ಕರಿಸುವ ಮೂಲಕ ತನಗೆ ತಾನು ಮುಖಾಮುಖಿಯಾಗತೊಡಗಿತು. ಈ ಪರಿಣಾಮ ಹೊಸತೊಂದು ಆಧುನಿಕ ಮೌಲ್ಯಗಳು ಹುಟ್ಟಿಕೊಂಡವು. ಈ 'ಆಧುನಿಕತೆ' ಎಂಬುದು ಒಳಗಿನ ಶುದ್ಧೀಕರಣ ಮತ್ತು ಹೊಸ ಮೌಲ್ಯಗಳ ನಡುವಣ ಸ್ವಾಗತ ಮತ್ತು ಸಂಘರ್ಷವಾಯಿತು. ಹಲವು ಬಗೆಯ ಅಂತರ್ ವಿರೋಧಗಳುಳ್ಳ ಸಮಾಜವೊಂದು ಏಕೀಕೃತವಾಗಿ ವಸಾಹತುಶಾಹಿಯ ಪರಿಣಾಮಗಳನ್ನು ಎದುರಿಸಬೇಕಾಯ್ತು. ಈ ಹಂತದಲ್ಲಿ ವಸಾಹತುಶಾಹಿ ಆಧುನಿಕತೆಯನ್ನು ತನ್ನ ಮೌಲ್ಯಗಳ ಸಮರ್ಥನೆಗಾಗಿ ಬಳಸಿಕೊಳ್ಳತೊಡಗಿದ್ದನ್ನು ಕಾಣುತ್ತೇವೆ. ಇದಕ್ಕೆ ಪರ್ಯಾಯವಾಗಿ ವಸಾಹತುಶಾಹಿಯನ್ನು ವಿರೋಧಿಸುವ ಹೊಸ ತಂತ್ರವೊಂದನ್ನು ರೂಪಿಸಿಕೊಂಡ ಭಾರತೀಯ ಮನಸ್ಸು ರಾಷ್ಟ್ರೀಯವಾದ ಮತ್ತು ಪರಂಪರೆಯ ಮೌಲ್ಯದ ಪುನರ್ ಸ್ಥಾಪನೆ ಮತ್ತು ನವೀಕರಣದ ಮೂಲಕ ಪ್ರತಿಕ್ರಿಯೆ ನೀಡಲಾರಂಭಿಸಿತು. ಪರಕೀಯವಾದ ಎಲ್ಲಾ ಬಗೆಯ ದಾಸ್ಯವನ್ನು ತೊಡೆದು ಒಗೆಯಬೇಕೆಂಬ ಚಿಂತನೆಯೇ ರಾಷ್ಟ್ರೀಯವಾದದ ಒಳತುಡಿತವಾಯಿತು. ಬ್ರಿಟಿಷ್ ವಸಾಹತುವಿನೊಂದಿಗೆ ಬಂದ ಪಾಶ್ಚಾತ್ಯ ಸಂಸ್ಕೃತಿಯನ್ನು ನಮ್ಮ ಸಂಸ್ಕೃತಿಯ ಮೌಲ್ಯಗಳ ಮೂಲಕ ಧಿಕ್ಕರಿಸುವುದು ರಾಷ್ಟ್ರೀಯತೆಯ ದ್ಯೋತಕವಾಯಿತು. ಈ ಕಾರಣಕ್ಕಾಗಿಯೇ ಅರವಿಂದ ಘೋಷ, ತಿಲಕ, ಗಾಂಧಿ ಮೊದಲಾದವರು ಭಾರತೀಯ ಪರಂಪರೆಯ ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳ ಮೂಲಕ ಪರ್ಯಾಯ ಮಾರ್ಗವನ್ನು ಕಟ್ಟಿಕೊಂಡರು. ಸ್ವಾತಂತ್ರ್ಯಪೂರ್ವದಲ್ಲಿ ಉಂಟಾದ ವಿಚಾರಜಾಗೃತಿಯ ಮುಖ ಪರಂಪರೆ ಮತ್ತು ಧಾರ್ಮಿಕ ಮೌಲ್ಯಗಳ ಸ್ವರೂಪ ಕುರಿತದ್ದೇ ಆಗಿತ್ತು. ಮಾನಸಿಕ ದೃಢತೆಯನ್ನು ಪಡೆಯಲು ನಮ್ಮ ರಾಜಕೀಯ ನಾಯಕರುಗಳಿಂದ ತೊಡಗಿ ಡಿ.ವಿ.ಜಿ.ಯವರ ತನಕದ ಕವಿಗಳಿಗೆ ಬಲ ದೊರೆತದ್ದು ಪರಂಪರೆಯ ಮೌಲ್ಯಗಳಲ್ಲೇ. ವೈಜ್ಞಾನಿಕ ಸತ್ಯಗಳಿಗಿಂತಲೂ ಪಾರಮಾರ್ಥಿಕ ಸತ್ಯವನ್ನು ತರ್ಕಾತೀತವಾಗಿ ಜನಸಮೂಹ ಒಪ್ಪಿಕೊಂಡಿತು. ಈ ಕಾರಣದಿಂದಲೇ ಅಂದಿನ ಸಾಹಿತ್ಯ ನಮ್ಮ ಸಂಸ್ಕೃತಿ ಮತ್ತು ಅದರ ಮೌಲ್ಯಗಳ ಸಮರ್ಥನೆಗೆ ಹೊಸ ನೆಲೆಯ ಪ್ರತಿಪಾದನೆಯ ದಾರಿ ಹಿಡಿಯಿತು. ಹಳೆಯದನ್ನು ಹೊಸ ರೂಪದಲ್ಲಿಡುವ ಪ್ರಯತ್ನ ನಡೆಯಿತು. ಧಾರ್ಮಿಕ ಮೌಲ್ಯಗಳ ಪುನರುತ್ಥಾನವೂ ನಡೆಯತೊಡಗಿತು. ಈ ಹಂತದಲ್ಲಿ ಈ ರಾಷ್ಟ್ರೀಯತೆ ಮತ್ತು ಸಾಂಪ್ರದಾಯಿಕ ಮೌಲ್ಯಗಳ ಪುನರ್‌ಸ್ಥಾಪನೆಯು ನೈಜ ಸಮಸ್ಯೆಗಳ ಆಳಕ್ಕೆ ಇಳಿಯದಂತೆ ಮಾಡಿದುದು ಸಮಕಾಲೀನ ದಾಸ್ಯ ಹೋರಾಟದ ಅನಿವಾರ್ಯತೆ

ಆಗಿತ್ತೆಂಬುದು ಸ್ಪಷ್ಟ. ಈ ಸಂದರ್ಭದಲ್ಲಿ ತನ್ನೊಳಗಿನ ಹುಳುಕಿನದಕ್ಕಿಂತ ಹೊರಗಿನದರ ವಿರುದ್ಧದ ಹೋರಾಟವೇ ಪ್ರಮುಖವಾಯಿತು. ಈ ಕಾರಣಕ್ಕಾಗಿ ಅನಿವಾರ್ಯವಾಗಿ ಸ್ಥಳೀಯ ಸಾಂಸ್ಕೃತಿಕ ಮೌಲ್ಯಗಳಿಗಿಂತ (ರಾಷ್ಟ್ರೀಯತೆ ಹಿನ್ನೆಲೆಯಲ್ಲಿ) ಭಿನ್ನವಾಗಿ ವಿಶಾಲವಾದ ರಾಷ್ಟ್ರೀಯತೆಯ ರಾಜಕೀಯ ಮೌಲ್ಯಗಳನ್ನು ಹೊಂದಬೇಕಾದುದು ಆಗಿನ ಕಾಲದ ತುರ್ತಾಗಿತ್ತು.

ಹೊರ ಮತ್ತು ಪರಕೀಯ ಸಂಸ್ಕೃತಿ ವಿರುದ್ಧ ದೇಶದ ಎಲ್ಲಾ ಜನರನ್ನು ಒಗ್ಗಟ್ಟಾಗಿಸುವುದು ರಾಷ್ಟ್ರೀಯ ಹೋರಾಟದ ಗುರಿಯಾಗಿದ್ದು, ನಾಡಿನೊಳಗಣ ಜಾತಿ, ವರ್ಗ, ಶ್ರೇಣೀಕರಣದ ಪರಸ್ಪರ ಹೋರಾಟ ರಾಷ್ಟ್ರೀಯ ಚಿಂತನೆಗೆ ವಿರೋಧಿಯಾಗಿದುದ್ದರಿಂದ ಮಹತ್ವ ಪಡೆದುಕೊಳ್ಳಲಿಲ್ಲ. ಮೊದಲ ಹಂತದಲ್ಲಿ ಹಳೆಯದನ್ನು ಪರಿಷ್ಕರಿಸಿ ಹೊಸರೂಪದಲ್ಲಿಡುವ ಕೆಲಸವಷ್ಟೇ ನಡೆಯಿತು. ಭಾರತದ ಮತ್ತು ಕರ್ನಾಟಕದ ಸಾಂಸ್ಕೃತಿಕ ರೂಪವನ್ನು ಧಾರ್ಮಿಕ, ಸಾಮಾಜಿಕ, ಜಾನಪದದ, ಆಧ್ಯಾತ್ಮಿಕ ದೃಷ್ಟಿಗಳಿಂದ ನಿರೂಪಿಸಲಾಯಿತು. ಹಳೆಯದನ್ನು ಬಿಡದೆ ಹೊಸದಾಗಿ ಹೇಳುವ ಪ್ರಯತ್ನವನ್ನು ಮಾಡಲಾಯಿತು.

ವಸಾಹತುಷಾಹಿ ಆಗಮನದಿಂದ ಉಂಟಾದ ಮತ್ತೊಂದು ಮಹತ್ತರ ಪರಿಣಾಮವೆಂದರೆ ಅವರು ನೀಡಿದ ಶಿಕ್ಷಣ ವ್ಯವಸ್ಥೆ ಮತ್ತು ಇಂಗ್ಲೀಷ್ ಶಿಕ್ಷಣ ಆ ಮೂಲಕ ಅನಾವರಣಗೊಂಡ ಇಂಗ್ಲೀಷ್ ಸಾಹಿತ್ಯ ಚಿಂತನೆ ಮತ್ತು ಯುರೋಪಿನ ಸಾಂಸ್ಕೃತಿಕ ಜಗತ್ತು ಬ್ರಿಟೀಷರ ವಸಾಹತುಶಾಹಿ ತನ್ನೊಳಗಿನ ಅನಿಷ್ಟಗಳನ್ನು ಗುರುತಿಸುವುದು ಸಾಧ್ಯವಾಗುವಂತೆ ಮಾಡಿತು. ಪುರೋಹಿತಷಾಹಿ ವ್ಯವಸ್ಥೆಯಲ್ಲಿನ ಜಾತಿ ಪದ್ಧತಿಯ, ಶೋಷಣೆಯ ಕ್ರೂರ ಸ್ವರೂಪ, ಜಮೀನ್ದಾರಿ ಪದ್ಧತಿಯೊಳಗಿನ ಅಸಹನೀಯ ಬದುಕು ತನ್ನಿಂದ ತಾನೇ ತೆರೆದು ತೋರಲಾರಂಭಿಸಿತು. ವಸಾಹತುಷಾಹಿಯು ಪ್ರಗತಿಪರತೆ ಮತ್ತು ಪರಿಷ್ಕಾರಕ ಚಿಂತನೆಗಳನ್ನು ಒಳಗಿಂದೊಳಗೆ ಮೂಡಿಸತೊಡಗಿದ್ದು ಸತ್ಯ. ಜನಸಮೂಹದ ಒಳ ಬದುಕನ್ನು ಸೂಕ್ಷ್ಮವಾಗಿ ನೋಡುವ ಮನೋಧರ್ಮವನ್ನು ವಸಾಹತುಷಾಹಿ ಹುಟ್ಟು ಹಾಕಿತು. ಕೆಳಜಾತಿ, ವರ್ಗದ ಬದುಕು ವಸಾಹತುಷಾಯ ಪರಿಣಾಮಕ್ಕೆ ಒಳಗಾಗಿ ಭಿನ್ನ ನೆಲೆಯಲ್ಲಿ ಅನಾವರಣಗೊಳ್ಳತೊಡಗಿತು. ಆಧ್ಯಾತ್ಮಿಕ ಸತ್ವ, ಮೌಲ್ಯಗಳನ್ನು ಪುರೋಹಿತಷಾಹಿ ಮತೀಯ ಮೌಢ್ಯಗಳೊಳಗೆ ಸೇರಿಸಿ ಹಾಳುಗೆಡವಿದೆ. ಆದ್ದರಿಂದ ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಪರಂಪರಾಗತವಾಗಿ ಮುಕ್ತಗೊಳಿಸುವ ಕಾರ್ಯವೂ ನಡೆಯಿತು. ಈ ರೀತಿಯ ಪ್ರಕ್ರಿಯೆಯನ್ನೇ 'ವಸಾಹತುಶಾಹಿಯೊಂದಿಗಿನ ಸಂಘರ್ಷ ಮತ್ತು ಸ್ವಾಗತ'ವೆಂದು ಗುರುತಿಸುವುದು. ಬ್ರಿಟಿಷ್ ಶಿಕ್ಷಣ ಮತ್ತು ಇಂಗ್ಲೀಷ್ ಶಿಕ್ಷಣದ ಮೂಲಕ ಹೊಸಬಗೆಯ ಸಾಂಸ್ಕೃತಿಕ-ಸಾಹಿತ್ಯಿಕ ಬದುಕು ರೂಪುಗೊಳ್ಳತೊಡಗಿತು. ಈ ಹಿನ್ನೆಲೆಗಳಲ್ಲಿಯೇ ಕನ್ನಡ ಸಾಹಿತ್ಯದ ರೂಪುರೇಷೆಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ನವೋದಯ ಸಾಹಿತ್ಯವೆಂಬುದು ಆಧುನಿಕ ಚಿಂತನೆಯೆಂದು ಕರೆಯಲಾಗುವು ಈ ಪರಿಸ್ಥಿತಿಯ ಹುಟ್ಟಾಗಿದೆ. ವಸಾಹತುಷಾಹಿ ಅನುಭವ ಭಾರತೀಯ ಬದುಕಿನ ಹಲವು ರಂಗಗಳಲ್ಲಿ ಉಂಟುಮಾಡಿದ ಪ್ರಭಾವದ ಪ್ರತಿಕ್ರಿಯೆಯಾಗಿ ಹುಟ್ಟಿದ ಆಲೋಚನ ಕ್ರಮವನ್ನು ಈ ನವೋದಯ ಸಾಹಿತ್ಯದಲ್ಲಿ ಕಾಣುತ್ತೇವೆ. ಕನ್ನಡ ನವೋದಯದಲ್ಲಿ ಹೀಗೆ ಸಂಸ್ಕೃತಿಯ ಕಡೆಗೆ ಮರಳುವ ಪ್ರಕ್ರಿಯೆಯಿದೆ.

ನಮ್ಮ ನಾಡು ನುಡಿಯ ಬಗ್ಗೆ, ಸಂಸ್ಕೃತಿಯ ಬಗ್ಗೆ ಉಂಟಾದ ಜಾಗೃತಿಯು ಪರೋಕ್ಷವಾಗಿ ರಾಷ್ಟ್ರೀಯವಾದದ ಮೂಲವಾಗಿತ್ತು. ನಮ್ಮ ಸಂಸ್ಕೃತಿಯು ಘನತೆಯಿಂದ ಬಾಳಿದ, ಶ್ರೇಷ್ಠತೆಯನ್ನು ಮೆರೆದ ಮೌಲ್ಯಗಳ ಕಡೆಗೆ ಚಲಿಸುವುದು ಅನಿವಾರ್ಯವಾಗಿತ್ತು. ಅಷ್ಟೇ ಅಲ್ಲದೆ ವಾಸ್ತವ ಬದುಕಿನ ಹುಳುಕುಗಳನ್ನು ಎತ್ತಿಹಿಡಿಯಲು ಜಾಗತಿಕ, ರಾಷ್ಟ್ರೀಯ ಮೌಲ್ಯಗಳ ಕಡೆಗೆ ಸಾಗಬೇಕಿತ್ತು. ಏಕೆಂದರೆ ವಸಾಹತುಷಾಹಿ ಪಾಶ್ಚಾತ್ಯ ಸಂಸ್ಕೃತಿಯ ವಿರುದ್ಧವಾಗಿ ನಮ್ಮ ಸಂಸ್ಕೃತಿಯ ಅಂತಃಶ್ಚೇತನ, ಮೌಲ್ಯಗಳನ್ನು ಪುನರ್ ನಿರ್ಮಿಸಿ ಅದನ್ನು ಹೋರಾಟದ ಮೌಲ್ಯಗಳನ್ನಾಗಿ ಮಾಡಿಕೊಳ್ಳುವ ಅಗತ್ಯವಿತ್ತು. ಬ್ರಿಟಿಷ್ ವಸಾಹತುಷಾಹಿ ಉಂಟುಮಾಡಿದ, ಭಾರತೀಯ ಸಂಸ್ಕೃತಿ, ಧೋರಣೆಗಳು ಅವೈಚಾರಿಕವೆಂದೂ ಭಾರತೀಯರಿಗೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಪ್ರಗತಿ ಸಾಧನೆಗೆ ವಸಾಹತುಷಾಹಿಯೇ ಆಧುನಿಕ ರೂಪವೆಂಬುದನ್ನು ಅಂತರ್ಗತವಾಗಿ ಸಾಧಿಸತೊಡಗಿತ್ತು. ತಮ್ಮ ಸಂಸ್ಕೃತಿ ಕೂಡ ಘನತೆಯಿಂದ ಬಾಳಿದ, ಸಂಭ್ರಮದಿಂದ ಮೆರೆದ ಘಟ್ಟವೊಂದಿತ್ತು ಎಂದು ತನ್ನ ಸಂಸ್ಕೃತಿಯ ಮೌಲ್ಯಗಳನ್ನು ಮುಖಾಮುಖಿಯಾಗಿಸುವ ಕೆಲಸ ಭಾರತೀಯರಿಗೆ ಅನಿವಾರ್ಯವಾಗಿತ್ತು. ಇದಕ್ಕೆ ಪೂರಕವಾಗಿ ವಸಾಹತುಶಾಹಿ ಅನುಭವವು ಐತಿಹಾಸಿಕ, ಧಾರ್ಮಿಕ ಗತವೈಭವಗಳ ನೆನಪುಗಳನ್ನು ವೈಭವೀಕರಿಸತೊಡಗಿತು. ಈ ಅನುಭವದಿಂದ ಸಮಾಜದಲ್ಲಿ ಆಗುತ್ತಿರುವ ಬದಲಾವಣೆ ದೇಸಿಯ ಪರಂಪರೆಯಲ್ಲಿ ಸತ್ವ ಹುಡುಕುವುದರ ಜೊತೆಗೆ ಮತ್ತು ಆ ಮೂಲಕ ಸಂಘರ್ಷ ತೋರಲು ಪ್ರಯತ್ನಿಸಿದರು. ಇಂತಹ ಸಂದರ್ಭದಲ್ಲಿ ನಮ್ಮವರು ನೆಲೆಯನ್ನು ಕಂಡುಕೊಂಡದ್ದು ಧಾರ್ಮಿಕ ಚೌಕಟ್ಟಿನಲ್ಲಿ. ಕಥನ ಗೀತೆಗಳ ಪಾತ್ರ ಮತ್ತು ಮೌಲ್ಯಗಳ ವೈಭವೀಕರಣವು ಸಾಹಿತ್ಯ ರೂಪಗಳಲ್ಲಿ ಪ್ರಕ್ರಿಯೆಯಾಗಿ ಮರುಹುಟ್ಟು ಪಡೆಯಲಾರಂಭಿಸಿತು. ನಮ್ಮ ಕವಿಗಳು ಕಥನಗೀತೆಗಳು ಹಾಗೂ ಈ ನೆಲದ ಸಾಂಸ್ಕೃತಿಕ ವೀರರ ಚಿತ್ರಗಳನ್ನು ಕಟ್ಟುವುದರ ಮೂಲಕ ಪರಕೀಯವಾದ ವಸಾಹತುಷಾಹಿ ಜತೆಗೆ ಮುಖಾಮುಖಿಯಾದರು. ಇಲ್ಲಿನ ಬದುಕಿಗೆ ಗಟ್ಟಿತನ, ಶ್ರದ್ಧೆ ಇದ್ದದ್ದು ಧಾರ್ಮಿಕ ಸಂಸ್ಕೃತಿಯಲ್ಲಿ, ಧಾರ್ಮಿಕ ನಾಯಕರೆಲ್ಲಾ ಬಹುತೇಕ ಕಥನಗೀತೆಗಳ ಅಲ್ಲದೆ ನಾಯಕರೆ, ಧರ್ಮ ಪುರಾಣಗಳು ಈ ಸಂಸ್ಕೃತಿಯ ಒಳ ಚೈತನ್ಯವಾಗಿದ್ದವು. ಅದನ್ನೆ ಸಾಹಿತಿಗಳೂ ರೂಢಿಸಿಕೊಂಡಿದ್ದು ಅನಿವಾರ್ಯವಾಗಿತ್ತು. ಇಂಗ್ಲೀಷ್, ಭಾಷೆ ಶಿಕ್ಷಣ ಮತ್ತು ಸಾಹಿತ್ಯದ ಮೂಲಕ ರಾಷ್ಟ್ರಮಟ್ಟದುದ್ದಕ್ಕೂ ವ್ಯಾಪಿಸಿಕೊಳ್ಳುತ್ತಿದ್ದ ವಸಾಹತುಷಾಹಿ ಶಕ್ತಿಗೆ ಎದುರಾಗಿ ಕನ್ನಡ ಸಾಹಿತ್ಯ ತನ್ನ ಪರಂಪರೆ ಮತ್ತು ಸಾಂಸ್ಕೃತಿಕ ಅನುಭವಗಳ ಖಣಿಯಾಗಿದ್ದ ಪ್ರಾಚೀನ ಮಾರ್ಗ ಮತ್ತು ದೇಸಿಗಳೆರಡನ್ನು ಒಟ್ಟಿಗೆ ಎತ್ತಿಹಿಡಿದು ನಡೆಯಬೇಕಾಗಿದ್ದುದು ಅವತ್ತಿನ ಅನಿವಾರ್ಯವಾಗಿತ್ತು. "ಕನ್ನಡ ನವೋದಯದಲ್ಲಿ ಹೀಗೆ ಸಂಸ್ಕೃತಿ ಕಡೆಗೆ ಮರಳುವ ಪ್ರಕ್ರಿಯೆಯಿದೆ ಮನುಷ್ಯನ ವೈಯುಕ್ತಿಕ ನಂಬಿಕೆಗಳು, ಹಳೆಯ ಗವರ್ನಿಂಗ್ ಮಾದರಿಗಳ ಹುಡುಕಾಟ, ಗ್ರಾಮ ಸಮಾಜದ ಬದಲಾವಣೆಯ ಪರಿಕಲ್ಪನೆಯ ಮೂಲಕವೂ ರಾಷ್ಟ್ರೀಯತೆಯನ್ನು ಕಾಣುವ ಪ್ರಯತ್ನ ಮಾಡಲಾಗಿದೆ. ರಾಷ್ಟ್ರೀಯತೆಯನ ಕಲ್ಪನೆಯೇ ಮನುಷ್ಯನ ಹೃದಯದಲ್ಲಿ ಸ್ಥಾಪಿತವಾಗುವ ಒಂದು ಭಾವನಾತ್ಮಕ ಪ್ರಕ್ರಿಯೆಯಾಗಿರುವುದರಿಂದ ನವೋದಯವು ಅದನ್ನು ಹಿಡಿಯುವ ಪ್ರಯತ್ನ ಮಾಡಿದೆ. ರಾಷ್ಟ್ರೀಯ

ಪರವಾದ ನಿಲುವುಗಳು ಪು.ತಿ.ನ ರಂತವರಿಗೆ ಹಳೆಯ ಮಾದರಿಳನ್ನು ಭಿನ್ನವಾಗಿ ಗ್ರಹಿಸುವಂತೆ ಮಾಡಿದೆ. ಬ್ರಿಟಿಷ್ ರಾಜಸತ್ತೆಯ ವಿರುದ್ಧ ಬಂದಿರುವ ನಿಲುವು ಇದು. ಇದು ಪು.ತಿ.ನ. ಅವರಿಗೆ ಕೃಷ್ಣನೇ ದೊಡ್ಡ ಶಕ್ತಿಯಾಗಿ ಕಾಣುತ್ತಾನೆ. (ಕೇಶವ ಶರ್ಮ.ಕೆ, ಶಬ್ದರೇಖೆ, ಪು.೩೦) ಈ ಸಾಹಿತ್ಯ ಸೃಷ್ಟಿಕ್ರಿಯೆ ಕೂಡ ಸಾಂಸ್ಕೃತಿಕ ಪ್ರತಿತಭಟನೆಯ ಪ್ರಕ್ರಿಯೆ ಆಗಿಯೇ ಅಭಿವ್ಯಕ್ತಿಯಾಗಿದೆ. ಸಾಹಿತ್ಯದಲ್ಲಿ ಈ ಪ್ರಕ್ರಿಯೆ ಸ್ವಸಂಸ್ಕೃತಿ ಮೌಲ್ಯ ಶೋಧನೆ ಮತ್ತು ವೈಭವೀಕರಣ ಕ್ರಿಯೆಗಳಿಗೆ ಹೊರಳುತ್ತದೆ. ಇಂಗ್ಲೀಷ್ ಸಾಹಿತ್ಯ ಪ್ರಭಾವದಿಂದ ಬರೆದ ಸಾಹಿತ್ಯದ ರೂಪ ಹೊಸದಾಗಿ ಕಾಣಿಸಿದರೂ ವಸಾಹತುಷಾಹಿ ಇಲ್ಲಿನ ಸಂಸ್ಕೃತಿಯನ್ನು ಏಕಾಏಕೀಯಾಗಿ ದಾಳಿ ಮಾಡತೊಡಗಿದಾಗ ಇಲ್ಲಿನ ಸಂಸ್ಕೃತಿ ತನ್ನ ಮೌಲ್ಯಗಳಿಗಾಗಿ ಅಂತಃಸತ್ವಕ್ಕಾಗಿ ತಡಕಾಡಿದ್ದು ಕಥನ ಗೀತೆಗಳ ಮೂಲಕ ಹೊಸ ಮೌಲ್ಯಗಳ ಪುನರುತ್ಥಾನಕ್ಕೆ ದಾರಿ ಮಾಡಿಕೊಟ್ಟಿತು. ಜನತೆಯಲ್ಲಿ ಆದರ್ಶವಾದ, ಮಾನವತಾವಾದ, ಗಾಂಧಿವಾದದಂತಹ ಅನೇಕ ಸಿದ್ಧಾಂತ, ವಾದಗಳು ಹುಟ್ಟಿಕೊಂಡವು. ಕ್ರಮೇಣ ಈ ಪ್ರವೃತ್ತಿ ವಸಾಹತುಶಾಹಿ ವಿರೋಧದಿಂದಾಗಿ ವಾಸ್ತವವನ್ನು ಆದರ್ಶೀಕರಿಸುವ ಕ್ರಿಯೆಗೆ ಮೂಲವಾಯಿತು.

"ಇನ್ನೊಂದು ಕಡೆ ಅತ್ಯಂತ ಮಾರಕವಾದ ಪರಿಣಾಮವೆಂದರೆ ಗತಕಾಲದ ಮರುಹಂಬಲದ ಧೋರಣೆ (Nostalgian) ಈ ಧೋರಣೆಯಿಂದಾಗಿ ಗತಕಾಲದಲ್ಲಿ ದೇಶೀಯ ಸಂಸ್ಕೃತಿ ಅತ್ಯಂತ ಆರೋಗ್ಯಕರವಾಗಿತ್ತೆನ್ನುವ ಭ್ರಮೆ ಹುಟ್ಟಿಕೊಳ್ಳುತ್ತದೆ. ವಾಸ್ತವದಿಂದ ವಿಮುಖವಾಗುವ ಈ ಧೋರಣೆ ಒಂದು ಸಂಸ್ಕೃತಿಯ ಮನಸ್ಸನ್ನು ಸಂಪೂರ್ಣ ಹದಗೆಡಿಸಬಲ್ಲುದು" (ರಾಜೇಂದ್ರ ಚೆನ್ನಿ, ಪುಟ:೩೦) ಇರುವ ವಸ್ತುಸ್ಥಿತಿಗಿಂತ ಭಿನ್ನವಾಗಿ ಆದರ್ಶಿಕೃತ ಕಲ್ಪನೆ ಚಿತ್ರಣಗಳೇ ಸತ್ಯವೆಂಬ ಹುಸಿ ಭ್ರಮೆಯನ್ನು ಹುಟ್ಟಿಸಿಬಿಡುತ್ತದೆ. ತನ್ನ ನಿಜ ಸತ್ವವನ್ನು ಕಳೆದುಕೊಂಡಿದ್ದ ಭಾರತೀಯ ಸಂಸ್ಕೃತಿಯು ಪರಕೀಯ ಸಂಸ್ಕೃತಿಯ ದಾಳಿಯಿಂದ ಮರುಚೇತನ ಪಡೆದುಕೊಳ್ಳಲು ಸಾಧ್ಯವಾಯಿತು. ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಇದು ಮುಖ್ಯ ಧಾರೆಯಾಗಿದ್ದೊಂದು ವಿಶೇಷ. ಜತೆಗೆ ಇಲ್ಲಿನ ಅನೇಕ ಪ್ರಾದೇಶಿಕ ಸಂಸ್ಕೃತಿಗಲು ತಮ್ಮ ನೆಲೆಗಳನ್ನು ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನಗಳು ಪ್ರಕ್ರಿಯೆಯಂತೆ ನಡೆದವು. ಕನ್ನಡದ ಮಟ್ಟಿಗೆ ಕನ್ನಡ ನಾಡೂ ನುಡಿ ಕುರಿತಾದ ಅಭಿಮಾನ ಈ ಪರ ನಿಲುವುಗಳಲ್ಲಿ ಇದನ್ನು ಕಾಣುತ್ತೇವೆ. ವಸಾಹತುಶಾಹಿಯ ಪರಿಣಾಮವಾಗಿ ರಾಷ್ಟ್ರೀಯತೆಯು ನೆಲದ ಬಹುಮುಖಿ ಸಂಸ್ಕೃತಿಯ ಅಪಾಯವಾಗಿ ಕಂಡು ಬಂದಾಗ ಪ್ರಾದೇಶಿಕ ಸಂಸ್ಕೃತಿಯ ವಿಶಿಷ್ಟತೆಯನ್ನು ಸಮರ್ಥಿಸಿಕೊಳ್ಳುವುದು ಅಂತರಾಳದ ಅಗತ್ಯ ಹಾಗೂ ಅನಿವಾರ್ಯವಾಗಿ ಮೂಡಿಯೂ ಬಂತು. ದೇಶಿವಾದಕ್ಕೆ ವಸಾಹತುಷಾಹಿ ರಾಷ್ಟ್ರೀಯತೆಗಿಂತ ಪ್ರಾದೇಶಿಕತೆ ಮುಖ್ಯವಾಗಿತ್ತು. ಈ ದೇಶಿವಾದವು ಹೊರಗಣ ಸಂಸ್ಕೃತಿಗೆ ಪ್ರತಿಸ್ಪರ್ಧಿಯಾಗಿ ಸ್ಥಳೀಯ ಸಂಸ್ಕೃತಿಯ ಮೌಲ್ಯ ವಿಶೇಷಗಳನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದೆ. ಆದರೆ ತನ್ನದೇ ಆದ ಅನನ್ಯ ಸತ್ವ ಶೀಲತೆಯನ್ನು, ಸೃಷ್ಟಿ ಶೀಲತೆಯನ್ನು ಎಚ್ಚರಿಸುವುದರ ಜೊತೆಗೆ ರಕ್ಷಿಸುವ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತದೆ. ಈ ಸಂಸ್ಕೃತಿಯ ಬದುಕಿನ ಸತ್ವಶೀಲತೆಯನ್ನು ನಾಶಪಡಿಸುವ ಆಂತರಿಕ ಬಾಹ್ಯ ಚಿಂತನೆಗಳನ್ನು ನಿರಾಕರಿಸುವ, ವಿರೋಧಿಸುವ ಮೂಲಕ ದೇಶಿವಾದ ತನ್ನ ಪ್ರತಿಭಟನೆಯನ್ನು ತೋರುತ್ತದೆ.

ಜೊತೆಗೆ ವಸಾಹತುಶಾಹಿ ತನ್ನ ಇಂಗ್ಲೀಷ್ ಶಿಕ್ಷಣದ ಸಾಹಿತ್ಯದ ಪರಿಣಾಮ ಕನ್ನಡದಲ್ಲಿ ಅನೇಕ ರೀತಿಯ ಅಭಿವ್ಯಕ್ತಿ ಮಾಧ್ಯಮಗಳಿಗೆ ಕಾರಣವಾಯ್ತು. ಕಥೆ-ಕಾದಂಬರಿ-ನಾಟಕ ಭಾವಗೀತೆ ಮುಂತಾದ ಪ್ರಕಾರಗಳು ಹುಟ್ಟಿಕೊಂಡವು. ವಸಾಹತುಶಾಹಿ ಉಂಟು ಮಾಡಿದ ಈ ಬದಲಾವಣೆ ಕೇವಲ ಆಶಯಗಳಿಗಷ್ಟೇ ಸೀಮಿತಾಗದೆ ತಾನು ಅಭಿವ್ಯಕ್ತಿಯಾಗಿ ಆಯ್ಕೆ ಮಾಡಿಕೊಳ್ಳುವ ಆಕೃತಿ ಮತ್ತು ಸಂವಹನದ ರೀತಿಯ ಮೇಲೂ ಪ್ರಭಾವ ಬೀರಿದೆ. ವಸಾಹತುಶಾಹಿ ಪ್ರಭಾವದಿಂದ ಹುಟ್ಟಿದ ಅಭಿವ್ಯಕ್ತಿ ಮಾಧ್ಯಮಗಳಿಗೂ ಪೂರ್ವ ಮಾಧ್ಯಮಗಳಿಗೂ ಭಿನ್ನತೆಗಳಿವೆ. ಅಲ್ಲದೆ ಈ ಮುಂಚೆ ಕನ್ನಡದಲ್ಲಿದ್ದ ಅನೇಕ ಪ್ರಕಾರಗಳನ್ನು ಪಾಶ್ಚಾತ್ಯ ಪ್ರಕಾರಗಳ ಜತೆ ಪರಿಷ್ಕರಿಸಿಕೊಂಡು ರಚಿಸಿ ಬೇರೆ ಬೇರೆ ಸಂದರ್ಭದಲ್ಲಿ ಅವುಗಳನ್ನು ಬಳಸಿಕೊಳ್ಳಲಾಗಿದೆ. ಇವುಗಳಲ್ಲಿ ಕೆಲವು ಆಮದುಗಳಿದ್ದಾಗ್ಯೂ ಅವು ಈ ನೆಲದ ಪರಂಪರೆಗೆ ಪರಿಷ್ಕಾರಗೊಂಡವು. ಇನ್ನು ಕೆಲವು ಮಹಾಕಾವ್ಯ ಪರಂಪರೆಯಿಂದ ಬಂದವು. ಮಹಾಕಾವ್ಯ ಪರಂಪರೆ ರೂಪದಿಂದಲೇ ಅವಿಷ್ಕಾರಗೊಂಡ ಕಥನಕವನ ರೂಪವನ್ನು ಇಂಗ್ಲೀಷ್‌ನ ಬ್ಯಾಲೆಡ್ ಜತೆ ಪರಿಷ್ಕರಿಸಿಕೊಳ್ಳಲಾಯ್ತು. ಅಭಿವ್ಯಕ್ತಿಯ ಅಗತ್ಯಕ್ಕೆ, ಸಂವಹನ ಸಾಧ್ಯತೆಗೆ ಒಗ್ಗಿಸಿ ರೂಪಿಸಿಕೊಳ್ಳಲಾಯ್ತು. ಹಳೆಯ ರೂಪಗಳನ್ನು ಕೈ ಬಿಡದೆ ಹೊಸ ರೂಪಗಳನ್ನು ದೂರವಿಡಲಾಗದೆ ಹೊಸ ರೂಪದಲ್ಲಿಯೇ ಅವುಗಳೆಲ್ಲವೂ ಉಳಿದುಕೊಂಡವು. ಕನ್ನಡದ ಮೊದಲ ಸಾಲಿನ ಕವಿಗಳು ಹೊಸತರಲ್ಲೂ ಕನ್ನಡ ಕಾವ್ಯ ಪರಂಪರೆಯ ಜತೆಯಲ್ಲೇ ಸಾಗಿಬಂದರು. ಅವುಗಳಲ್ಲೊಂದು ಮಹತ್ವದ ರೂಪವೇ ಕಥನಕವನಗಳು. ಮಹಾಕಾವ್ಯ ರೂಪಗಳು ನಮ್ಮ ಸಂಸ್ಕೃತಿಯ ಪರಂಪರೆಯ ಅಭಿವ್ಯಕ್ತಿಯ ಅಂತರಾಳದ ಬಯಕೆಗಳಾಗಿದ್ದವು. ಅಭಿವ್ಯಕ್ತಿ ರೂಪದ ಆಕೃತಿ ಅಥವಾ ಬದಲಾವಣೆಗಳೆಂದರೆ ಬರಿಯ ಕಥಾನಕ ರೀತಿ, ತಂತ್ರದ ವ್ಯತ್ಯಾಸವಲ್ಲ. ತಂತ್ರ, ಕೃತಿಯ ಅರ್ಥ, ಅರ್ಥ ಮತ್ತು ಜನಸಮೂಹದ ಭಾವುಕ ನಿಲುವುಗಳಿಗೆ ಅರ್ಥವತ್ತಾದ ಸಂಬಂಧವಿದೆ ಎಂಬುದು ಭಾರತೀಯ ಸಾಹಿತ್ಯದ ಜತೆ ಇರುವ ನಂಬಿಕೆಯಾಗಿದೆ. ಪಾಶ್ಚಾತ್ಯ ಪರಂಪರೆಯಿಂದ ಸಾಹಿತ್ಯ ಅಭಿವ್ಯಕ್ತಿ ಪ್ರಕಾರಗಳಲ್ಲಿ ಅನೇಕ ರೂಪಗಳು ಹುಟ್ಟಿಕೊಂಡವು. ಆದರೆ ಕಥನಕವನಗಳು ಹಾಡುಗಬ್ಬ ಪರಂಪರೆಯಿಂದ ಹುಟ್ಟಿಬಂದವು. ನಮ್ಮ ಪರಂಪರೆ ಮತ್ತು ಜನಪದ ಸಾಹಿತ್ಯದಲ್ಲಿ ಕಥೆ ಹೇಳುವ, ಕೇಳುವ ಪ್ರವೃತ್ತಿ ಬಲು ಪ್ರಾಚೀನವಾದುದು. ಗದ್ಯರೂಪದ ಈ ಪರಂಪರೆ ಕೇಳುಗನ ಒಲವಿನಂತೆ ಹಾಡುಗಬ್ಬವಾಗಿ ಹೇಳುಗನಿಂದಾಗಿ ಲಯಬದ್ಧವಾಗಿ ಹಾಡಲ್ಪಡುತ್ತಿತ್ತು. ಭಾರತೀಯ ಮೌಖಿಕ ಜಾನಪದ ಸಾಹಿತ್ಯ ಪರಂಪರೆಯಲ್ಲೇ ಈ ರೂಪವಿತ್ತು. ಪರೋಕ್ಷವಾಗಿ ವಸಾಹತು ಅಭಿವ್ಯಕ್ತಿ ರೂಪಗಳಿಗೆ ಸಾಟಿಯಾಗಿ ಭಾರತೀಯ ಅಥವಾ ಕನ್ನಡ ಪರಂಪರೆ ತನ್ನದ ಆದ ಕಥನಕವನ ರೂಪದ ಮೊರೆ ಹೊಕ್ಕಿದೆ ಎಂದರೂ ತಪ್ಪಾಗಲಾರದು. ಮಹಾಕಾವ್ಯ ಪರಂಪರೆಯ ಸಮೂಹ ಕಥನಕವನ ರೂಪವನ್ನು ಪುರಾಣ, ಐತಿಹಾಸಿಕ, ಘಟನೆ, ಪಾತ್ರಗಳ ಅದರಲ್ಲೂ ಭಾವಿಕ ನೆಲೆಯ ಅಭಿವ್ಯಕ್ತಿಗೆ ಬಳಸಿಕೊಂಡದ್ದು ಸಹಜವೇ ಆಗಿದೆ. ಪರಂಪರೆಯ ಮಹಾಕಾವ್ಯಾಭಿವ್ಯಕ್ತಿಯ ರೂಪದ ಸಂಕ್ಷೇಪ ಆಕೃತಿ ರೂಪವಾಗಿ ಕಥನಕವನ ರೂಢಿಗೆ ಬಂದಿದ್ದು, ಕ್ರಮೇಣ ಅದನ್ನು ಇಂಗ್ಲೀಷ್ ಸಾಹಿತ್ಯ ಪ್ರಕಾರದ "Lyrical Ballads" (ಭಾವನಾತ್ಮಕ ಪದ್ಯ

ಕಥೆಗಳು) ಜತೆ ಸಂಸ್ಕರಿಸಿ ಬಳಸಲಾಯ್ತು. ಸಾಮಾನ್ಯ ಜನರ ಜೀವನವನ್ನು-ಬದುಕಿನ ಏಳು-ಬೀಳು, ಧೀರತ್ವ ಮುಂತಾದ ಪದ್ಯ, ಕಥೆಗಳು ಒಬ್ಬರಿಂದ ಒಬ್ಬರಿಗೆ ಹರಿದು ಅವರವರ ಪ್ರತಿಭೆಗೆ ತಕ್ಕ ಹಾಗೆ ಬೆಳೆದು ನೆನಪಿಡಲು ಸಹಾಯಕವಾಗುವಂತೆ ಪ್ರಾಸ ಲಯಕ್ಕೆ ಬದ್ಧವಾಗಿ ಕಥನಕವನಗಳಾಗಿ ಬೆಳೆದುಬಂದವು. ಇಂತಹವುಗಳೇ ಶತಮಾನಗಳ ಹಿಂದಿನಿಂದ ಬೆಳೆದು ರಾಷ್ಟ್ರೀಯ ಮಹಾಕಾವ್ಯವಾಯಿತೆಂಬ ಅಭಿಪ್ರಾಯಗಳು ಇದೆ. ಇದು ಏಕಕಾಲಕ್ಕೆ ಮಧ್ಯಯುಗದ ಚರಿತ್ರೆಯ ದಬ್ಬಾಳಿಕೆಗೆ ತಳ ಸಮುದಾಯಗಳು ಪ್ರತಿಕ್ರಿಯಿಸಿದ ಕ್ರಮವಾಗಿದ್ದು, ತಮ್ಮ ಸಾಂಸ್ಕೃತಿಕ ನಾಯಕರನ್ನು ಸಾಮ್ರಾಟರ ಎದಿರು ಅತಿಮಾನುಷವಾಗಿ ವೀರರನ್ನಾಗಿಸಿಕೊಳ್ಳುವ ವಿಧಾನವಾಗಿದೆ. ಮಧ್ಯಯುಗದ ಊಳಿಗಮಾನ್ಯ ವ್ಯವಸ್ಥೆಯ ಹಿಂಸೆಯನ್ನು ಮರೆಯಲು ಕೂಡ ದೇಶಿ ಕಥನಗಳು ಸಮುದಾಯದ ಒಳಗೆ ಹುಟ್ಟಿಕೊಂಡವು. ಹಾಗಾಗಿಯೇ ಶಿಷ್ಟ ಕವಿಗಳು ರಾಜಾಶ್ರಯ ಪಡೆದು ರಾಜ್ಯಾಧಿಪತ್ಯವನ್ನು ಧಾರ್ಮಿಕ ಮಹಿಮೆಯನ್ನು ಪ್ರತಿಷ್ಠಾಪಿಸುವ ಕಾವ್ಯಗಳಲ್ಲಿ ತೊಡಗಿದ್ದರೆ, ಜನಪದ ಸಮಾಜವು ದೇಶಿ ಕಥನಗಳ ಮುಖಾಂತರ ತಮ್ಮ ಸಮಷ್ಠಿ ಸಾಮಾಜಿಕ ಚಹರೆಗಳನ್ನು ರಾಜಷಾಹಿಯ ಗಡಿಯಾಚೆಗೂ ವಿಸ್ತರಿಸುವಂತೆ ಕಟ್ಟಿಕೊಂಡಿದೆ. ಆದ್ದರಿಂದಲೇ ದೇಶೀ ಕಥನಗಳ ಸಾಂಸ್ಕೃತಿಕ ವೀರರು ಸ್ಥಾನೀಯ ಆಕೃತಿಯಲ್ಲಿ ಅನಾವರಣಗೊಂಡರೂ ಅವರ ತತ್ವದ ಮತ್ತು ಪರಿಣಾಮದ ರೀತಿಯಲ್ಲಿ ಸೀಮಿತ ವ್ಯಾಪ್ತಿಯನ್ನು ದಾಟಿ ಅಖಂಡ ಮಾದರಿಯೂ ಆಗಿ ಬಿಡುತ್ತಾರೆ. ಮಧ್ಯಯುಗದ ರಾಷ್ಟ್ರೀಯತೆಯು ಹಿಂದುತ್ವವನ್ನೇ ಪ್ರತಿಪಾದಿಸುತ್ತಿತ್ತೆಂಬುದು ತಿಳಿದ ಸಂಗತಿಯೇ. ಆದರೆ ದೇಶೀ ಕಥನಗಳು ರೂಪಿಸಿಕೊಂಡಿದ್ದ ರಾಷ್ಟ್ರೀಯತೆಯು ಇಲ್ಲಿ ಬೇರೆಯಾಗಿತ್ತು. ವಿಜಯನಗರ ಸಾಮ್ರಾಜ್ಯದ ದೊರೆತನಕ್ಕೂ ಅದೇ ಪರಿಸರದ ಕುಮಾರ ರಾಮನ ಮೂಲಕ ಜನಪದರು ಭಾವಿಸುತ್ತಿದ್ದ ನಾಡು ನುಡಿಯ ನೀತಿಗೂ ಅಂತರವಿದೆ. ದೇಶೀ ಕಥನಗಳ ಸಮುದಾಯಗಳಿಗೆ ರಾಜನಿಲ್ಲದ ಪಾಳೆಯಗಾರನಿಲ್ಲದ ಸಾಂಸ್ಕೃತಿಕ ರಾಷ್ಟ್ರೀಯತೆ ಇತ್ತು." (ಡಾ.ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪು.೭೦) ಅಲ್ಲದೆ "ಹನ್ನೆರಡನೆ ಶತಮಾನದ ನಂತರ ನಿಧಾನವಾಗಿ ಪುಟ್ಟ ಪುಟ್ಟ ಕಥನಗಳ ಮೂಲಕ ತಳ ಸಮುದಾಯಗಳು ತಮ್ಮ ಸಾಂಸ್ಕೃತಿಕ ವೀರರನ್ನು ಬೆಳೆಸಿ ಕೊಂಡಿದ್ದರಿಂದ ಅವರು ವಿಸ್ತರಿಸಿ ಹದಿನೈದು ಮತ್ತು ಹದಿನಾರನೆ ಶತಮಾನಗಳ ವೇಳೆಗೆ ಬೃಹತ್ ಕಥನವಾಗಿ ವ್ಯಾಪಿಸಿಕೊಂಡಿದ್ದಾರೆ." (ಅದೇ, ಪು:೭೧-೭೨)

* * *

## ಅಧ್ಯಾಯ ೫

# ಕಥನ  ಗೀತೆಗಳು ಮತ್ತು ಸಮಕಾಲೀನ ಸಂದರ್ಭ

ಆಧುನಿಕತೆ ಎಂದರೆ ಕೇವಲ ಭೌತಿಕ ಸ್ಥಿತಿಯ ಬದಲಾವಣೆಯಂದಷ್ಟೇ ಮಾತ್ರವಲ್ಲ ಬದಲಿಗೆ ನಮ್ಮ ಎಲ್ಲಾ ಆಲೋಚನ ಕ್ರಮಗಳಲ್ಲಿಯ ಬದಲಾವಣೆ ಕೂಡ ಆಗಿದೆ. ಸಮಕಾಲೀನ ಸಂದರ್ಭದಲ್ಲಿ ಬಹುತೇಕ ನಮ್ಮ ಆಲೋಚನಾ ಕ್ರಮಗಳೆಲ್ಲವೂ ಕೂಡ ಬದಲಾವಣೆ ಹೊಂದಿವೆ. ಈ ಆಧುನಿಕ ಆಲೋಚನೆಯ ಪರಿಣಾಮವಾಗಿ ಅಥವಾ ಆಧುನಿಕತೆಯ ಪರಿಣಾಮವಾಗಿ ಪ್ರತಿಯೊಂದು ಚಿಕ್ಕ ಚಿಕ್ಕ ಘಟಕಗಳಾಗಿ ವಿಭಜನೆ ಹೊಂದುತ್ತಾ ನೆಡೆದಿದೆ. ಇದು ವಿಶಾಲವಾದ ಜಾಗತಿಕ ಚೌಕಟ್ಟುಳ್ಳದ್ದು. ಇಂದಿನ ಸಾಮ್ರಾಜ್ಯಷಾಹಿಯ ಪ್ರಕ್ರಿಯೆಯೊಂದಿಗೆ ನೇರವಾದ ಸಂಬಂಧವನ್ನು ಹೊಂದಿದೆ. ಅಲ್ಲದೆ ಇದು ಕಾಲದ ನಿರಂತರತೆಯ ಜೊತೆಗೆ ಕೂಡ ನೇರವಾದ ಸಂಬಂಧವನ್ನು ಹೊಂದಿರುವಂತದ್ದು. ಆದರೆ ಜಾನಪದವೆಂಬುದು ಸಮಗ್ರ ಜೀವನ ಶೈಲಿಗೆ ಅನ್ವಯಿಸುವ ಪರಿಭಾಷೆ. ಇದನ್ನು ಇಡಿಯಾಗಿ ಗ್ರಹಿಸದೆ, ವಿಭಜಿಸುತ್ತಾ ಅಥವಾ ಕಂಪಾರ್ಟ್‌ಮೆಂಟಲೀರಕಿಸಿ ನೋಡುವುದು ವೈಯಕ್ತಿಕ ಹಿತಾಸಕ್ತಿಯಾಗುತ್ತದೆ. ಜಾನಪದದ ಅಖಂಡ ಸ್ವರೂಪವನ್ನು ಒಂದು ಮಾತಿನಲ್ಲಿ ಹೇಳುವುದಾದರೆ, ಕೃಷಿ ಪದ್ಧತಿಗಳು ಆಹಾರ ಕ್ರಮಗಳು, ವೈದ್ಯಕೀಯಗಳು, ವೈವಿಧ್ಯಮಯ ದುಡಿಮೆಗಳು, ಕಲೆ, ಮತ್ತು ಕ್ರೀಡೆಗಳು, ನಂಬಿಕೆ ಮತ್ತು ಆಚರಣೆಗಳು, ಸಸ್ಯ ಮತ್ತು ಪ್ರಾಣಿ ಪರಿಸರಗಳು, ಭೂಮಿ ಮತ್ತು ವಿಶ್ವರಚನೆಗಳು (ಇಲ್ಲಿರುವ ಬಹುವಚನ ಪ್ರತ್ಯಯ ಗಮನಾರ್ಹ) ಇವೆಲ್ಲವುಗಳನ್ನು ಒಳಗೊಂಡ ಜನಸಮುದಾಯಗಳ ನಡೆ ಮತ್ತು ನುಡಿಗಳೇ ಜಾನಪದ ಎನ್ನಬಹುದು. ಜಾನಪದದ ಈ ಸುವಿಶಾಲ ಅರ್ಥ ವ್ಯಾಪ್ತಿಯನ್ನು ಮರೆತು, ಅದನ್ನು ಸಾಹಿತ್ಯಕ್ಕಷ್ಟೇ ಸೀಮಿತಗೊಳಿಸಿ, ಸೋಬಾನೆ ಪದಗಳು, ಗರತಿಯ ಹಾಡುಗಳು, ಬೀದಿವರೆಯೆ ಬೀರನ ಕಥೆಗಳು, ಗೊರವರ ದುಂಡುಚಿಯೆಂಬ ಭಾವನೆಯಲ್ಲಿರುವುದು ಸರಿಯಲ್ಲ. (ವಿ.ಚಂದ್ರಶೇಖರನಂಗಲಿ, ಜಾಗತೀಕರಣ ಮತ್ತು ಜಾನಪದಗಳ ಬಹುಮುಖಿ ಸಂಬಂಧಗಳು, ಪು:೬೮) ಆಧುನಿಕತೆ ಮತ್ತು ಜಾನಪದದ ಬಹುಮುಖಿ ಸಂಬಂಧವನ್ನು ತಿಳಿಯಬೇಕಾದರೆ ಈ ಮೇಲಿನ ವಿವರಣೆಯೆಲ್ಲ ಅನಿವಾರ್ಯವಾಗಿ ಕಥನ ಗೀತೆಗಳನ್ನು ಆಧುನಿಕತೆ

ಅಥವಾ ಸಮಕಾಲೀನ ಸಂದರ್ಭದೊಂದಿಗೆ ಇಟ್ಟು ಚರ್ಚೆ ಮಾಡುವುದಕ್ಕಿಂತ ಮುಂಚೆ ಜಾನಪದ ಮತ್ತು ಆಧುನಿಕತೆಯೊಂದಿಗಿನ ಚರ್ಚೆಯನ್ನು ಅನಿವಾರ್ಯವಾಗಿ ಮಾಡಲೇಬೇಕಿದೆ. ಹಾಗಾಗಿಯೇ "ಜಾಗತೀಕರಣ ಮತ್ತು ಜಾನಪದ ಬಹುಮುಖಿ ಸಂಬಂಧಗಳನ್ನು ತಿಳಿಯಬೇಕಾದರೆ, ಅಮೇರಿಕಾ ಮತ್ತು ಕರ್ನಾಟಕ ಭಾರತ, ಇಂಗ್ಲೀಷ್ ಮತ್ತು ಕನ್ನಡ ಎಂಬ ನೆಲೆಗಳನ್ನೊಳಗೊಂಡಂತೆ ಒಟ್ಟಾಗಿ ಗ್ರಹಿಸಬೇಕಾಗುತ್ತದೆ. ಜಾಗತೀಕರಣ ಮತ್ತು ಜಾನಪದಗಳು ಜೀವನ ಶೈಲಿಯ ಪ್ರಶ್ನೆಯಾಗಿದ್ದರೆ, ಅಮೇರಿಕಾ ಮತ್ತು ಕರ್ನಾಟಕ ಭಾರತಗಳು ದೇಶದ ಪ್ರಶ್ನೆಯಾಗಿದೆ. ಇಂಗ್ಲೀಷ್ ಮತ್ತು ಕನ್ನಡ ಎಂದಾಗ ಭಾಷೆಯ ಪ್ರಶ್ನೆ ಎದುರಾಗುತ್ತದೆ. ಅಂದರೆ. ಜೀವನಶೈಲಿ, ೨.ದೇಶ ಮತ್ತು ೩ ಭಾಷೆಗಳನ್ನು ಅಖಂಡವಾಗಿಯೇ ಚಿಂತಿಸಬೇಕಾಗುತ್ತದೆ." (ಅದೇ,ಪು:೬೮) ಆದರೆ ಜಾಗತೀಕರಣದ ಸಂದರ್ಭದಲ್ಲಿ ಸಂಸ್ಕೃತಿಯು ತುಂಬಾ ಕುಬ್ಜವಾಗಿ ಬಿಡುತ್ತದೆ. ಯಾಕೆಂದರೆ ಸರಕು ಸಂಸ್ಕೃತಿಯ ಜಾಗತೀಕರಣವು ಮೂಲತಃ ವಾಣಿಜ್ಯ ದೃಷ್ಟಿಯ ವಿಶ್ವಗ್ರಾಮದ ಪರಿಭಾಷೆ, ಆದರೆ ಸಮುದಾಯ ಸಂಸ್ಕೃತಿಯ ಜಾನಪದವು ಮೂಲತಃ ಸಾಂಸ್ಕೃತಿಕ ದೃಷ್ಟಿಯ ಸ್ಥಳೀಯ ಭೂಗೋಳದ ಪರಿಭಾಷೆ, ವಿಶ್ವಗ್ರಾಮ ಮತ್ತು ಸ್ಥಳೀಯ ಭೂಗೋಳಗಳು ಈ ಶತಮಾನದಲ್ಲಿ ನಾವೆಲ್ಲಾ ಎದುರಿಸಲೇ ಬೇಕಾದ ಬಹುದೊಡ್ಡ ಸಮಸ್ಯೆಗಳಾಗಿವೆ. ಒಂದರ್ಥದಲ್ಲಿ ಇವು ನಮ್ಮನ್ನು ಶೋಷಿತರ ಸಾಲಿನಲ್ಲಿಯೇ ನಿಲ್ಲಿಸಿವೆ. ಇನ್ನು ಶೋಷಿತರೆ ಎಂದರೆ ಯಾರು, ಶೋಷಣೆ ಎಂದರೇನು, ಎಂಬ ಮತ್ತೊಂದು ವಿಚಾರ ಮೂಡುತ್ತದೆ. ಶೋಷಿತರನ್ನು ವ್ಯಾಖ್ಯಾನಿಸಿ, ನಂತರ ಅವರ ಸಮಸ್ಯೆಗಳನ್ನು ವ್ಯಾಖ್ಯಾನಿಸುವುದು ಒಂದು ಕ್ರಮವಾದರೆ, ಸಮಸ್ಯೆಗಳನ್ನು ವ್ಯಾಖ್ಯಾನಿಸುತ್ತಲೇ ಅದರ ಚೌಕಟ್ಟಿನೊಳಗೇ ಶೋಷಿತರನ್ನು ವ್ಯಾಖ್ಯಾನಿಸುವುದು ಮತ್ತೊಂದು ಕ್ರಮವಾಗಿದೆ. ಈ ಸಮಸ್ಯೆ ಎಂಬುದು ಜಾಗತಿಕ ಮಟ್ಟದ್ದು, ಇದು ಅಮೇರಿಕಾದ ಅಧ್ಯಕ್ಷನಿಗೂ ಇರುತ್ತದೆ, ಭಾರತದ ಪ್ರಧಾನ ಮಂತ್ರಿಗೂ ಇರುತ್ತದೆ, ನಗರಗಳಲ್ಲಿರುವ ಅತೀ ಶ್ರೀಮಂತರಿಗೂ ಇದೆ, ಹಳ್ಳಿಗಳಲ್ಲಿರುವ ಭೂಮಾಲೀಕರಿಗೂ ಇದೆ, ಅಲ್ಲದೆ ಹಳ್ಳಿಗಳಲ್ಲಿ ಜೀತಕ್ಕಿರುವವರಿಗೂ ಸಮಸ್ಯೆಗಳಿವೆ. ಈ ಸಮಸ್ಯೆಗಳ ಸ್ವರೂಪಗಳು ಮಾತ್ರ ಬೇರೆ ಬೇರೆ ರೀತಿಯದ್ದಾಗಿವೆ. ಇಲ್ಲಿ ಹೆಚ್ಚಾಗಿ ಬಹುರಾಷ್ಟ್ರೀಯ ಕಂಪನಿಗಳೇ ಈ ಸಮಸ್ಯೆಗಳನ್ನು ಸೃಷ್ಟಿಸುವಲ್ಲಿ ನಿರತವಾಗಿವೆ. ದುಡಿಯುವ ವರ್ಗ ಅಥವಾ ಕಾರ್ಮಿಕ ವರ್ಗ ಇವುಗಳಿಗೆ ಪರ್ಯಾಯವೊಂದನ್ನು ಹುಡುಕಲು ಸದಾ ತುಡಿಯುತ್ತಿರುತ್ತದೆ. ಹಾಗಾಗಿ ಭೂಮಿ ಸಂಪತ್ತು ರಾಜ್ಯಾಧಿಕಾರದಿಂದ ವಂಚಿತರಾದ ಮತ್ತು ಅವಕ್ಕೆಲ್ಲ ಒಟ್ಟಾಗಿ ಪರ್ಯಾಯ ವ್ಯವಸ್ಥೆಯನ್ನು ರೂಪಿಸಲು ನಿಂತರವಾಗಿ ಹೋರಾಡುವ ಈ ವರ್ಗವೇ ಶೋಷಿತ ವರ್ಗವಾಗಿದೆ. ಅಲ್ಲದೆ ಈ ವರ್ಗವು ಹಸಿವು ಅವಮಾನಗಳನ್ನು ಮತ್ತು ವ್ಯವಸ್ಥೆಯ ವಿರುದ್ಧದ ಪ್ರತಿರೋಧವನ್ನು ತನ್ನೊಡಲಲ್ಲಿ ಸದಾ ಕಟ್ಟಿಕೊಂಡಿರುತ್ತದೆ. ಹಾಗೆ ನೋಡಿದರೆ ಈ ವರ್ಗದ ಮೂಲ ಸಮಸ್ಯೆಯೆಂದರೆ ಭೂಮಿ, ಸಂಪತ್ತು, ಮತ್ತು ರಾಜ್ಯಾಧಿಕಾರದಿಂದ ವಂಚಿತತೆಯನ್ನು ಅನುಭವಿಸುತ್ತಿರುವುದು. ಇದರಿಂದಾಗಿ ಬಹುಸಂಖ್ಯೆಯಲ್ಲಿರುವ ಈ ವರ್ಗವು ಶ್ರಮ ಮೌಲ್ಯ ಶೋಷಣೆಗೂ ಒಳಗಾಗಿದೆ. ಇಲ್ಲಿ ಬರುವ ಬಹುಸಂಖ್ಯಾತರೆಂದರೆ ದಲಿತರು, ಕಾರ್ಮಿಕರು, ಆದಿವಾಸಿಗಳು, ಬುಡಕಟ್ಟುಗಳು, ನಿರುದ್ಯೋಗಿಗಳು ಮತ್ತು ದುಡಿಯುವ ವರ್ಗದ

ಮಹಿಳೆಯರು; ವಿಶಾಲಾರ್ಥದಲ್ಲಿ ಇವರೆಲ್ಲರೂ ಕೂಡ ಶೋಷಿತರೇ ಆಗಿದ್ದಾರೆ. ಈ ಶೋಷಿತರಲ್ಲಿ ಅನೇಕ ರೀತಿಯ ಸ್ತರ ವಿನ್ಯಾಸಗಳಿವೆ. ಹಾಗಾಗಿ ಈ ಬಹುಸಂಖ್ಯಾತ ಶೋಷಿತರನ್ನು ಮುಖ್ಯವಾಹಿನಿಗೆ ತರಲು ಪ್ರಯತ್ನಿಸುವುದು, ಇವರನ್ನು ಬಹು ಮುಖ್ಯವೆಂದು ಗುರುತಿಸುವುದು ಪ್ರಜಾತಾಂತ್ರಿಕ ಪ್ರಜಾಪ್ರಭುತ್ವದ ನಿಯಮ ಮತ್ತು ವಿಧಾನವಾಗಿದೆ. ಈ ವಿಧಾನವನ್ನು ಪ್ರಜಾತಾಂತ್ರಿಕ ವ್ಯವಸ್ಥೆಯು ಅನುಸರಿಸದೇ ಹೋದರೆ ಶೊಷಿತರು ಮತ್ತು ಶೋಷಕರನ್ನು ಒಂದೇ ಚೌಕಟ್ಟಿನಲ್ಲಿಟ್ಟು ಅಳೆಯುವ ಅಪಾಯವಂತೂ ಖಂಡಿತಾಯಿದೆ. ಆದರೆ ಇಂಡಿಯಾದ ಆಳುವ ವರ್ಗ ನೇರವಾಗಿ ಸಾಮ್ರಾಜ್ಯಶಾಹಿಯೊದಿಗೆ ಕೈ ಜೋಡಿಸಿರುವುದರಿಂದ, ಇದರ ಕುರಿತಾದ ಚರ್ಚೆಯು ಸಾಮ್ರಾಜ್ಯಶಾಹಿಯ ಚರ್ಚೆಯೊಂದಿಗೆ ನೇರವಾದ ಸಂಬಂಧವನ್ನು ಪಡೆಯುವುದು ತುಂಬಾ ಅನಿವಾರ್ಯವಾಗಿದೆ. ಆ ಕಾರಣಕ್ಕಾಗಿಯೇ ನಾವು ಜಾನಪದ ಮತ್ತು ಜಾಗತೀಕರಣದ ಚರ್ಚೆ ಮಾಡುವ ಈ ಸಂದರ್ಭದಲ್ಲಿ ಇಂಡಿಯಾದ ಆಳುವ ವರ್ಗದ ರಾಜಕಾರಣವನ್ನೇನಾದರು ಚರ್ಚೆಗೆ ತೆಗೆದುಕೊಂಡರೆ ಆಗ ಅನಿವಾರ್ಯವಾಗಿ ಸಾಮ್ರಾಜ್ಯಶಾಹಿಯ ಚರ್ಚೆಯನ್ನು ಮಾಡಲೇಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಸಾಮ್ರಾಜ್ಯಶಾಹಿಯ ಜಾಗತೀಕರಣವು ಬಂಡವಾಳ ಮತ್ತು ಮಾರುಕಟ್ಟೆಯನ್ನು ಮಾತ್ರ ಜಾಗತೀಕರಣ ಮಾಡಲಿಲ್ಲ. ಅದರ ಜೊತೆಯಲ್ಲಿ ಹಸಿವು ಅವಮಾನ, ಸಂಸ್ಕೃತಿಗಳನ್ನೂ ಅದು ಜಾಗತೀಕರಣ ಮಾಡಿತು. ಈ ಎಲ್ಲಾ ಕೆಲಸಗಳಿಗೆ ಅದು ತನ್ನ ಹೊಸ ಮಾದರಿಯ ರಾಜಕಾರಣವನ್ನು ಪ್ರಯೋಗಿಸಿತು. ಜಾಗತೀಕರಣ ಮತ್ತು ಜಾನಪದಗಳ ಬಹು ಮುಖಿ ಸಂಬಂಧಗಳನ್ನು ಬಿಂಬಿಸಬಲ್ಲ ಬಹುಮುಖ್ಯ ಘಟ್ಟ ಇದೆಂದು ಊಹಿಸಬಹುದು. ಆ ಕಾರಣಕ್ಕಾಗಿಯೇ ವಸಾಹತೀಕರಣಕ್ಕೆ ಒಳಗಾಗುತ್ತಿದ್ದಂತೆಯೇ, ನಿರ್‌ವಸಾಹತೀಕರಣಕ್ಕೂ ಗಮನ ಕೊಟ್ಟಂತೆ ನಾವಿಂದು ಜಾಗತೀಕರಣಕ್ಕೆ ಒಳಗಾಗುತ್ತಲೇ ನಿರ್‌ಜಾಗತೀಕರಣದ ಬಗ್ಗೆಯೂ ಆಲೋಚಿಸಿ ಕಾರ್ಯ ತತ್ಪರರಾಗಬೇಕು. ಸಂಖ್ಯಾ ಬಲವನ್ನು ಲೆಕ್ಕಿಸದೆ, ವ್ಯಕ್ತಿ ಮಟ್ಟದಿಂದ ಹಿಡಿದು ರಾಷ್ಟ್ರ ಮಟ್ಟದವರೆಗೆ ನಿರ್‌ಜಾಗತೀಕರಣವನ್ನು ಅಳವಡಿಸಿಕೊಳ್ಳುವ ಬಗೆಗಳನ್ನು ಶೋಧಿಸಬೇಕು. ವಿಶ್ವಗ್ರಾಮವನ್ನು ಕನ್ನಡಿಯ ಗಂಟು ಎಂದು ಭಾವಿಸುವವರು ತಮ್ಮನ್ನು ಸ್ಥಳೀಯ ಭೂ-ಗೋಳದೊಂದಿಗೆ ಗುರುತಿಸಿಕೊಳ್ಳುತ್ತಾರೆ. ಕನ್ನಡ ಸಂಸ್ಕೃತಿಯ ಪರಂಪರೆಯಲ್ಲಿ ಇದಕ್ಕೆ ಸಮೃದ್ಧ ಉದಾಹರಣೆಗಳಿವೆ. ಆಧುನಿಕ ಸಂದರ್ಭದಲ್ಲಿ ಕುವೆಂಪು, ಬೇಂದ್ರೆ, ಕಾರಂತ, ಸಾಹಿತ್ಯವನ್ನು ಸ್ಥಳೀಯ ಭೂಗೋಳದ ಜೊತೆಗಿಟ್ಟೇ ಅರ್ಥಮಾಡಿಕೊಳ್ಳಬೇಕಾಗಿದೆ. ಜಾನಪದ ಸಾಹಿತ್ಯವಂತೂ ಸ್ಥಳೀಯ ಭೂಗೋಳವನ್ನು ಬಿಟ್ಟು ಮೇಲೇಳುವುದೇ ಇಲ್ಲವೆನ್ನಬಹುದು.” (ಅದೇ, ಪು:೭೩) ಇದು ಜಾನಪದದ ಬಹುದೊಡ್ಡ ಶಕ್ತಿಯಾಗಿರುವುದರಲ್ಲಿ ಯಾವುದೇ ಅನುಮಾನವಿಲ್ಲ. ಜಾನಪದವು ಸಮಾಜದಲ್ಲಿ ಇದ್ದಿರಬಹುದಾದ ಸಮುದಾಯಗಳ ಅನೇಕ ಮೌಲ್ಯಗಳನ್ನು ಚಾರಿತ್ರಿಕ ಘಟನೆಗಳೊಂದಿಗೆ ದಾಖಲಿಸಿಕೊಂಡು ತನ್ನೊಡಲಲ್ಲಿಟ್ಟು ಕೊಂಡಿರುತ್ತದೆ. ಇಲ್ಲಿ ಒಟ್ಟಾರೆಯಾಗಿ ಜಾನಪದ ಎನ್ನುವುದಕ್ಕಿಂತ ಕಥನ ಗೀತೆಗಳೇ ಈ ಚಾರಿತ್ರಿಕ ದಾಖಲೆಗಳನ್ನು ಒಳಗೊಂಡಿರುತ್ತವೆ. ಈ ದಾಖಲೆಗಳನ್ನೊಳಗೊಂಡಿರುವುದರ ಜೊತೆಗೆ ಅವುಗಳು ಒಂದು ಆಶಯವನ್ನು ಹೊಂದಿರುತ್ತವೆ. ಹಾಗಾಗಿ ಜನಪದ ಆಶಯ, ಕಥಾರೂಪ,

ಕಲ್ಪನೆ ಈ ಚೌಕಟ್ಟಿನೊಳಗೆ ಚರಿತ್ರೆಯ ಅಂಶಗಳು ಮಿಳಿತವಾಗಿ, ಚರಿತ್ರೆ ಮತ್ತು ಕಲ್ಪನೆಗಳೆರಡೂ ಒಂದರೊಡನೊಂದು ಪೈಪೋಟಿ ನಡೆಸುತ್ತಿರುವಂತೆ ಸಮನಾಗಿ ಗೋಚರವಾಗುವ ಸಾಧ್ಯತೆಗಳೇ ಹೆಚ್ಚು. ಈ ರೀತಿಯ ಲಕ್ಷಣಗಳು ಚಾರಿತ್ರಿಕ ವೆನ್ನಬಹುದಾದ ಲಾವಣಿಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಯಾಕೆಂದರೆ, ಜನಪದ ಕಾವ್ಯದ ಹುಟ್ಟಿಗೆ ಚಾರಿತ್ರಿಕ ಘಟನೆಗಳು ಕಾರಣವೆನ್ನಬಹುದಾದರೂ ಜನಪದ ಕಾವ್ಯದ ಬೆಳವಣಿಗೆಯ ಹಿತದೃಷ್ಟಿಯಿಂದ ಪುರಾಣ ಅಥವಾ ಅತಿಮಾನುಷ ಅಂಶಗಳು ಯಾವುದೇ ಮುಲಾಜಿಲ್ಲದೆ ಸೇರಿ ಬಿಡುತ್ತವೆ. ಯಾಕೆಂದರೆ ಐತಿಹಾಸಿಕ ಘಟನೆ ನಡೆದ ಎಷ್ಟೋ ಕಾಲದ ನಂತರ ಅವರ ಸುತ್ತ ಕಾಲ್ಪನಿಕ ಅಂಶಗಳು ಸೇರ್ಪಡೆಯಾಗಿರುತ್ತವೆ. ವಾಸ್ತವ ಘಟನೆಗಳು ಮಾಯವಾಗುವ ಮಟ್ಟಕ್ಕೆ ಇಂತಹ ಅಂಶಗಳು ಸೃಷ್ಟಿಯಾಗಿರುತ್ತವೆ." (ಡಾ.ಜಿ.ಆರ್.ತಿಪ್ಪೇಸ್ವಾಮಿ, ಮೌಖಿಕ ಕಥನ, ಪು:೩೨) ಈ ರೀತಿಯ ಆಶಯಗಳಿಂದಲೇ ಹುಟ್ಟಿರುವ ಈ ಜನಪದ ಕಥನಗೀತೆಗಳು, ಈ ಕಥನ ಗೀತೆಗಳ ನಾಯಕ ನಾಯಕಿಯರು, ಪ್ರತಿನಾಯಕ ಅಥವಾ ಪ್ರತಿನಾಯಕಿಯಂತಹ ಪಾತ್ರಗಳು ಹೀಗೆ ಇರುತ್ತವೆಂದು, ಇವುಗಳ ಲಕ್ಷಣಗಳು ಹೀಗೇ ಇರುತ್ತವೆಂದು ಬಹಳ ಸುಲಭವಾಗಿ ಗ್ರಹಿಸಬಹುದಾಗಿದೆ. ಈ ರೀತಿಯ ಊಹೆಗಳಿಗೆ ಅವಕಾಶವಿರುವ ಕಡೆಗಳಲೆಲ್ಲಾ ಪರಿಸರ, ನಂಬಿಕೆ, ಮಂತಾದ ರೀತಿಯ ಮೌಲ್ಯಗಳಿರುತ್ತವೆ. ಈ ಎಲ್ಲಾ ಕ್ರಿಯೆಗಳ ಹಿಂದೆ ಸಮಾಜ ಮತ್ತು ಸಮಾಜದಲ್ಲಿರುವ ಮೌಲ್ಯಗಳು ಕೆಲಸ ಮಾಡುತ್ತವೆ. ಈ ರೀತಿಯ ಸನ್ನಿವೇಶ, ಮೌಲ್ಯಗಳೆಲ್ಲವೂ ಕಥನ ಗೀತೆಗಳಲ್ಲಿಯ ಸಂದರ್ಭಗಳನ್ನು ವಿಸ್ತರಿಸಿಕೊಳ್ಳಲು ತುಂಬಾ ಸಹಾಯಕಾರಿಯಾಗಿರುತ್ತವೆ. ಆದರೆ "ಚರಿತ್ರೆಯ ಘಟನೆಯನ್ನಾಧರಿಸಿದ ಗೀತೆಗಳಲ್ಲಿ ಇಂತಹವುಗಳ ಪಾತ್ರ ಯಥೇಚ್ಛವಾಗಿರುತ್ತದೆ. ಚರಿತ್ರೆಯ ಜನಪದರು ತಮ್ಮ ಅನುಭವಗಳನ್ನು ಯಾವುದೇ ರೀತಿಯ ಘಟನೆಗಳಲ್ಲಿ ಸೇರಿಸಿ ಅಂತಹ ಘಟನೆಗಳನ್ನು ಜಾನಪದೀಕರಣ ಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಈ ರೀತಿ ಜಾನಪದೀಕರಣಗೊಂಡ ಪ್ರಕಾರಗಳು ಜನಜೀವನದ ಹಾಗೂ ಸಾಂಸ್ಕೃತಿಕ ಮನೋಧರ್ಮದ ದೃಷ್ಟಿಯಿಂದಲೂ ಮುಖ್ಯವಾಗುತ್ತವೆ." (ಅದೇ, ಪು:೩೨-೩೩) ಎಂಬುದನ್ನು ಅರಿಯುವುದು ಸಮಕಾಲೀನ ಸಂದರ್ಭಕ್ಕೆ ತುಂಬಾ ಸಹಾಯಕಾರಿಯಾದ ಅಂಶವಾಗಿದೆ.

ಪ್ರತಿ ಜಾನಪದ ಅಂಶವು ಈ ರೀತಿಯ ಹಲವಾರು ಕೆಲಸಗಳನ್ನು ಮಾಡುತ್ತಾ ಹೋಗುತ್ತವೆ. ಯಾವುದೋ ಕಾಲದ ಜನಪದ ಕಥೆ ಇಂದು ನಮ್ಮ ಜೀವನ ವಿಧಾನವನ್ನೇ ತನ್ನೊಡಲಲ್ಲಿಟ್ಟುಕೊಂಡಿರುತ್ತದೆ. ಆದರೆ ಕಥನಗೀತೆಯು ಘಟನಾತ್ಮಕ ಕಥೆಯ ಪ್ರಕ್ರಿಯೆಯಾಗಿರುವುದರಿಂದ ಇದರ ಚಾರಿತ್ರಿಕ ಸಂದರ್ಭ ಇನ್ನಾವುದೇ ಜಾನಪದ ಪ್ರಕಾರದ ಇತಿಹಾಸಕ್ಕಿಂತ ತುಂಬಾ ಭಿನ್ನ ಮತ್ತು ವಿಶಿಷ್ಟ ರೀತಿಯದ್ದಾಗಿರುತ್ತದೆ. ಜೊತೆಗೆ ಚಾರಿತ್ರಿಕ ಸಂದರ್ಭ ಒಂದು ಪ್ರಕಾರದ ಹುಟ್ಟಿನ ಕಾರಣ ಮತ್ತು ಅದರ ಜೊತೆಗಿನ ಮಾನವ ಸಂಬಂಧಗಳು, ಈ ಸಂಬಂಧಗಳನ್ನು ನಿರ್ಧರಿಸುವ ಸಾಮಾಜಿಕ ಮೌಲ್ಯಗಳು, ಇವುಗಳನ್ನು ಬದುಕಿದ ಜನಗಳ ಬಗ್ಗೆಯ ಮನಸ್ಸನ್ನು ನಮ್ಮ ಮುಂದಿಡುತ್ತವೆ. ಜನಪದ ಅಂಶವೊಂದರ ಗುರುತಿಸುವಿಕೆಯಲ್ಲಿ ಈ ಚಾರಿತ್ರಿಕ ಸಂದರ್ಭ ಪ್ರಮುಖ ಪಾತ್ರವಹಿಸುತ್ತದೆ. ಹಾಗೆಯೇ ಕಥನ ಗೀತೆಯ ಚಾರಿತ್ರಿಕ ಸಂದರ್ಭವನ್ನು

ತಿಳಿಯುವುದರಿಂದ ನಮ್ಮ ಚಾರಿತ್ರಿಕ ಸಂದರ್ಭವೂ, ಕಥನ ಗೀತೆಗಳ ಚಾರಿತ್ರಿಕ ಸಂದರ್ಭವೂ ವೈಯಕ್ತಿಕವಾಗಿ ಬೇರೆ ಬೇರೆ ಎನಿಸುತ್ತದೆ. ಇದು ಬದಲಾದ ಸನ್ನಿವೇಶದಲ್ಲಿ ಮಾತ್ರ ಬೇರೆ ಬೇರೆ ಎನಿಸುವ ಪ್ರಕ್ರಿಯಾತ್ಮಕ ನಿಲುವಾಗಿದೆ. ಇದು ಸ್ವಭಾವತಃ ಪ್ರಕ್ರಿಯೆಯಾಗಿದೆ. ಹಾಗೆ ನೋಡಿದರೆ ಕಾಲ ಮತ್ತು ಸಂದರ್ಭಕ್ಕೆ ಅನುಗುಣವಾಗಿ ಹೊಸ ಹೊಸ ಆಯಾಮಗಳನ್ನು ಪಡೆಯುತ್ತಾ ಹೋಗುವುದೇ ಜಾನಪದ ಸ್ವಭಾವ. ವಿಶಿಷ್ಟ ಬಗೆಯ ಜಾನಪದ ಸಿದ್ಧವಾಯಿತು ಎಂದು ಅರ್ಥ (ಹಿ.ಶಿ.ರಾಮಚಂದ್ರೇಗೌಡ, ಜಾನಪದ, ಸಾಂಸ್ಕೃತಿಕ ಆಯಾಮಗಳು, ಪು:೫೩) ಆದರೆ "ಸ್ವಾತಂತ್ರ ಚಳುವಳಿಯ ಆರಂಭಕ್ಕೆ ಮೊದಲು ನಮ್ಮ ಜಾನಪದ ಬದುಕು ಒಂದು ಬಗೆಯ ಸ್ಥಿರತೆಯಾಗಿತ್ತು. ಸ್ವಾತಂತ್ರ್ಯ ಚಳುವಳಿಗೆ ಕಾಲಿಟ್ಟ ನಂತರದಿಂದ ಅದು ಚಲನಶೀಲ ದೇಶೀಯ ಪ್ರವೃತ್ತಿಯಾಯಿತು. ಗಾಂಧೀಜಿ ಅದನ್ನು ತಮ್ಮ 'ಜೀವನ ಸಂಸ್ಕೃತಿ,' 'ಜೀವನ ಶಿಕ್ಷಣ'' 'ಜೀವನ ಆರ್ಥಿಕತೆ' ಹಾಗೂ ಪ್ರಜಾಪ್ರಭುತ್ವ ಪರಿಕಲ್ಪನೆಯೊಳಗೆ ಪಡಿಮೂಡಿಸಿದರು; ಜಾನಪದ ಜನರಿಂದ, ಜನರಿಗಾಗಿ ಹಾಗೂ ಜನರಿಗೋಸ್ಕರವಾಯಿತು." (ಅದೇ, ಪು:೫೭-೫೭) ಅಂದರೆ, ಸ್ವಾತಂತ್ರ್ಯ ಚಳುವಳಿಯ ಸಂದರ್ಭಕ್ಕೆ ಜಾನಪದವು ಸಂಸ್ಕೃತಿಯ ಹೆಸರಲ್ಲಿ ಬಳಕೆಯಾಯಿತು. ಆ ಸಂದರ್ಭಕ್ಕೆ ಕಥನಗೀತೆಗಳು, ಲಾವಣಿಗಳು, ಇತರ ಜಾನಪದ ಪ್ರಕಾರಗಳಿಗಿಂತ ಯಥೇಚ್ಛವಾಗಿಯೇ ಬಳಸಲ್ಪಟ್ಟವು. ಹಾಗಾಗಿ ಈ ಕಥನಗೀತೆಗಳೆಲ್ಲವೂ "ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಹೀಗೆ ಭಾರತದ ಜನಪದಗಳು ಪುನರ್ ಚೇತನ ಪುನರ್‌ಸೃಷ್ಟಿಗೊಂಡದ್ದು ಒಂದು ಮಹತ್ವದ ಆಯಾಮ" (ಅದೇ, ಪು:೫೭) ಈ ಸಂದರ್ಭ ಕಥನ ಗೀತೆಗಳ ಸೃಷ್ಟ್ಯಾತ್ಮಕ ಆಯಾಮವೆಂದು ಕರೆಯಬಹುದು. ಈ ಮೂಲಕ ನಾವು ತಿಳಿದುಕೊಳ್ಳುವುದೇನೆಂದರೆ ಒಂದು ಜನಪದ ಅಥವಾ ಜಾನಪದ ಪಡೆಯುವ ಹೊಸ ಆಯಾಮ ಆ ಜನಪದ ಪಡೆಯುವ ತಾತ್ವಿಕ ಆಯಾಮದ ಮೇಲಿಂದ ಎಂಬುದು ಬಹು ಮುಖ್ಯವಾದ ವಿಚಾರ. ಈ ತಾತ್ವಿಕ ಆಯಾಮ ಸಿಗುವುದು ಕಥನಗೀತೆಗಳ ಅಧ್ಯಯನದಿಂದ ಜೊತೆಗೆ ಸಮುದಾಯಗಳ ಜೀವನಕ್ರಮವನ್ನೂ ಕೂಡ ನಾವು ಗ್ರಹಿಸಬಹುದಾಗಿದೆ. ಮುಖ್ಯವಾಗಿ ಕಥನಗೀತೆಗಳ ಪ್ರಾಧಾನ್ಯತೆಯೆಂದರೆ ಅದರಲ್ಲಿ ನಾಯಕರಿರುವಂತೆ ಪ್ರತಿನಾಯಕರಿರುವುದು. ಸಾಂಸ್ಕೃತಿಕ ಸಂದರ್ಭ, ಆಶಯ, ಮತ್ತು ಅವುಗಳ ಪ್ರಾಮುಖತೆಯಿಲ್ಲದಿದ್ದರೆ ಅದು ಕಥನಗೀತೆ ಎನಿಸಿಕೊಳ್ಳಲಾರದು. ಹಾಗೆಯೇ ಕಥನ ಗೀತೆಗಳು ಸಾಂಸ್ಕೃತಿಕ, ಐತಿಹಾಸಿಕವಾಗಿ ಮೂಡಿ ಬಂದ ಸಾಂಕೇತಿಕ ವಿವರಣೆಗಳು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಿದೆ. ಹೆಚ್ಚಾಗಿ ಕಥನ ಗೀತೆಗಳು ಸಂಸ್ಕೃತಿ ಮತ್ತು ಪರಿಸ್ಥಿತಿಯನ್ನು ಹೊಂದಿರುತ್ತವೆ. ಅದೂ ಹೆಚ್ಚಾಗಿ ಜನಾಂಗದ ಸಂಸ್ಕೃತಿಯನ್ನು ಸಮುದಾಯಗಳ ಪರಿಸ್ಥಿತಿಯನ್ನು ಒಳಗೊಂಡಿರುತ್ತದೆ. ವಸ್ತು ಸ್ವೀಕಾರದ ಸಂದರ್ಭದಲ್ಲಿ ಕಥನ ಗೀತೆಗಳು ವ್ಯತ್ಯಾಸವನ್ನು ಹೊಂದಿರಬಹುದು; ಸಾಮಾಜಿಕ ಕಥನಗೀತೆಗಳು ಹೆಚ್ಚಾಗಿ ಸಮಾಜದಲ್ಲಿ ನಿರೂಪಿತವಾದ ಮೌಲ್ಯಗಳನ್ನು ಒಳಗೊಂಡಿದ್ದರೆ, ಚಾರಿತ್ರಿಕ ಕಥನ ಗೀತೆಗಳು ಐತಿಹಾಸಿಕ ಅಂಶಗಳನ್ನು ನಿರೂಪಿಸುತ್ತವೆ. ಸಾಮಾಜಿಕ ಕಥನಗೀತೆಗಳು ಗುಣಸಾಗರಿ, ಹಿರಿದಮ್ಮವ್ವ, ಭಾಗೀರಥಿ, ಉತ್ತರೆ,

ಮುಂತಾದವರ ಕೌಟುಂಬಿಕ ಅಂಶಗಳನ್ನು ಕುರಿತು ಮಾತಾಡುತ್ತವೆ. ಜೊತೆಗೆ ಸಮಾಜದಲ್ಲಿರುವ ಸ್ತ್ರೀವಿರೋಧಿ ಮೌಲ್ಯಗಳ ವಿರುದ್ಧ ಧ್ವನಿಯೆತ್ತುತ್ತವೆ. ಪಾರಂಪರಿಕ ಜೀವ ವಿರೋಧಿ ಮೌಲ್ಯಗಳನ್ನು ಮುರಿದು ಕಟ್ಟುವಲ್ಲಿ, ಪುರೋಹಿತಶಾಹಿ ಮೌಲ್ಯಗಳ ವಿರುದ್ಧವೂ ಈ ಕಥನಗೀತೆಗಳು ಮಾತಾಡುತ್ತವೆ. "ಮೂಲತಃ ಜನಸಮುದಾಯಗಳಲ್ಲಿ ಇರುವ ದೈವೀಶ್ರದ್ಧೆ ಹಾಗೂ ಪರಲೋಕದ ಕಲ್ಪನೆಗಳನ್ನಾಧರಿಸಿಯೇ ಈ ಜಗತ್ತಿನ ಪಾಪ ಪುಣ್ಯಗಳನ್ನು ಬೆಳೆಸಲಾಗಿರುತ್ತದೆ. ಹೀಗೆ ಈ ಲೌಕಿಕ 'ನೈತಿಕ' ವ್ಯವಸ್ಥೆಗೆ ಅಲೌಕಿಕ ನಿಯತಿಯೊಂದನ್ನು ಕಾರಣಶಕ್ತಿಯನ್ನಾಗಿ ಪ್ರತಿಪಾದಿಸಲಾಗಿರುತ್ತದೆ. ಪೂಜಾ ಸಂಸ್ಕೃತಿಯಲ್ಲಿ ಈ ವಿಭಿನ್ನ ದೇವತೆಗಳು ಈ ನಿಯತಿಯನ್ನು ಕಾಯುವ ಶಕ್ತಿಗಳಾಗಿರುತ್ತಾರೆ. ಈ ನಿಯತಿಯ ಒಂದು ಲೌಕಿಕ ರೂಪ ಈ ರಾಜ್ಯ ವ್ಯವಸ್ಥೆಯ ಧರ್ಮ, ರಾಜಪ್ರಭುತ್ವದ ಯಶಸ್ಸು ಕೇವಲ ರಾಜರು ಹಾಕಿಕೊಂಡ ಆಡಳಿತದಲ್ಲಿ ಮಾತ್ರ ವ್ಯಕ್ತವಾಗುವುದಿಲ್ಲ." (ಡಾ.ರಾಜಾರಂ ಹೆಗಡೆ, ರಾಜ ಪ್ರಭುತ್ವ ಮತ್ತು ಮತಧರ್ಮ, ಪು:೨೩) ಇಲ್ಲಿ ರಾಜರೆಂದರೆ ಪ್ರಭುತ್ವವೆಂದರ್ಥ. ಈ ಪ್ರಭುತ್ವವೆಂದರೆ ಹಳ್ಳಿಗಳಲ್ಲಿರುವ ಗೌಡ, ಶಾನುಭೋಗರೇ ಆಗಿದ್ದಾರೆ. ಈ ಸಾಮಾಜಿಕ ಕಥನಗೀತೆಗಳ ನಾಯಕಿಯರೆಲ್ಲರೂ ಕೂಡ ಪ್ರಭುತ್ವದ ದಬ್ಬಾಳಿಕೆಗೆ ಪ್ರಭುತ್ವದ ಕುತಂತ್ರಗಳಿಗೆ ಬಲಿಯಾಗಿಯಾಗುವವರೇ ಆಗಿದ್ದಾರೆ. ಹಾಗಾಗಿಯೇ "ಸಂಸ್ಕೃತಿಯಲ್ಲಿ ಪ್ರಭುತ್ವದಿಂದ ಘೋಷಣೆಗೊಂಡ ವಿಭಿನ್ನ ಮತ್ತು ಸಂಪ್ರದಾಯಗಳಿಗೂ ಹಾಗೂ ರಾಜರಿಗೂ ಏರ್ಪಟ್ಟ ಅಂತಃ ಸಂಬಂಧದ ಸ್ವರೂಪ ಹಾಗೂ ರಾಜ ನೈತಿಕ ಮಹತ್ವವನ್ನು ಕುರಿತು ಅನೇಕ ಅಭಿಪ್ರಾಯಗಳು ಇವೆ." (ಅದೇ, ಪು:೨೨) ಮಧ್ಯಕಾಲೀನ ಸಂದರ್ಭದ ಸಾಮಾಜಿಕ, ವ್ಯವಸ್ಥೆಯು ಸಾಮಂತಶಾಹಿಯ ಮನೋಧೋರಣೆಯನ್ನು, ಅದರ ನಿಲುವುಗಳನ್ನು ಕುರಿತು ಖಚಿವಾಗಿಯೆ ಈ ಸಾಮಾಜಿಕ ಕಥನಗೀತೆಗಳು ಮಾತಾಡುತ್ತವೆ. ಆ ಕಾರಣಕ್ಕಾಗಿಯೇ ಕಥನ ಗೀತೆಗಳ "ಧ್ವನಿಯ ಹಿಂದಿನ ದೈನ್ಯ ಪೂರಿತ ಅಸಹಾಯಕತೆಯನ್ನು ನಾವು ವಿಶೇಷವಾಗಿ ಗಮಸಬೇಕಿದೆ. ದಮನಿತ ವರ್ಗದ ಸೃಜನಶೀಲತೆ ಈ ರೀತಿಯ ಹೃದಯ ವಿದ್ರಾವಕ ಅಸಹಾಯಕತೆಯಿಂದ ಹುಟ್ಟಿದೆ. ಇಡೀ ವ್ಯವಸ್ಥೆ ಅದನ್ನು ಎಲ್ಲಾ ರೀತಿಯಿಂದಲೂ ನಿಶ್ಯಕ್ತಗೊಳಿಸಿರುವ ಕೇಂದ್ರದಿಂದ ಅದರ ತಾತ್ವಿಕತೆಯೆಂಬುದು ರೂಪಗೊಂಡಿದೆ." (ಎ.ಎಸ್.ಪ್ರಭಾಕರ, ಮ್ಯಾಸಬೇಡರ ಕಥನಗಳು, ಪು:೨೫) ಅದಕ್ಕಾಗಿಯೇ ಸೋತ ಸಮುದಾಯಗಳ ಅಧೀನ ಸ್ಥಿತಿಗೂ ಅವು ತಮ್ಮನ್ನು ಸಮೀಕರಿಸಿಕೊಳ್ಳುವ ಅಂಶಗಳಿಗೂ ನೇರವಾದ ಸಂಬಂಧವಿದೆ. ಬಹುಶಃ "ಇವುಗಳಿಗಿರುವ ಪುನರ್‌ಸೃಷ್ಟಿಗೊಳ್ಳುವ ಗುಣದಿಂದಾಗಿಯೇ ಇವು ಚರಿತ್ರೆಯ ಚೌಕಟ್ಟುಗಳನ್ನು ಮೀರಿ ಬೆಳೆಯುತ್ತವೆ. ಈ ಮಹಾಕಥನಗಳನ್ನು ಚರಿತ್ರೆಯ ಬಿಡಿ ಭಾಗಗಳಂತೆ ಪರಿಗಣಿಸುವುದಕ್ಕಿಂತ ಸಂಸ್ಕೃತಿ ಅಧ್ಯಯನದ ಒಂದು ಭಾಗವಾದಾಗ" (ಅದೇ, ಪು:೨೧-೨೨) ಮಾತ್ರ ಈ ಕಥನಗೀತೆಗಳು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುತ್ತವೆ ಎಂದು ನಂಬಬಹುದಾಗಿದೆ. ಆದರೆ "ನಮ್ಮ ರಾಷ್ಟ್ರವು ಬ್ರಿಟೀಷರ ಅಧೀನಕ್ಕೆ ಒಳಗಾಗಿದ್ದ ಸಂದರ್ಭದಲ್ಲಿ ಸ್ಥಳೀಯ ಪ್ರಭುತ್ವದಿಂದಾಗಿ ಕಾನೂನೇತರ ಬದುಕಿಗೆ ಜನರು ಬದ್ಧರಾಗಿ ಬಿಟ್ಟಿದ್ದರು. ಪರಿಸರದ ಬೆಂಬಲವು

ಇಲ್ಲದೆ ಇದ್ದ ಸಂದರ್ಭದಲ್ಲಿ ಆಡಳಿತಕ್ಕೆ ಬಂದ ಬ್ರಿಟಿಷ್ ಸರ್ಕಾರವು ಬಲವಂತವಾಗಿ ಹೇರಿದ ಹಲವಾರು ಕಾನೂನು ಕ್ರಮಗಳಿಗೆ ಜನರು ಅನಿವಾರ್ಯವಾಗಿ ಅಲೆತಗ್ಗಿಸಬೇಕಾದ ವಿಷಮ ಪರಿಸ್ಥಿತಿ ಒದಗಿದ್ದಿತು. ಆರಂಭದಲ್ಲಿ ಕರ್ನಾಟಕದಲ್ಲಿ ಆಂಗ್ಲರ ಪ್ರವೇಶದ ವಿರುದ್ಧ ಹೇಳಿಕೊಳ್ಳುವಂತಹ ವಿರೋಧ ವ್ಯಕ್ತಪಟ್ಟಿರಲಿಲ್ಲ. ಕಾಲ ಕ್ರಮೇಣ ಅದರ ಬಿಸಿ ಏರುತ್ತ ಬಂದಿತು. ಇಂತಹ ಘಟನೆಗಳನ್ನು, ಸನ್ನಿವೇಶಗಳನ್ನು, ಚಾರಿತ್ರಿಕ ಸ್ಥಳಗಳ ಅವನತಿಯನ್ನು ವರ್ಣಿಸುವಂತಹ ಲಾವಣಿಗಳು ನಾಡಿನ ಎಲ್ಲಾ ಭಾಗಗಳಲ್ಲಿಯೂ ಕೇಳಿ ಬಂದಿವೆ. ಸಮಷ್ಟಿಯ ಅನೇಕ ಮುಖಗಳನ್ನು ವಸ್ತುವಾಗಿಸಿಕೊಂಡು ಆಕರ್ಷಿಸುವ ಬಹುಪಾಲು ಹಾಡುಗಳು ಈಗಲೂ ಶುದ್ಧ ಜನಪದ ಗೀತೆಗಳಾಗಿವೆ. ನಿಶಸ್ತ್ರೀಕರಣ ಕಾಯಿದೆಗೆ ಹಾಗೂ ಆದಾಯ ತೆರಿಗೆಗೆ ಸಂಬಂಧಿಸಿದ ಲಾವಣಿಗಳು; ಇವುಗಳಲ್ಲಿ ಕೆಲವು ಗ್ರಾಮೀಣ ಪರಿಸರದಲ್ಲಿಯ ಸಾಹುಕಾರನೊಬ್ಬ ಬಡವನನ್ನು ಹೇಗೆ ಶೋಷಿಸುತ್ತಾನೆ, ಶೋಷಣೆಗೆ ಒಳಗಾದ ವ್ಯಕ್ತಿಯೇ ತನ್ನ ಅಂತ್ಯವನ್ನು ತಾನು ಹೇಗೆ ಕಂಡು ಕೊಳ್ಳುತ್ತಾನೆ ಎಂಬಂತಹ ವಾಸ್ತವ ಘಟನೆಗಳನ್ನು ಕುರಿತ (ಸಂಗ್ಯನ ಅಪರಾಧ ಮತ್ತು ಸಾವು) ಲಾವಣಿಯೂ ಇದೆ. (ಜಿ.ಆರ್.ತಿಪ್ಪೇಸ್ವಾಮಿ, ಮೌಖಿಕ ಕಥನ, ಪು:೩೭-೩೮) ಇವುಗಳ ಜೊತೆಗೆ ಪಟ್ಟ ಭದ್ರ ಹಿತಾಸಕ್ತಿಗಳ ಕಪಿಮುಷ್ಟಿಗೆ ಸಿಲುಕಿ ನರಳುವುದನ್ನು ಕುರಿತು ಮಾತಾಡುವ ಲಾವಣಿಗಳೂ ಇವೆ. ಉದಾ. ಸಂಗೊಳ್ಳಿ ರಾಯಣ್ಣನ ಲಾವಣಿ, ಆದಾಯ ತೆರಿಗೆ, ಹಲಗಲಿಯ ಬೇಡರು, ನರಗುಂದದ ಬಂಡಾಯ ಲಾವಣಿ, ಮುಂತಾದವುಗಳು ಪ್ರಮುಖವಾದ ಲಾವಣಿಗಳಾಗಿವೆ.

## ವರ್ತಮಾನದ ನಿರೂಪಣೆಗಳು ಮತ್ತು ತಳೆದ ನಿಲುವುಗಳು

ಮೌಖಿಕ ಪರಂಪರೆಯು ಸಮಷ್ಟಿ ನೆಲೆಯಲ್ಲೇ ಸಂಸ್ಕೃತಿಯನ್ನು ಜೀವಂತವಾಗಿಡುತ್ತದೆ. ಇದು ಮೌಖಿಕ ಕಥನಗಳ ಪ್ರಧಾನಗುಣವೂ ಆಗಿದೆ. ಅಲ್ಲದೆ ಮೌಖಿಕ ಇತಿಹಾಸವು ಮುಖ್ಯವಾಗಿ ಸಂಸ್ಕೃತಿಯನ್ನು ತನ್ನ ಪ್ರತಿಮೆಯಂತೆ ಬಳಸಿಕೊಳ್ಳುತ್ತದೆ. ಇದರ ಮೂಲಕ ಆಂತರಿಕವಾದ ಆಚರಣೆ ಮತ್ತು ಸುಪ್ತ ಮನಸ್ಸಿನ ಸ್ತರಗಳಲ್ಲಿ ಇದು ಅನಾವರಣಗೊಳ್ಳುತ್ತಿರುತ್ತದೆ. ಆದರೆ ಶಿಷ್ಟ ಪರಂಪರೆಯಲ್ಲಿ ಇತಿಹಾಸವು ಮಾನವೀಯ ಮೌಲ್ಯಗಳನ್ನು ಹೊಂದಿರುವುದಿಲ್ಲ. ಬದಲಿಗೆ ಇದು ದಿಗ್ವಿಜಯದ ಇತಿಹಾಸವಾಗಿರುತ್ತದೆ. ಶಿಷ್ಟವು ಘಟನೆ, ಕಾರಣ, ಕ್ರಿಯೆಯಗಳನ್ನು ಮತ್ತು ಕಾಲವನ್ನು ಬದಲಾಯಿಸಿಕೊಳ್ಳುವುದಿಲ. ಮೌಖಿಕ ಚರಿತ್ರೆಯಲ್ಲಿ ಇತಿಹಾಸವು ಸದಾಕಾಲ ಪುನರ್‌ಸೃಷ್ಟಿಗೆ ಒಳಪಡುತ್ತಿರುತ್ತದೆ. ಆದರೆ ರಾಜ ಮಹಾರಾಜರನ್ನು ಓಲೈಸುವುದಕ್ಕಾಗಿಯೇ ಪುರಾಣ ಪಾತ್ರದೊಂದಿಗೆ ಸಮೀಕರಿಸಿ ಹಾಡಿ, ಹೊಗಳಿ ಅಟ್ಟಕ್ಕೇರಿಸಿ ಋಣ ಬಾಧೆ ತೀರಿಸಿಕೊಳ್ಳುತ್ತಿದ್ದ ಪರಂಪರೆಯೇನೂ ನಮ್ಮಲ್ಲಿ ಹೊಸದಲ್ಲ. ಈ ಪರಂಪರೆಯಲ್ಲಿ ಬಂದ ಅನೇಕ ಕವಿಗಳು ಮನುಷ್ಯರನ್ನು ಕುರಿತು ಕಾವ್ಯ ಬರೆಯುವುದು ತರವಲ್ಲವೆಂದು ಭಾವಿಸಿದರು. ಆದರೆ ಜನಪದರು ಸಮಷ್ಟಿಯ ರಕ್ಷಣೆಗಾಗಿ, ಅನ್ಯಾಯಗಳ ವಿರುದ್ಧ ಪ್ರತಿಭಟನೆ ನಿಂತು ಸಾವಿನ ದವಡೆಗೆ ತುತ್ತಾದಂತಹ ವ್ಯಕ್ತಿಯ ಜನಪರ ನಿಲುವನ್ನು ಮೆಚ್ಚಿಕೊಂಡು ಆತನ ಬಗೆಗೆ ಹಾಡು ಕಟ್ಟಿದ್ದುಂಟು. ಇದು ಜನಪದರು

ತಮಗಾಗಿ ಹೋರಾಡಿ ಪ್ರಾಣತ್ಯಾಗ ಮಾಡಿದಂತಹವರಿಗೆ ತೋರಿಸುತ್ತಿದ್ದ ಕೃತಜ್ಞತೆಯ ಸಂಕೇತವಲ್ಲದೆ ಬೇರೆ ಅಲ್ಲ. ಜನಪದ ವೀರ ಕಾವ್ಯಗಳೆಲ್ಲಾ ಈ ಮಾತಿಗೆ ಸಾಕ್ಷಿಯಾಗಿವೆ. ಈ ಕಾವ್ಯಗಳಲ್ಲಿ ನಾಯಕರ ಅದ್ಭುತ ಪರಾಕ್ರಮವನ್ನು ಹಾಡಿ ಹೊಗಳಿವೆ, ಪಿರಿಯಾ ಪಟ್ಟಣದ ವೀರರಾಜ, ಸರ್ಜಪ್ಪ ನಾಯಕ, ಮದಕರಿ ನಾಯಕ, ಮಾಗಡಿ ಕೆಂಪೇಗೌಡ, ಸಂಗೊಳ್ಳಿರಾಯಣ್ಣ, ಆದಾಯ ತೆರಿಗೆ, ಹಲಗಲಿಯ ಬೇಡರು, ನರಗುಂದದ ಬಂಡಾಯ ಮೊದಲಾದವನ್ನು ಕುರಿತು ಲಾವಣಿಗಳನ್ನು ಉದಾಹರಣೆಗಳಾಗಿ ಉಲ್ಲೇಖಿಸಬಹುದು. ಈ ಲಾವಣಿಗಳಲ್ಲಿ ಕಂಡು ಬಂದ ನಾಯಕರೆಲ್ಲ ಚಾರಿತ್ರಿಕ ವ್ಯಕ್ತಿಗಳೇ. ಇವರೆಲ್ಲರೂ ತಮ್ಮ ಹೋರಾಟಗಳಿಂದ ಜನರ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡವರು. ಇಡೀ ಸಮಷ್ಠಿಯ ಪರವಾಗಿದ್ದುದರಿಂದ ಸರ್ವರ ಗೌರವಕ್ಕೆ ಪಾತ್ರರಾದವರು. ಆದ್ದರಿಂದ ಪರಾಕ್ರಮ ಮತ್ತು ಅಂದಿನ ಜನಜೀವನ ದೃಷ್ಟಿಯಿಂದ ಈ ಕಾವ್ಯಗಳು ತುಂಬಾ ಪ್ರಮುಖವೆನಿಸುತ್ತವೆ (ಜಿ.ಆರ್.ತಿಪ್ಪೇಸ್ವಾಮಿ, ಮೌಖಿಕ ಕಥನ, ಪು:೩೪-೩೫) ಅಲ್ಲದೆ ಈ ಕಾವ್ಯಗಳು ಚಾರಿತ್ರಿಕ ಘಟನೆಗಳ ಸಮಗ್ರತೆಯನ್ನು ಅರ್ಥಪೂರ್ಣವಾಗಿ ವಿವರಿಸುತ್ತವೆ.

ಶಿಷ್ಟ ಸಂದರ್ಭದಲ್ಲಿ ಕಥನಕ್ರಮವು ಆಧುನಿಕೋತ್ತರ ಚಿಂತನೆಗಳನ್ನು ಗ್ರಹಿಸುವಲ್ಲಿ ನಿರ್ಣಯವಾದ ಪಾತ್ರವನ್ನು ವಹಿಸುತ್ತದೆ. ಆದರೆ ಈ ಆಧುನಿಕೋತ್ತರ ಎನ್ನುವುದು ಒಂದು ರೀತಿಯ 'ನುಣುಪಾದ ಪರಿಕಲ್ಪನೆಯಾಗಿದೆ; ವ್ಯಾಖ್ಯೆಗಳನ್ನು, ವ್ಯಾಖ್ಯಾನಗಳನ್ನು ಮತ್ತು ಅವುಗಳ ಉದ್ದೇಶ ಪೂರ್ತಿಗೊಳಿಸದಿರುವಿಕೆಯ ಕ್ರಮಗಳು, ಅಧಿಕ ರೀತಿಯಲ್ಲಿ ಇವುಗಳು ತೊಡಕನ್ನುಂಟು ಮಾಡುವಂತಹವುಗಳಾದ್ದರಿಂದ ಆಧುನಿಕೋತ್ತರ ಎನ್ನುವ ಕ್ರಮವು ನುಣುಪಾದ ಅಥವಾ ಜಾರುವ ಪರಿಕಲ್ಪನೆಯೆಂದರೆ ಬಹುಶಃ ತಪ್ಪಲ್ಲ. ಅಲ್ಲದೆ 'ಆಧುನಿಕೋತ್ತರ' ಎನ್ನುವ ಈ ಪರಿಕಲ್ಪನೆಯು ಆಧುನಿಕ ಎನ್ನುವ ಸಂಗತಿಯೊಂದಿಗಿನ ಘಟನಾವಳಿಗಳ ಅಸ್ತಿತ್ವವಾಗಿದೆ. ಅಥವಾ ಕೆಲವೊಮ್ಮೆ ಆಧುನಿಕೋತ್ತರವೆನ್ನುವ ಈ ಪರಿಕಲ್ಪನೆಯ ಆಧುನಿಕೋತ್ತರ ಚಿಂತನೆಗಳನ್ನು ತಿಳಿದು ಕೊಳ್ಳಲು ಸಹಾಯಕವಾಗಿದೆ; ಅದು ಸಂಪೂರ್ಣವಾಗಿ ಇತಿಹಾಸದ ಅಂಶಗಳೊಂದಿಗೆ ಯಾವ ರೀತಿಯ ಸಂಬಂಧವನ್ನು ಹೊಂದಿದೆ ಅಥವಾ ಅದರ ಪ್ರಾಮುಖ್ಯತೆಯೇನು ಎಂಬ ಅಂಶಗಳನ್ನು ತಿಳಿಯಲು ತುಂಬಾ ಅನುಕೂಲಕರವಾದುದು. ಸಂಪೂರ್ಣವಾಗಿ ಅದು ಉದ್ದೇಶಿತ ಅಂಶಗಳನ್ನೇ ಹೆಚ್ಚು ಗಮನದಲ್ಲಿರಿಸಿಕೊಂಡು ನಡೆಯುವಂತಹ ಕ್ರಿಯೆಯೇ ಅಧನಿಕೋತ್ತರ ಕಥನ ಕ್ರಿಯೆ. ಈ ಕ್ರಿಯೆಯು ಶಿಷ್ಟ ಸಂದರ್ಭದಲ್ಲಿ ಒಂದು ಪ್ರಕ್ರಿಯಾತ್ಮಕ ಹಂತವನ್ನು ತಲುಪಿ ತನ್ನದೇ ಆದ ರೂಪ, ರಚನಾ ವಿಧಾನವನ್ನು ಅನುಸರಿಸುತ್ತದೆ. ಈ ರೂಪ ರಚನಾ ಪ್ರಕ್ರಿಯೆಗಳಿಂದಲೇ ಆಧುನಿಕ ಮತ್ತು ಆಧುನಿಕೋತ್ತರ ಎಂದರೆ ಏನು ಎಂಬುದು ಸ್ಪಷ್ಟಗೊಳ್ಳುತ್ತಾ ಹೋಗುತ್ತದೆ. ಒಟ್ಟಿನಲ್ಲಿ ಸಾಮ್ರಾಜ್ಯಶಾಹಿಗಳ ಆಕ್ರಮಣ ಹಾಗೂ ಅಂಥ ಆಕ್ರಮಣಗಳಿಂದ ಎದುರಾಗುವ ಪ್ರತಿಕೂಲ ಪರಿಣಾಮಗಳಿಂದ ಉಂಟಾಗುವ ಎಲ್ಲ ಬಗೆಯ ಅತಂತ್ರ ಸ್ಥಿತಿಗಳನ್ನು, ಭಾರತದ ಸಾಂಪ್ರದಾಯಿಕ ಸಂಸ್ಕೃತಿ ಮೌಲ್ಯಗಳ ಮತ್ತು ಪಾಶ್ಚಾತ್ಯ ಸಂಸ್ಕೃತಿ ಮೌಲ್ಯಗಳ ನಡುವಿನ ಗೊಂದಲಗಳ ಬಗೆಗಿನ"

(ಕೆ.ಸಿ.ಶಿವಾರೆಡ್ಡಿ, ಕನ್ನಡ ಹಾಡು ಪಾಡು, ಪು:೯೩) ಧೋರಣೆಗಳು ಕೂಡ ಇಲ್ಲಿ ಸ್ಪಷ್ಟಗೊಳ್ಳುತ್ತಾ ಹೋಗುತ್ತವೆ. ಅಲ್ಲದೆ ಕನ್ನಡದ ಶಿಷ್ಟ ಸಂದರ್ಭವನ್ನು ನೋಡಿದಾಗ "ಅಡಿಗರ ಕಾವ್ಯದಿಂದ ಉತ್ಪನ್ನವಾಗುವ ಸಮಕಾಲಿನ ಸಮಸ್ಯೆಗಳ ಚಿಂತನೆಯಲ್ಲಿಯೇ ನವ ವಸಾಹತುಷಾಹಿ ಸಂಸ್ಕೃತಿಯ ಆಕ್ರಮಣಶೀಲ ನೆಲೆಗಳು ಪ್ರಕಟಗೊಳ್ಳುತ್ತವೆ. ಸ್ವಾತಂತ್ರ್ಯ ನಂತರ ಪೂರ್ವ ಪಶ್ಚಿಮಗಳ ಆಕರ್ಷಣೆ ಮತ್ತು ವಿಕರ್ಷಣೆಗಳು ಬೇರ್ಪಡಿಸಲಾರದಷ್ಟು ಸಂಕೀರ್ಣಗೊಂಡಿವೆ. ಪರಂಪರೆಯ ಬಗೆಗಿನ ಅಂಧಶ್ರದ್ಧೆ, ಹಾಗೆಯೇ ಪಶ್ಚಿಮದ ಎಲ್ಲ ಬಗೆಯ ಅನುಕರಣೆಗಳ ಕುರಿತು ತೋರುವ ಮೋಹ ಹಾಗೂ ಅದರ ಬಗೆಗಿನ ಒಲವು, ಆಸ್ಥೆಗಳನ್ನು ಅಡಿಗರ ಕಾವ್ಯ ಮುಖ್ಯ ಭಿತ್ತಿಯನ್ನಾಗಿ ಹೊಂದಿದೆ. ರಾಜಕೀಯ ಹಾಗೂ ಸಾಮಾಜಿಕ ಸ್ಥಿತ್ಯಂತರಗಳಿಂದ ಎದುರಾದ ಸಂಕೀರ್ಣತೆ ಸಾಮಾನ್ಯರನ್ನು ಅತಂತ್ರಗೊಳಿಸಿದ ಬಗೆಗೆ ಅವರ ಕಾವ್ಯ ತೀವ್ರವಾಗಿ ಪ್ರತಿಭಟಿಸುತ್ತದೆ. ಅಧಿಕಾರ, ಭಾಷೆ, ತಾತ್ವಿಕತೆ ಮೊದಲಾದ ಎಲ್ಲ ಮಟ್ಟಗಳಿಂದ ಎದುರಾಗುವ ಶೋಷಣೆಯನ್ನು ಅಡಿಗರ ಕಾವ್ಯ ಪ್ರತಿರೋಧಿಸುವ ನೆಲೆಗಳಲ್ಲಿಯೇ ನವ ವಸಾಹತುಷಾಹಿ ಸಂದರ್ಭಗಳಿಗೆ ಒಡ್ಡಿದ ಪ್ರತಿರೋಧಗಳನ್ನು ಗುರುತಿಸಿಕೊಳ್ಳಬಹುದಾಗಿದೆ." (ಅದೇ, ಪು:೯೪) ಆದರೆ ನವ ವಸಾಹತುಷಾಹಿಯ ಆಕ್ರಮಣಗಳಿಗೆ ದಾರಿ ಮಾಡಿಕೊಟ್ಟ ಭಾರತೀಯ ರಾಜಕೀಯ ನಿಲುವುಗಳನ್ನು ಮತ್ತು ಅದಕ್ಕೆ ಕಾರಣವಾದ ಹಲವಾರು ಶಕ್ತಿಗಳನ್ನು ಗುರುತಿಸುವುದು ಅವರ ಕಾವ್ಯದ ಮೂಲ ನೆಲೆಯಾಗಿದೆ. ಜೊತೆಗೆ ವಸಾಹತುಷಾಹಿ ಸಂಸ್ಕೃತಿಯ ಪರಿಣಾವಾಗಿ ಭಾರತೀಯ ಬದುಕು ಅತಂತ್ರಗೊಳ್ಳುವ ಹಾಗೂ ತನ್ನತನವನ್ನು ಕಳೆದುಕೊಳ್ಳುವುದರ ಬಗೆಗಿನ ವಾಗ್ವಾದವೂ ಕೂಡ ಇಲ್ಲಿ ಮುಖ್ಯವಾಗಿರುವುದನ್ನು ಗಮನಿಸಬಹುದಾಗಿದೆ. ಈ ವಾಗ್ವಾದವು ಪೂರ್ವ ಮತ್ತು ಪಶ್ಚಿಮಗಳ ನಡುವಿನ ಆಕರ್ಷಣೆ ಮತ್ತು ವಿಕರ್ಷಣೆಗಳ ತಳಮಳಗಳಲ್ಲಿ ಭಾರತೀಯ ಸಮಾಜ, ಸಂಸ್ಕೃತಿ ತನ್ನ ಅಸ್ತಿತ್ವ ಕಳೆದು ಕೊಳ್ಳುವುದರ ಕಡೆಗೆ ಚಲಿಸಿದುದನ್ನು ಸ್ಪಷ್ಟವಾಗಿ ಗ್ರಹಿಸುತ್ತದೆ. ಭಾರತೀಯವೆಂದಾಕ್ಷಣ ಇಲ್ಲಿ ನಗರ ಮತ್ತು ಹಳ್ಳಿಗಳ ನಡುವಿನ ಬದುಕು ಮತ್ತು ಸಂಸ್ಕೃತಿಗಳ ನಡುವೆ ತುಂಬಾ ವ್ಯತ್ಯಾಸವಿದೆ. ಹಳ್ಳಿಗಳು ನಾಗರೀಕರ ಬದುಕು ಹಾಗೂ ನವ-ವಸಾಹತುಷಾಹಿಯ ಸಂದರ್ಭದ ಕ್ರೌರ್ಯವನ್ನು ಪ್ರಕಟಿಸುತ್ತವೆ. ಇದು ಹಳ್ಳಿಗಳು ತಮ್ಮ ಸಂವೇದನೆಯನ್ನು ಕಟ್ಟಿಕೊಂಡ ಬಗೆಯಾಗಿದೆ. ಪರಕೀಯ ಮೌಲ್ಯಗಳು ದೇಶೀಯ ಮೌಲ್ಯಗಳನ್ನು ಅಪವಿತ್ರಗೊಳಿಸುವ ಹುನ್ನಾರದ ವಿರುದ್ಧದ ಧ್ವನಿಯಾಗಿಯೂ ಹಳ್ಳಿಗಳ ಸಂವೇದನೆಯನ್ನು ಕಥನಗೀತೆಗಳ ಮೂಲಕವೂ ಗ್ರಹಿಸಬಹುದಾಗಿದೆ. "ಅನ್ಯ ಸಂಸ್ಕೃತಿಯ ಮೌಲ್ಯಗಳ ಮೇಲಾಟದಿಂದ ಎದುರಾಗುವ ಪರಕೀಯತೆಯು ನಿಷ್ಕ್ರಿಯಾಶೀಲಗೊಳಿಸುವ ಬಗೆ" (ಅದೆ, ಪು:೯೨)ಗಳನ್ನೂ ಕೂಡ ಕಥನ ಗೀತೆಗಳ ಮೂಲಕ ಗ್ರಹಿಸಬಹುದಾಗಿದೆ. ಹಾಗೆಯೇ ಆ ಕಾಲದ ಸಾಂಸ್ಕೃತಿಕ ದ್ವಂದ್ವಗಳನ್ನು ಕೂಡ ಗ್ರಹಿಸಲು ಅನುಕೂಲವಾಗಿದೆ. ಆ ಕಾರಣಕ್ಕಾಗಿಯೇ "ಇತಿಹಾಸದ ರೇಖೆಗಳನ್ನು ಜಾನಪದದಲ್ಲಿ ಅರಸುತ್ತಾ ಹೋದರೆ ಅನೇಕ ಸುಳಿವುಗಳು ದೊರೆಯುತ್ತವೆ. ಪ್ರಾಯಶಃ ಈ ಕಾರಣದಿಂದಲೇ ಎಲ್ಲಿ ಇತಿಹಾಸ ಸೋಲುತ್ತದೆಯೋ ಅಲ್ಲಿ ಜಾನಪದ ನೆರವಿಗೆ ಬರುತ್ತದೆ ಎಂಬ

ಮಾತು ಹುಟ್ಟಿರಬೇಕು. ಆದರೆ ಈ ನೆರವನ್ನು ಪಡೆಯುವಾಗ ಇತಿಹಾಸಕಾರ ತುಂಬಾ ಎಚ್ಚರಿಕೆ ವಹಿಸಬೇಕು. ದತ್ತು ಸ್ವೀಕಾರ ನಿಷೇಧ ಒಂದು ರೀತಿಯಲ್ಲಿ ಭಾರತದ ಉದ್ವಗಲಕ್ಕೆ ಭಾರತೀಯರನ್ನು ಕೆರಳಿಸಿತು. ಸಿಪಾಯಿ ದಂಗೆಯಂತಹ ಬಂಡಾಯಗಳಿಗೆ ಕಾರಣವಾಯಿತು. ೧೮೩೧ರಿಂದ ೧೮೪೦ರ ವರೆಗೆ ಬ್ರಿಟಿಷರ ವಿರುದ್ಧ ಭಾರತೀಯರು ನಡೆಸಿದ ಆಂದೋಲನದ ಘಟನೆಗಳು ಜಾನಪದ ಸೇರಿ, ಲಾವಣಿ, ಕಥನಗೀತೆ, ನಾಟಕ ಮತ್ತು ಕಥೆಗಳಾಗಿರುವುದನ್ನು ಕಾಣುತ್ತೇವೆ. ಕಿತ್ತೂರು ಚನ್ನಮ್ಮ, ಸಂಗೊಳ್ಳಿರಾಯಣ್ಣ ಮುಂತಾದ ಅನೇಕ ಲಾವಣಿಗಳನ್ನು ಸ್ವಾತಂತ್ರ್ಯ ಸಮರ ಕಾಲದಲ್ಲಿ ಜನರನ್ನು ಇಂಗ್ಲೀಷರ ವಿರುದ್ಧ ರೊಚ್ಚಿಗೆಬ್ಬಿಸಲು ಉಪಯೋಗಿಸಿಕೊಳ್ಳಲಾಗಿದೆ. ಹೀಗೆಯೇ ಬ್ರಿಟೀಷರ ಗುಂಡಿಗೆ ಬಲಿಯಾದ ಯುವಕರ ಕಥೆಗಳಿವೆ. ಶಿವಪುರ, ವಿಧುರಾಶ್ವತದಂತಹ ಸಾಮೂಹಿಕ ಪ್ರತಿಭಟನೆಯ ಘಟನೆಗಳಿವೆ." (ಹ.ಕ.ರಾಜೇಗೌಡ, ಜಾನಪದ ಶೋಧ, ಪು:೧೩) ಅಲ್ಲದೆ "ಭಾರತೀಯ ಪರಂಪರೆಯಲ್ಲಿ ಪ್ರಾಚೀನ ಕಾಲದಿಂದಲೂ ವೀರರಿಗಿದ್ದ ಸ್ಥಾನ-ಮಾನ, ಗೌರವಗಳು ದೊಡ್ಡವು, ನಮ್ಮ ಪ್ರಮುಖ ಕಾವ್ಯಗಳೆಲ್ಲ ಅರ್ಧಕ್ಕರ್ಧ ಯುದ್ಧ ವಿವರಗಳಿಂದಲೇ ತುಂಬಿಕೊಡಿವೆ. ರಾಮ-ಕೃಷ್ಣರೂ ಕೂಡ ವೀರರೇ, ಮಹಾಭಾರತ ರಾಮಾಯಣಗಳ ನಂತರ ವೀರರ ಸ್ಥಾನ-ಮಾನಗಳು ಇನ್ನೂ ಹೆಚ್ಚಿದವು. ಅವರ ಹೆಸರಿನಲ್ಲಿ ಕಾವ್ಯಗಳು, ಸ್ಮಾರಕಗಳು ನಿರ್ಮಾಣವಾಗಿ ಪೂಜಿಸಿ ಗೌರವಿಸಲ್ಪಟ್ಟರು. ತುಂಬಾ ಪ್ರಾಚೀನ ಕಾಲಕ್ಕೆ ಸತ್ತವನ ಆಯುಧಗಳು ಅವನ ಮರಣೋತ್ತರ ಜೀವನದಲ್ಲಿ ಉಪಯೋಗಕ್ಕೆ ಬರಲೆಂದು ಸಮಾಧಿಯೊಳಗೆ ಸೇರಿಸಿ ಬಿಡುತ್ತಿದ್ದರು. ಆದರೆ ವೀರರ ಮತ್ತು ಅವನ ಆಯುಧಗಳ ಬಗೆಗೆ ನಂಬಿಕೆ ಗೌರವ ಹೆಚ್ಚಿದಂತೆ ವೀರನ ನೆನಪಿನಲ್ಲಿ ಅದಕ್ಕೆ ಪೂಜೆ ಸಲ್ಲಿಸಿದರು" (ಕೃಷ್ಣಮೂರ್ತಿ ಹನೂರು, ಜನಪದ ವೀರಗೀತೆಗಳು, ಪು:xxxi) ಆದರೆ "ವಚನ ಚಳುವಳಿಯ ನಂತರಕ್ಕೆ ತಳ ಸಮುದಾಯಗಳು ಕಥನ ಚಳುವಳಿಯನ್ನು ಸಮರ್ಥವಾಗಿ ಕಟ್ಟಿವೆ. ವಚನದ ಪುಟ್ಟ ಆಕೃತಿಗೆ ಬದಲಾಗಿ ಯಾವತ್ತೂ ತಮಗೆ ಸಹಜವಾಗಿದ್ದ ಅಗತ್ಯವಾಗಿದ್ದ ಪುಟ್ಟ ಆಕೃತಿಗಳಿಗೆ ಹಿಂತಿರುಗಿ ಮಹಾಕಥನಗಳನ್ನು ಸೃಷ್ಟಿಸಿವೆ. ದೇಶಿಕಥನಗಳ ವಿಸ್ತಾರ ಮತ್ತು ಆಶಯಗಳನ್ನು ನೋಡಿದರೆ ವಚನ ಚಳುವಳಿಗಿಂತಲೂ ಕ್ರಿಯಾಶೀಲ ಪಠ್ಯವನ್ನು ನಿರ್ಮಿಸುವಲ್ಲಿ ಅಪಾರವಾದ ತನ್ಮಯತೆ ಮತ್ತು ಭಾಗವಹಿಸುವಿಕೆಯನ್ನು ಮಾಡಿವೆ. ವಚನಗಳ ರಚನೆಯು ವ್ಯಕ್ತಿ ನಿಷ್ಠವಾಗಿ ವಚನ ಚಳುವಳಿಯ ನಂತರಕ್ಕೆ ತಳ ಸಮುದಾಯಗಳು ರೂಪಿಸಿಕೊಂಡ ದೇಶೀ ಕಥನಗಳು ರಚನೆ ಮತ್ತು ಅರ್ಥದಲ್ಲೂ ಕ್ರಿಯೆ ಹಾಗೂ ಪರಿಣಾಮಗಳಲ್ಲೂ ವಿಭಿನ್ನ ಸಾಧ್ಯತೆಗಳನ್ನು ತಂದುಕೊಡಿವೆ. ವಚನ ಸಿದ್ಧಪಠ್ಯವಾಗಿ ನಿಂತು ಹೋದರೆ, ಜನಪದ ಸಮುದಾಯಗಳಿಗೆ ಅವರ ಕಥನಗಳು ವಿಸ್ತರಿಸುವ ಪಠ್ಯಗಳಾಗಿ ಪುನರ್ ಸೃಜನೆಗೆ ಅಗತ್ಯಕ್ಕೆ ತಕ್ಕಂತೆ ಮಾರ್ಪಟ್ಟಿವೆ. ತಳ ಸಮುದಾಯಗಳು ಯಾವತ್ತೂ ಅರ್ಥದ ಹುಡುಕಾಟದ ದಾಹವನ್ನು ದೇಶಿ ಕಥನಗಳಲ್ಲಿ ಬಿಂಬಿಸಿಕೊಂಡಿದೆ. (ಡಾ.ಮೊಗಳ್ಳಿಗಣೇಶ್, ಮೌಖಿಕ ಕಥನ, ಪು:೭೧) ರುವುದನ್ನು ಕಾಣಬಹುದು. ಆದರೆ ಆಧುನಿಕೋತ್ತರ ಸಂದರ್ಭಕ್ಕೆ ವ್ಯಾಖ್ಯಾನ ಮತ್ತು ಅರ್ಥೈಸುವಿಕೆ ಬಹುದೊಡ್ಡ

ಶಕ್ತಿಯಾಗಿರುವುದರಿಂದ ಈ ಕಥನ ಗೀತೆಗಳ ಪರಂಪರೆ ಅಭಿವ್ಯಕ್ತಿ ಸಾಧ್ಯತೆಯ ಆತ್ಯಂತಿಕೆಯನ್ನು ಗ್ರಹಿಸಬಹುದಾಗಿದೆ. ಹಾಗಾಗಿಯೇ ವರ್ತಮಾನದಲ್ಲಿ ಜನಪದರು ಯಾವ ಬಗೆಯ ಹಂಬಲಗಳಲ್ಲಿದ್ದಾರೆ ಎಂಬುದು ನಮ್ಮ ಅಧ್ಯಯನಗಳ ಮೊದಲ ನೋಟವಾಗಬೇಕು. ವೃತ್ತಿ ಸಮುದಾಯಗಳ ಗತಕಾಲದ ಜನಪದವನ್ನು ಇಂದಿನ ವೃತ್ತಿ ರಹಿತ ಅತಂತ್ರ ಸ್ಥಿತಿಯಲ್ಲಿ ಅವರ ಆರ್ಥಿಕ ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿಗಳನ್ನು ಜೊತೆಗಿಟ್ಟುಕೊಂಡ ಆಲೋಚಿಸಬೇಕು." (ಅದೇ,ಪು:೧೧೨) ಆಗ ಮಾತ್ರ ಕನ್ನಡದ ಲಿಖಿತ ಮತ್ತು ಅಲಿಖಿತ ಸಂಸ್ಕೃತಿಗಳು ಅಳವಡಿಸಿಕೊಂಡಿರುವ ಮಾದರಿಗಳ, ಭಾಷಿಕ ವಿನ್ಯಾಸಗಳ ಅರಿವಾಗುತ್ತದೆ. ಆದರೆ "ಸಮುದಾಯಗಳು ತಮ್ಮ ಜೀವನದಲ್ಲಿ ನಡೆದ ಸಂಘರ್ಷಗಳ ಒತ್ತಡಗಳಲ್ಲಿ ಸಾಂಸ್ಕೃತಿಕ ನಾಯಕರ, ಹಾಗೂ ಒಟ್ಟು ಕುಲದ ಚರಿತ್ರೆಗಳನ್ನು ಕಟ್ಟಿಕೊಂಡಿವೆ. ಈ ಸಂದರ್ಭ ಸಮುದಾಯಗಳ ಚಿಕ್ಕಟ್ಟಿನ ಸಂದರ್ಭ. ಇಂಥಲ್ಲಿ ಸಮುದಾಯಗಳ ಚರಿತ್ರೆಯ ನಿರೂಪಣೆ ಸಹಜವಾಗಿಯೇ ಧಾರ್ಮಿಕವಾದ ಆಯಾಮವನ್ನು ಪಡೆದುಕೊಂಡಿರುತ್ತದೆ." (ಡಾ.ಎಸ್.ಎಂ.ಮುತ್ತಯ್ಯ, ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ, ಪು:೧೮) ಈ ರೀತಿಯ ಪ್ರಧಾನ ತಿಳುವಳಿಕೆಯೊಂದಿಗೆ ಜನಪದ ಕಥನ ಗೀತೆಗಳ ಕಾಲ ಹಾಗೂ ಹುಟ್ಟಿನ ಹಿನ್ನೆಲೆಯನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡಬೇಕಿದೆ. ಯಾಕೆಂದರೆ ಬಹಳ ಮುಖ್ಯವಾಗಿ ತಳ ಸಮುದಾಯಗಳು, ದುಡಿಯುವ ಸಮುದಾಯಗಳು, ಮೇಲ್ವರ್ಗದ ಅಥವಾ ಆಳುವ ವರ್ಗದ ಹಿತಾಸಕ್ತಿಗೆ ಅನುಗುಣವಾಗಿ ಬದುಕಿದರೂ ಕೂಡ ಸಮಯ ಬಂದಾಗಲೆಲ್ಲಾ ಈ ಎರಡೂ ವರ್ಗಗಳ ಮೇಲೆ ಬಲವಾದ ಪ್ರತಿರೋಧವನ್ನು ಒಡ್ಡಿವೆ. ಈ ರೀತಿಯ ಪ್ರತಿರೋಧಗಳ ಮೂಲಕ ನಮಗೆ ಚರಿತ್ರೆಯ ಇನ್ನೊಂದು ಮಗ್ಗುಲನ್ನು ಹುಡುಕಿದಂತಾಗಿದೆ. ಇದು ಮೌಖಿಕ ಪಠ್ಯಗಳ ಅರ್ಥಗ್ರಹಿಕೆಯ ಸಂದರ್ಭಕ್ಕೆ ತುಂಬಾ ಪ್ರಯೋಜನಕಾರಿ. ಆ ಕಾರಣಕ್ಕಾಗಿಯೇ ಈ ಕಥನಗಳೆಲ್ಲವೂ ಸಾಂಸ್ಕೃತಿಕ ಇತಿಹಾಸದ ಸಂಘರ್ಷಗಳನ್ನು ತುಂಬಾ ಗಂಭೀರವಾಗಿ ಅರಿಯುವಲ್ಲಿ ಸಹಾಯಕವಾಗಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಅಧ್ಯಯನದ ಫಲಿತಗಳನ್ನು ಈ ಕೆಳಗಿನಂತೆ ಗ್ರಹಿಸಲಾಗಿದೆ.

೧. ಅನುಸಂಧಾನದಿಂದ ಅಥವಾ ಸಂಘರ್ಷಣಾತ್ಮಕವಾಗಿ ಪರಕೀಯ ಸಂಸ್ಕೃತಿಯನ್ನು ಎದುರಿಸಲಾರದ ಮನಸ್ಥಿತಿಗಳ ಬಗೆಗೆ ತೋರಿದ ಪ್ರತಿರೋಧಗಳಲ್ಲಿ ಕಥನಗೀತೆಗಳದ್ದು ಪ್ರಮುಖ ಪಾತ್ರ.

೨. ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳ ಸಂದರ್ಭದಲ್ಲಿ ಭಾರತೀಯ ಸಂವೇದನೆ ಪಾಶ್ಚಾತ್ಯ ಸಂಸ್ಕೃತಿಯ ಕುರುಡು ಅನುಕರಣೆಯಲ್ಲಿ ಸ್ವಂತಿಕೆಯನ್ನು ಮರೆತು, ತನ್ನ ಸಂಸ್ಕೃತಿಯ ಅನನ್ಯತೆಗಳ ಕಡೆಗೆ ತೋರಿದ ಅಸಡ್ಡೆಯನ್ನು ಕಥನಗೀತೆಗಳು ಪ್ರಶ್ನಿಸುತ್ತವೆ.

೩. ಅನ್ಯ ಸಂಸ್ಕೃತಿಯ ಸ್ವೀಕರಣೆ ಮತ್ತು ನಿರಾಕರಣೆಗಳ ಅನುಸಂಧಾನದ ಸಂದರ್ಭಗಳಲ್ಲಿ ಎದುರಾಗುವ ಗೊಂದಲಗಳನ್ನು ಕೂಡ ಕಥನ ಗೀತೆಗಳು ತೋರಿಸಿಕೊಡುತ್ತವೆ.

೪. ಹೊಸ ಸಂಸ್ಕೃತಿಗಳ ಸಂಪರ್ಕ ಸಂಘರ್ಷಗಳಿಂದಲೂ ತನ್ನ ಕೊಳಕನ್ನು ಹಸನುಗೊಳಿಸಿಕೊಳ್ಳಲಾರದ ಪ್ರಭುತ್ವದ ಸ್ಥಿತಿಯನ್ನು ವಿಡಂಬಿಸುತ್ತವೆ.

೫. ಪಾರಂಪರಿಕ ಮೌಲ್ಯಗಳ ಮುಖವಾಡಗಳು ಅದಲು ಬದಲಾದ ಸ್ಥಿತಿ, ಅಂಥ ಅದಲು ಬದಲುಗಳಿಂದ ನಿರ್ಮಾಣವಾಗಿರುವ ಕ್ರೌರ್ಯವನ್ನು ಇವುಗಳು ತೆರೆದಿಡುತ್ತವೆ.

೬. ವಸಾಹತು ಸಂಸ್ಕೃತಿಯು ಸ್ವಾಂತಂತ್ರ್ಯಾ ನಂತರ ಭಾರತೀತಯ ಬದುಕಿನ ಮೇಲೆ ಸಾಧಿಸಿದ ಹಿಡಿತ ಮತ್ತು ಅದರೊಂದಿಗೆ ಭಾರತೀಯ ಸಂಸ್ಕೃತಿ ಸಂಘರ್ಷಿಸಿದ ಸಂಘರ್ಷಣಾ ನೆಲೆಗಳನ್ನು ಪ್ರಧಾನವಾಗಿ ಕಥನ ಗೀತೆಗಳು ಅಭಿವ್ಯಕ್ತಿಸುತ್ತವೆ.

೭. ಸ್ವಾತಂತ್ರ್ಯಾ ನಂತರದಲ್ಲಿ ನವ ವಸಾಹತುಷಾಹಿ ಸಂಸ್ಕೃತಿಯು ನಮ್ಮ ಭೌತಿಕ ಹಾಗೂ ಮಾನಸಿಕ ಜಗತ್ತಿನ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಹಾಗೂ ರಾಜಕೀಯ, ಸಾಮಾಜಿಕ ಸಂಕೀರ್ಣತೆಗಳನ್ನು ಕುರಿತೂ ಕಥನ ಗೀತೆಗಳು ಮಾತಾಡುತ್ತವೆ.

೮. ಜನಪದ ಸಮಾಜದ ರಚನೆಯಲ್ಲಿ ಮೌಖಿಕ ಕಥನಗಳು ರೂಪಿಸುವ ಸಾಂಸ್ಕೃತಿಕ ಬಂಧುತ್ವದ ಜೊತೆಗೆ ಚರಿತ್ರೆಯ ಬಂಧುತ್ವವನ್ನು ಕುರಿತೂ ಕಥನ ಗೀತೆಗಳು ಹೇಳುತ್ತವೆ.

೯. ಮೇಲ್ನೋಟಕ್ಕೆ ಪ್ರಭುತ್ವ ವಿರೋಧಿಯಾಗಿ ಕಂಡರೆ ಆಳದಲ್ಲಿ ಪ್ರಭುತ್ವದ ಪರವಾಗಿರುತ್ತವೆ.

೧೦. ಮಧ್ಯಕಾಲೀನ ಇತಿಹಾಸದ ಗ್ರಹಿಕೆಯ ಸಂದರ್ಭಕ್ಕೆ ಕಥನಗೀತೆಗಳ ಪಾತ್ರ ತುಂಬಾ ಮುಖ್ಯವಾದುದು.

೧೧. ಲಿಂಗ ತಾರತಮ್ಯದ ಪುರುಷಾಧಿಪತ್ಯವನ್ನು ಈ ಮೌಖಿಕ ನಿರೂಪಣೆಗಳ ಮೂಲಕ ಅಥವಾ ಕಥನ ಗೀತೆಗಳ ಮೂಲಕ ಗ್ರಹಿಸಬಹುದಾಗಿ.

* * *

# ಸಮಾರೋಪ

ಕಥನ ಗೀತೆಗಳಿಂದ ವಸ್ತುವನ್ನು ಆಯ್ಕೆ ಮಾಡುವಲ್ಲಿ ಅನೇಕ ಸಂಗತಿಗಳು ಗಮನಾರ್ಹವಾಗುತ್ತವೆ. ಅವುಗಳಲ್ಲಿ ವಿವರಣೆ, ವಸ್ತುವೈವಿಧ್ಯತೆ, ಮತ್ತು ಅದ್ಭುತ ಲೋಕಗಳು ಇವೆ. ಅಷ್ಟೇ ಅಲ್ಲದೆ ಪಾರಂಪರಿಕ ಸಂಗತಿಗಳಿಗಿಂತ ಭಿನ್ನವಾಗಿರುವ ಹೊಸ ಹೊಸ ಅರ್ಥಗಳು, ಆಯಾಮಗಳನ್ನು ಗುರುತಿಸಬಹುದಾಗಿದೆ. ಅಂದರೆ ಜನ ಸಂಸ್ಕೃತಿಯನ್ನು ರೂಪಿಸುವ ಇದರ ನೆರಳಲ್ಲಿ ಚರಿತ್ರೆಯನ್ನು ಹುಡುಕಬೇಕಿದೆ. ಅಂದರೆ ಇವುಗಳು ಚಾರಿತ್ರಿಕ ವಿನ್ಯಾಸದ ಒಳಸಂಬಂಧಗಳನ್ನು ಯಾವ ನೆಲೆಯಲ್ಲಿ ಹೊಂದಿವೆ ಎಂಬುದನ್ನು ಗ್ರಹಿಸುವುದು ತುಂಬಾ ಮುಖ್ಯವಾಗಿದೆ.

ಮೌಖಿಕ ಮತ್ತು ಲಿಖಿತ ಎನ್ನುವ ಭಾಷೆಯ ಎರಡು ಮೂಲರೂಪಗಳ ಬಗೆಗೆ, ಕೊಂಚ ಸ್ಥೂಲವಾಗಿಯಾದರೂ, ಮೊದಲು ಕಂಡುಕೊಳ್ಳಬೇಕಿದೆ. ಎಲ್ಲಾ ಭಾಷೆಯೂ ತನ್ನ ಪ್ರಾರಂಭಿಕ ಹಂತದಲ್ಲಿ ಮೌಖಿಕವಾಗಿಯೇ ಇತ್ತು. ಲಿಪಿಯ ಮೂಲಕ ಅದಕ್ಕೆ ಒಂದು ಖಚಿತ ರೂಪ ದೊರಕಿದ್ದು ಆ ಮೇಲಿನ ಹಂತದಲ್ಲಿ ಪ್ರಾಯಶಃ ಸಾಕಷ್ಟು ತಡವಾಗಿ, ಒಬ್ಬನು ಕಣ್ಣೆದುರು ನಿಂತಿರುವ ಇನ್ನೊಬ್ಬನಿಗೆ ಧ್ವನಿಸಂಕೇತಗಳ ಮೂಲಕ ಹೇಳುವುದು ಮೌಖಿಕ ವಿರುವುದು ಗೊತ್ತಾಗುತ್ತದೆ. ಆದರೆ, ಇದರಲ್ಲಿಯೇ ಒಂದು ವಿರೋಧ.

ಹೀಗೆ, ಮೌಖಿಕ ರೂಪದಲ್ಲಿಯೇ ಮೌಖಿಕ ರೂಪಗಳ ನಿರಾಕರಣೆಯೂ ಇರುವುದನ್ನು ಕಾಣುತ್ತೇವೆ.

ಭಾಷೆಯು ಮೌಖಿಕವಾಗಿಯೇ ಹೇಗೆ ಪ್ರಾರಂಭವಾಯ್ತು ಅನ್ನುವುದು ಹಾಗೆ, ಅದು ಮೌಖಿಕಕ್ಕೆ ಪ್ರತಿಯಾಗಿ, ಮೌಖಿಕವನ್ನು ಮೀರಲಿಕ್ಕೆ, ಅದನ್ನು ಅಲ್ಲಗಳೆಯುವುದಕ್ಕೆ ಬಳಕೆಯಾಯ್ತು ಅನ್ನುವುದೂ ಗಮನಾರ್ಹ ವಿಚಾರ.

ಹಾಗೆ ನೋಡಿದರೆ ಇಡೀ ಕನ್ನಡ ಕಾವ್ಯಪರಂಪರೆಯು ಉದ್ದಕ್ಕೂ ಸತತವಾಗಿ ಮೌಖಿಕ ಹಾಗೂ ಲಿಖಿತ ಗುಣಗಳ ಅಥವಾ ಆಪ್ತತೆಯ ಗುಣ ಹಾಗೂ ವ್ಯಾಪಕತೆಯ ಗುಣಗಳ ವೈರುಧ್ಯವನ್ನು ಗ್ರಹಿಸಿ ಈ ದ್ವಂದ್ವಗಳ ನಡುವೆ ಹೊಸದನ್ನು ಸೃಷ್ಟಿಸಿಕೊಳ್ಳಲು ಹೆಣಗುತ್ತಬಂದಿದೆ. ದೇಸೀ ಮತ್ತು ಮಾರ್ಗ, ವರ್ಣಕ ಮತ್ತು ವಸ್ತುಕ ಎನ್ನುವಂಥ ದ್ವಂದ್ವಗಳ ಮಾತು ನಮ್ಮ ಕವಿಗಳಲ್ಲಿ ಮತ್ತೆ ಮತ್ತೆ ಚರ್ಚೆಗೆ ಬಂದಿರುವುದನ್ನು ನೋಡಬಹುದು. ಈ ಮಾತುಗಳು ಬಹುಮಟ್ಟಿಗೆ ಮೌಖಿಕ ಲಿಖಿತವೆಂಬ ದ್ವಂದ್ವಗಳನ್ನೇ ಸೂಚಿಸುತ್ತವೆ.

ಕನ್ನಡ ಸಾಹಿತ್ಯವು ಹೀಗೆ ಮೌಖಿಕ ಲಿಖಿತಗಳ ಮುಖಾಮುಖಿಯಲ್ಲಿ ಒಂದು ಸತ್ವಯುತ ಪರಂಪರೆಯಾಗಿ ಬೆಳೆದುಬಂದಿದೆ. ಆದರೆ ಇದು ಒಂದು ಸಂಪೂರ್ಣ ಪರಂಪರೆ ಎಂಬುದು ನಿಸ್ಸಂಶಯವಾದ ವಿಚಾರ. ಇತಿಹಾಸವು ಸಂಪೂರ್ಣವಾಗಿ ಕಾಲದ ಮೇಲೆ ಅವಲಂಬಿತವಾಗಿದ್ದರೆ ಜನಪದ ಸಾಹಿತ್ಯ ಸಂಪೂರ್ಣವಾಗಿ ಕಾಲಾತೀತವಾದದ್ದು. ಹೀಗಾಗಿ ಗೀತೆಗಳಲ್ಲಿ ನಿರೂಪಿತವಾಗುವ ವಸ್ತು ಯಾವುದೋ ಒಂದು ಕಾಲದಲ್ಲಿ ನಡೆದದ್ದು ಎಂದು ಗೊತ್ತಾಗುವುದಿಲ್ಲ. ಉದಾಹರಣೆಗೆ ಇತಿಹಾಸದಲ್ಲಿ ಬರುವ 'ಮಾಗಡಿ ಕೆಂಪೇಗೌಡ,' 'ಕಿತ್ತೂರ ಚೆನ್ನಮ್ಮ,' 'ಸಂಗೊಳ್ಳಿರಾಯಣ್ಣ,' 'ಮದಕರಿನಾಯಕ' - ಮೊದಲಾದವರ ಜೀವನದ ಕೆಲವು ನೋಟಗಳನ್ನು ಜನಪದ ಸಾಹಿತ್ಯ ಒದಗಿಸುತ್ತದೆಯೇ ಹೊರತು, ಅವರ ಕಾಲಮಾನ, ವಿವರಪೂರ್ಣವಾದ ಅವರ ನಡವಳಿಕೆ ಇತ್ಯಾದಿಗಳನ್ನು ವಿವರಿಸುವ ಗೋಜಿಗೆ ಹೋಗುವುದಿಲ್ಲ. ಎಷ್ಟೋ ಬಾರಿ ಐತಿಹಾಸಿಕ ವ್ಯಕ್ತಿಗಳ ಬದುಕಿನ ವಿವರಗಳು ಪೀಳಿಗೆಯಿಂದ ಪೀಳಿಗೆಗೆ ಸಾಗಿ ಬರುವಾಗ ಅದರೊಳಗೆ ಉತ್ಪ್ರೇಕ್ಷೆಯೂ ತುಂಬಿಕೊಂಡು ಮೂಲವ್ಯಕ್ತಿಯ ಸ್ವಭಾವವನ್ನು ಅದು ತಿರುವು ಮುರುವು ಮಾಡುವ ಸಾಧ್ಯತೆಯೂ ಇರುತ್ತದೆ. ಈ ಕಾರಣದಿಂದಾಗಿ ಜನಪದಗೀತೆಗಳಲ್ಲಿ ಬರುವ ಐತಿಹಾಸಿಕ ವ್ಯಕ್ತಿಗಳು ನಿಜವೇ ಹೊರತು ಅಲ್ಲಿ ವರ್ಣಿತವಾಗಿರುವ ವ್ಯಕ್ತಿಯ ಬದುಕಿನ ಒಳನೋಟಗಳ ವರ್ಣನೆಗಳು ತುಂಬಾ ರಂಜನೀಯವಾಗಿರುತ್ತವೆ. ತಾವು ಇಷ್ಟಪಡುವ ವ್ಯಕ್ತಿಯ ವಿಚಾರದಲ್ಲಿ ಭಾವುಕರಾಗುವ ಜನಪದರು ಅವನ ವಿಚಾರದಲ್ಲಿ ತಮಗೆ ಬೇಕೆನಿಸಿದ್ದನ್ನೆಲ್ಲ ತುಂಬಿ ತಮ್ಮ ತೃಪ್ತಿಗೋಸ್ಕರ ನಿಜವಾಗಿಯೂ ನಡೆದಿರದ ಅನೇಕ ವಿವರಗಳನ್ನು ಸೇರಿಸಿಬಿಡಬಹುದು. ಈ ಕಾರಣಗಳಿಂದ ಮಾನವನ ಬದುಕಿನ ಕತೆಯನ್ನೇ ಭಾವನಾತ್ಮಕವಾಗಿ ಸೆರೆಹಿಡಿಯುವ ಜನಪದಗೀತೆಗಳಲ್ಲಿಯ ವಿವರವು ಇತಿಹಾಸದ ಅಧ್ಯಯನಕ್ಕೆ ಪೂರಕ ಸಾಮಗ್ರಿಯಾಗಬಹುದೇ ಹೊರತು ತಾನೇ ಇತಿಹಾಸವಾಗಲಾರದು. ಇದನ್ನು ಅನೇಕ ಉದಾಹರಣೆಗಳ ಮೂಲಕ ಕಾಣಬಹುದು.

ಈ ಚಾರಿತ್ರಿಕ ಘಟನೆಯನ್ನು ಮೂಲವಾಗಿಸಿಕೊಂಡ ಜನಪದರು ಇವುಗಳನ್ನು ದುರಂತ ಕಾವ್ಯಗಳನ್ನಾಗಿ ರೂಪಿಸುತ್ತಾರೆ. ಐತಿಹಾಸಿಕ ಘಟನೆಯೊಂದಕ್ಕೆ ಕಲಾತ್ಮಕ ಪರಿಧಿಯನ್ನು ಹಾಕಿರುವ ರೀತಿಯಿಂದಲೂ ಈ ಕಾವ್ಯಗಳು ಗಮನಾರ್ಹವಾಗಿರುವುದು ಕಂಡುಬರುತ್ತದೆ. ಅದೇನೇ ಇರಲಿ ನಾಯಕ ಪ್ರತಿನಾಯಕರುಗಳು ಆಯಾ ಸ್ಥಳಗಳ ಸಾಂಸ್ಕೃತಿಕ ಲಕ್ಷಣಗಳನ್ನು ಬಿಂಬಿಸುವವರಾಗಿ ಕಂಡುಬರುತ್ತಾರೆ. ತಮ್ಮ ಧ್ಯೇಯೋದ್ದೇಶಗಳನ್ನು ಚರಿತ್ರೆಯಲ್ಲಿ ದಾಖಲಿಸುತ್ತಾ ಹೋಗುತ್ತಾರೆ.

ಇದುವರೆಗೆ ದೊರೆತಿರುವ ಜನಪದ ಚಾರಿತ್ರಿಕ ಕಾವ್ಯಗಳನ್ನು ಗಮನಿಸಿದರೆ, ಬಹುಪಾಲು ಗೀತೆಗಳು ಚಿಕ್ಕಪುಟ್ಟ ಪಾಳೆಯಗಾರರಿಗೆ ಸಂಬಂಧಿಸಿದವುಗಳಾಗಿವೆ. ಇದಕ್ಕೆ ಬಹು ಮುಖ್ಯ ಕಾರಣ, ರಾಜರು ಹಾಗೂ ಚಕ್ರವರ್ತಿಗಳು ಜನಸಾಮಾನ್ಯರ ಮೇಲೆ ಹೇಳಿಕೊಳ್ಳುವಂತಹ ಪ್ರಭಾವವನ್ನು ಬೀರಿದವರಲ್ಲ. ಅವರ ಬದುಕಿಗೆ ಹತ್ತಿರವಾದವರಲ್ಲ. ಆದರೆ ಅಲ್ಲಲ್ಲಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿ, ಆಡಳಿತ ನಡೆಸಿದ ಪಾಳೆಯಗಾರರು ಮಾತ್ರ ಜನಸಾಮಾನ್ಯರಿಗೆ ತೀರಾ ಹತ್ತಿರದವರಾಗಿ ಚಿತ್ರಿತರಾಗಿದ್ದಾರೆ.

ಇದುವರೆಗಿನ ಎಲ್ಲ ಜನಪದ ಚಾರಿತ್ರಿಕ ಕಾವ್ಯಗಳನ್ನು ಗಮನಿಸಿದರೆ ವಿದ್ವಾಂಸರು ಅಸಮಗ್ರ ಐತಿಹಾಸಿಕ ಕಾವ್ಯಗಳು ಮತ್ತು ಅಸ್ಪಷ್ಟ ಐತಿಹಾಸಿಕ ಕಾವ್ಯಗಳು ಎಂದು ವಿಂಗಡಿಸಿದ್ದಾರೆ. ಕಾವ್ಯಗಳಲ್ಲಿ ಬಹುಪಾಲು ಪೂರ್ಣವಾಗಿ ದೊರಕದೆ ಅಸ್ತವ್ಯಸ್ತವಾದ ಪದ್ಯ ಇಲ್ಲವೆ ಗದ್ಯ ರಚನೆಯಿಂದ ಕೂಡಿರುವಂತಹವು ಅಸಮಗ್ರ ಐತಿಹಾಸಿಕ ಕಾವ್ಯಗಳು ಬೇರೆ ಬೇರೆ ಪ್ರದೇಶಗಳಲ್ಲಿ ಭಿನ್ನ ಭಿನ್ನ ಪಾಠಾಂತರಗಳು ದೊರಕಿದರೂ ಅವುಗಳ ಕಥಾರೂಪ ಮತ್ತು ಆಶಯಗಳಲ್ಲಿ ಏಕರೂಪತೆ ಇರುವುದನ್ನು ಕೆಲವು ಕಾವ್ಯಗಳಲ್ಲಿ ಗುರುತಿಸಿದರೆ; ಹೆಸರುಗಳನ್ನು ಬಿಟ್ಟರೆ ಚಾರಿತ್ರಿಕವೆನ್ನಬಹುದಾದ ಯಾವುದೇ ವಿವರಗಳು ದೊರಕದಿರುವುದನ್ನೂ ಕೆಲವು ಕಾವ್ಯಗಳಲ್ಲಿ ಕಾಣುತ್ತೇವೆ. ಅಲ್ಲದೆ, ಕೊನೆಯ ಭಾಗದ ಕಾವ್ಯಗಳಲ್ಲಿ ಕಟ್ಟುಕತೆಗಳ ಆಶಯವೂ ಅಧಿಕವಾಗಿ ಕಂಡುಬರುತ್ತದೆ. ಚಾರಿತ್ರಿಕವೆಂದು ಗುರುತಿಸಬಹುದಾದ ಹಲವಾರು ಕಾವ್ಯಗಳು ಈಗಾಗಲೇ ಕಣ್ಮರೆಯಾಗಿವೆ. ಟಿಪ್ಪು ಸುಲ್ತಾನ್ ಲಾವಣಿ, ನಾಡಪದಗಳು ಅಂತಹವುಗಳಲ್ಲಿ ಒಂದು.

* * *

## ಆಕರಗ್ರಂಥ


೦೧. ಅರವಿಂದ ಮಾಲಗತ್ತಿ (ಸಂ), ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

೦೨. ಅಂಬಳಿಕೆ ಹಿರಿಯಣ್ಣ, ಸೈದ್ಧಾಂತಿಕ ಜಾನಪದ, ಪ್ರಜ್ವಲ ಪ್ರಕಾಶನ, ಮೈಸೂರು, ೧೯೯೨

೦೩. ಕೀರ್ತಿನಾಥ ಕುರ್ತುಕೋಟಿ, ಕನ್ನಡ ಸಾಹಿತ್ಯ ಸಂಗಾತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೦೪. ಕೇಶವ ಶರ್ಮ ಕೆ, ಶಬ್ದರೇಖೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೮

೦೫. ಕೋಸಾಂಬಿ ಡಿ.ಡಿ, ವೇಣುಗೋಪಾಲ ಟಿ.ಎಸ್, ಶೈಲಜಾ (ಅನು), ಪುರಾಣ ಮತ್ತು ವಾಸ್ತವ, ಚಿಂತನ ಪ್ರಕಾಶನ, ಶಿರಸಿ, ಉತ್ತರ ಕನ್ನಡ, ೨೦೦೩

೦೬. ಕೃಷ್ಣಮೂರ್ತಿ ಅಗ್ರಹಾರ, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೮, ೨೦೦೨

೦೭. ಖಂಡೋಬಾ ಪಿ.ಕೆ, ಜಾನಪದ ಮುನ್ನೋಟ, ಸಂಗೀತ ಪಬ್ಲಿಕೇಷನ್ಸ್, ಗುಲ್ಬರ್ಗಾ, ೧೯೯೩

೦೮. ಗದ್ದಗಿಮಠ ಬಿ.ಎಸ್, ಕನ್ನಡ ಜಾನಪದ ಗೀತೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೯

೦೯. ಗೋಪಾಲ ಬಾ.ರಾ, ಇತಿಹಾಸ ಶಾಸ್ತ್ರ ಮತ್ತು ಸಿದ್ಧಾಂತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು -೦೬, ೧೯೯೬

೧೦. ಗೋಪಾಲ್‌ರಾವ್ ಎಚ್.ಎಸ್, ಇತಿಹಾಸ ಅಧ್ಯಯನ: ಅಂದು-ಇಂದು, ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೦೧, ೧೯೯೭

೧೧. ಚಂದ್ರಶೇಖರ್ ಎಸ್ (ಮೂಲ), ನಾಗಣ್ಣ ಸಿ (ಅನು), ದಕ್ಷಿಣ ಭಾರತ ವಸಾಹತುಷಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೦

೧೨. ಚಿದಾನಂದ ಮೂರ್ತಿ ಎಂ, ಜನ-ಜನಪದ-ಜಾನಪ, ಸಪ್ನ ಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು, ೦೯, ೨೦೦೩

೧೩. ಜವರೇಗೌಡ ದೇ, ಜಾನಪದ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮, ೨೦೦೧

೧೪. ಜೀ.ಶಂ.ಪ ಮತ್ತು ವಿಲಿಯಂ ಮಾಡ್ತ (ಸಂ), ಕರ್ನಾಟಕ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೮೯

೧೫. ತಪಸ್ವಿಕುಮಾರ್ ನಂ, ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ, ಕನ್ನಡ ಸಾಹಿತ್ಯ, ಪರಿಷತ್ತು, ಬೆಂಗಳೂರು-೧೮, ೧೯೯೯

೧೬. ತಿಪ್ಪೇಸ್ವಾಮಿ ಜಿ.ಆರ್, ಮೌಖಿಕ ಕಥನ, ವಿಜಯಲಕ್ಷ್ಮಿ ಪ್ರಕಾಶನ, ೬೫, ೭ ಕೂಗು ಒಂದೆ ರಸ್ತೆ, ಇ ಮತ್ತು ಎಫ್ ಬ್ಲಾಕ್, ಕುವೆಂಪು ನಗರ ಮೈಸೂರು-೬೨, ೨೦೦೫

೧೭. ದೇವೇಂದ್ರಕುಮಾರ್ ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ, ದುಃಖಾಂತ ನಿರೂಪಣೆ, ಕನ್ನಡ ಸಾಹಿತ್ಯ ಪರಿಷತ್, ಚಾಮರಾಜಪೇಟೆ, ಬೆಂಗಳೂರು, ೧೯೮೫

೧೮. ನಾಗರಾಜ್ ಡಿ.ಆರ್, ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೨೦೦೨

೧೯. ನಾಗರಾಜ್ ಡಿ.ಆರ್, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡ, ಸಾಗರ, ೨೦೦೬

೨೦. ನಾರಾಯಣ ಕೆ.ವಿ, ಬೇರು, ಕಾಂಡ, ಚಿಗುರು, ವಿಚಾರ ವೇದಿಕೆ ಕರ್ನಾಟಕ ೪೩೬, ೧೪ ನೇ ಮುಖ್ಯರಸ್ತೆ ಲಕ್ಕಸಂದ್ರ ಬಡಾವಣೆ, ಬೆಂಗಳೂರು-೩೦, ೧೯೯೭

೨೧. ನಿಂಗಣ್ಣ ಸಣ್ಣಕ್ಕಿ, ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೮೨

೨೨. ಪಣಿರಾಜ್ ಕೆ, ಅಂಟೋನಿಯೋಗ್ರಾಮ್ಷಿ, ಅಭಿನವ ಪ್ರಕಾಶನ, ವಿಜಯನಗರ, ಬೆಂಗಳೂರು-೪೦, ೨೦೦೩

೨೩. ಪರಮಶಿವಯ್ಯ ಜಿ.ಶಂ, ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾಲ, ಮೈಸೂರು-೧೨, ೧೯೭೯

೨೪. ಪಾಟೀಲ್ ಎಂ.ಎಸ್, ಸ್ವಾಮಿರಾವ್ ಕುಲಕರ್ಣಿ, ಆಯ್ದ ವೈಚಾರಿಕ ಪ್ರಬಂಧಗಳು, ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲ, ಗುಲ್ಬರ್ಗಾ, ೨೦೦೪

೨೫. ಪ್ರಭಾಕರ್ ಎ.ಎಸ್, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೬. ಪ್ರಭಾಕರ್ ಎ.ಎಸ್, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೭. ಪುರೋಷತ್ತಮ ಬಿಳಿಮಲೆ, ಚೆಲುವರಾಜು, ಹಂಪಿ ಜಾನಪದ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೨೮. ಪುರೋಷತ್ತಮ ಬಿಳಿಮಲೆ, ಕರಾವಳಿ ಜಾನಪದ, ಮಂಗಳ ಗಂಗೋತ್ರಿ, ದಕ್ಷಿಣ ಕನ್ನಡ ಜಿಲ್ಲೆ, ೧೯೯೦

೨೯. ಪುರುಷೋತ್ತಮ ಬಿಳಿಮಲೆ, ಕೂಡುಕಟ್ಟು, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೧೯೯೭

೩೦. ಮಹೇಶ್‌ವಾಡಿ ಬಿ.ಬಿ, ಜಾನಪದ ವೀರಗೀತೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲ, ಮೈಸೂರ, ೧೯೮೭

೩೧. ಬಸವರಾಜ ಕಲ್ಗುಡಿ (ಸಂ), ಸುವರ್ಣ ವಿಚಾರ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು, ೦೨.೨೦೦೬

೩೨. ಬಸವರಾಜ ನಲ್ಲೀಸರ (ಸಂ), ಜಾನಪದ-೧೯೯೬, ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೯

೩೩. ಬಾಲಗೋಪಾಲ ಕೆ (ಮೂಲ), ಡಾ.ಶ್ರೀಮತಿ ಎಚ್.ಎಸ್ (ಅನು), ಪ್ರಾಚೀನ ಭಾರತದ ಚರಿತ್ರೆ, ಚೆಳ್ಳಿ ಚಿಕ್ಕಿ ಬುಕ್ ಟ್ರಸ್ಟ್, ಮೈಸೂರು, ೧೯೯೮

೩೪. ಬೋರಲಿಂಗಯ್ಯ ಹಿ.ಚಿ, ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ,

೩೫. ಮಹೇಶ್ವರಯ್ಯ, ಎಚ್.ಎಂ, ಕೃಷ್ಣಮೂರ್ತಿ ಹನೂರು, ಜಾನಪದ ಅಧ್ಯಯನ ಸೈದ್ಧಾಂತಿಕ ದೃಷ್ಟಿ, ದಕ್ಷಿಣ ಭಾರತೀಯ ಭಾಷೆಗಳ, ಸಂಘ, ತ್ರಿವೇಂಡ್ರಂ, ೨೦೦೪

೩೬. ಮಾಳವಾಡ ಸ.ಸ, ಹೊನ್ನ ಬಿತ್ತೇವು ಹೊಲಕೆಲ್ಲ, ಸಾಹಿತ್ಯ ಸಮಿತಿ, ತರೀಕೆರೆ, ೧೯೬೭

೩೭. ಮಿಖಾಯಲ್ ಗೊಟ್‌ಲೋಬ್ (ಮೂಲ), ಆರ್ಯ (ಅನು), ದಕ್ಷಿಣ ಏಶಿಯದಲ್ಲಿ ಇತಿಹಾಸ ಚಿಂತನೆ, ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೪

೩೮. ಮುತ್ತಯ್ಯ ಎಸ್.ಎಂ, ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೩೯. ಮೋಹನಕೃಷ್ಣರೈ ಕೆ, ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲ, ಹಂಪಿ, ವಿದ್ಯಾರಣ್ಯ, ೨೦೦೬

೪೦. ಮೋಹನ್ ಕೃಷ್ಣರೈ, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೧. ಮೋಹನ್ ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೨. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪೩. ಮೊಗಳ್ಳಿ ಗಣೇಶ್, ಸೊಲ್ಲು, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು-೦೩, ೧೯೯೮

೪೪. ಮೊಗಳ್ಳಿ ಗಣೇಶ್, ಆದಿಮ, ಸಾರಾಂಗ ಪ್ರಕಾಶನ, ತಿಪಟೂರು, ೨೦೦೫

೪೫. ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೪೬. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೩

೪೭. ರಂಗಸ್ವಾಮಿ ಅರ್ಚಕ ಬಿ, ಹಳ್ಳಿಯ ಹಾಡು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧

೪೮. ರಾಜಾರಾಮ ಹೆಗಡೆ (ಸಂ), ಭಾರತೀಯ ಇತಿಹಾಸ; ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೪೯. ರಾಮಚಂದ್ರನ್ ಸಿ.ಎನ್, ಎಡ್ವರ್ಡ್ ಸೈದ್ (ಜಾಗತಿಕ ಚಿಂತಕರ ಮಾಲೆ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೫೦. ರಾಮಚಂದ್ರನ್ ಸಿ.ಎನ್, ಪರಂಪರೆ ಪ್ರತಿರೋಧ, ಸಂವಾದ ಮಲ್ಲಾಡಿಹಳ್ಳಿ, ೨೦೦೨

೫೧. ರಾಘುವೇಂದ್ರರಾವ್ ಎಚ್.ಎಸ್, ಸಾಹಿತ್ಯ ಸಂವಾದ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೫

೫೨. ರಾಜೇಗೌಡ ಹ.ಕ, ಜಾನಪದ ಶೋಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲ, ಹಂಪಿ, ವಿದ್ಯಾರಣ್ಯ, ೨೦೦೭

೫೩. ರಾಜೇಂದ್ರ ಡಿ.ಕೆ, ಜಾನಪದ ಶಿಷ್ಟಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೫೪. ರಾಜಶೇಖರ ಪಿ,ಕೆ, ಜನಪದ ಮಹಾಭಾರತ, ಹೊನ್ನಾರು ಜಾನಪದ ಗಾಯಕರು, ಮಾನಸ ಗಂಗೋತ್ರಿ, ಮೈಸೂರು, ೨೦೦೪

೫೫. ರಾಮಣ್ಣ ಕ್ಯಾತನಹಳ್ಳಿ, ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೯೧

೫೬. ರೋಮಿಲಾ ಥಾಪರ್, ಕೋಮುವಾದ ಹಾಗೂ ಭಾರತೀಯ, ಇತಿಹಾಸ ಲೇಖನ

೫೭. ಲಕ್ಷ್ಮಣ್ ತೆಲಗಾವಿ (ಸಂ), ಸ್ಥಳೀಯ ಚರಿತ್ರೆ, ಅಧ್ಯಯನ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೫೮. ಲಕ್ಷ್ಮಣ್ ತೆಲಗಾವಿ (ಸಂ), ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ ಹಿರಿಯೂರು, ಚಿತ್ರದುರ್ಗ, ೧೯೮೨

೫೯. ಲಿಂಗಯ್ಯ, ಕರ್ನಾಟಕ ಜನಪದ ಕಾವ್ಯಗಳು, ದಿನಕರ ಪ್ರಕಾಶನ, ಬೆಂಗಳೂರು, ೧೯೭೬

೬೦. ವಸು, ಮೌಖಿಕ ಇತಿಹಾಸ, ಅಂಕಿತ ಪುಸ್ತಕ ಪ್ರಕಾಶನ, ೫೩, ಶ್ಯಾಮಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು-೦೪, ೨೦೦೪

೬೧. ವೀರಣ್ಣದಂಡೆ, ದೇಸೀದೃಷ್ಟಿ, ಕವಿಮಾರ್ಗ ಪ್ರಕಾಶನ, ಕಲ್ಬುರ್ಗಿ, ೨೦೦೧

೬೨. ವಿಜಯ್ ಪೂಣಚ್ಚ ತಂಬಂಡ, ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೬೩. ವಿಜಯ್ ಪೂಣಚ್ಚ ತಂಬಂಡ, ಚರಿತ್ರೆ ವಿಶ್ವಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೬೪. ವಿರೂಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ಚೆನ್ನ ಹಗರಿ ಪ್ರಕಾಶನ, ಪೂಜಾರಹಳ್ಳಿ, ೨೦೦೭

೬೫. ವಿವೇಕ ರೈ ಬಿ.ಎ, ಆನ್ವಯಿಕ ಜಾನಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೫

೬೬. ವಿವಿಧ ಲೇಖಕರು, ಸಂಸ್ಕೃತಿಯ ಸ್ಥಿತ್ಯಂತರ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨

೬೭. ವೆಂಕಟೇಶ್ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾ-ಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೬೮. ಶರ್ಮ ಆರ್.ಎಸ್, ಪ್ರಾಚೀನ ಭಾರತ, ನವಕರ್ನಾಟಕ ಪ್ರಕಾಶನ, ಬೆಂಗಳೂರು-೦೧, ೨೦೦೨

೬೯. ಶರ್ಮ ಆರ್.ಎಸ್, ಪ್ರಾಚೀನ ಭಾರತದಲ್ಲಿ ಶೂದ್ರರು, ನವಕರ್ನಾಟಕ ಪ್ರಕಾಶನ, ಬೆಂಗಳೂರು-೦೧, ೨೦೦೬

೭೦. ಶ್ರೀಕಂಠ ಕೂಡಿಗೆ (ಸಂ), ಜಾನಪದದ ವಿವಿಧ ಮುಖಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ, ಅಕಾಡೆಮಿ, ಬೆಂಗಳೂರು-೦೨

೭೧. ಶ್ರೀನಿವಾಸ ಶೂದ್ರ, ಕುವೆಂಪು ಒಂದು ಸಾಂಸ್ಕೃತಿಕ ನೆನಪು, ಶೂದ್ರ ಪ್ರಕಾಶನ, ಬೆಂಗಳೂರು

೭೨. ಶಿವನಾಂದ ಗುಬ್ಬಣ್ಣವರ, ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ, ಅಕ್ಷಯ ಪ್ರಕಾಶನ, ಧಾರವಾಡ, ೧೯೯೧

೭೩. ಶ್ರೀಪಾದ ಅಮೃತ ಡಾಂಗೆ (ಮೂಲ), ಅನಂತಕೃಷ್ಣ ಹೆಬ್ಬಾರ ಎಂ, ರಾಮಚಂದ್ರ ಉಡುಪ (ಅನು), ಭಾರತ ಸಂಘ ಜೀವನದಿಂದ ಗುಲಾಮಗಿರಿಗೆ, ಅಭಿವ್ಯಕ್ತ ಪ್ರಕಾಶನ, ಫಾಲೆಮಾ ಗಾರ್ಡನ್ಸ್, ವೆಲೆನ್ಸಿಯಾ, ಮಂಗಳೂರು

೭೪. ಶಿವಪ್ರಕಾಶ ಎಚ್.ಎಸ್, ಮಹಾಚೈತ್ರ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೨

೭೫. ಶಿವಾರೆಡ್ಡಿ ಕೆ.ಸಿ, ಶಿವರಾಮ ಪಡಿಕ್ಕಲ್, ನಾಡು-ನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ, ೨೦೦೭

೭೬. ಶಿವಾರೆಡ್ಡಿ ಕೆ.ಸಿ, ಕನ್ನಡದ ಹಾಡುಪಾಡು, ಅಧ್ಯಯನ ಮಂಡಲ, ಬೆಂಗಳೂರು, ೨೦೦೩

೭೭. ಸುಬ್ಬಣ್ಣ ಕೆ.ವಿ, ಕವಿರಾಜ ಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ, ೨೦೦೦

೭೮. ಸುಂದರಂ ಆರ್ವಿಯಸ್, ದೇಶಿ-ದೇಶೀಯತೆ-ದೇಶಿವಾದ, ರಜತೋತ್ಸವ ದತ್ತಿ ಸಮಿತಿ, ಅರಕಲಗೂಡುವರದ ರಾಜುಲು ಕಾಂತಮ್ಮ, ಮಹಿಳಾ ಕಾಲೇಜ್ ಹಾಸನ, ೨೦೦೩

೭೯. ಸೈದಾಪೂರ ವಾಯ್ ಎಫ್, ಉತ್ತರ ಕರ್ನಾಟಕದ ಜನಪದ ವೀರ ಗೀತೆಗಳು, ಸೃಜನಶೀಲ ಪ್ರಕಾಶನ, ಹಾಸನ, ೨೦೦೩

೮೦. ಹಿರೇಮಠ ಆರ್.ಸಿ (ಸಂ), ಜಾನಪದ ಸಾಹಿತ್ಯದ ದರ್ಶನ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪

1. Birendranath Datta, "Folklore and Historiography", National Folklore, Support Centre, Rajalakshmi Nagar, Velacery Chennai-42, 2002

2. Colling wood R.G, "The Idea of History", Oxford University Press, New Delhi, 01, 1994

3. David K Dunaway Willa K Baum(Edi), "Oral History", A Division of Sage, Publication, New Delhi, 1996

4. Jawaharlal Handoo, Anna Leena Siikala, "Folklore and Discourse", Zoori Publications, Kuvempu Nagar, Mysore -23, 1999

5. Jawaharlal Handoo, Reimund Kvideland (Edi), "Folklore New Perspectives", Zoori Publications, Kuvempu Nagar, Mysore -23, 1999

6. Jawaharlal Handoo, "Folklore in Modern India", Central Institute of Indian Languages, Mysore, 1998

7. Muthu Kumar Swamy M.D (Edi), "Viocing Folklore", A Collection of Interviews National Folklore Support Centre, Chennai-42, 2002

8. Richard M. Dorson (Edi), "Folklore and Folk life", University of Chicago Press Chicago and londou, 1972

9. Stephen Fuchs, "At the Bottom of Indian Society", Munshiram Manoharlal Publishess put Ltd, 1981

10. Stuart. H. Blackburn and Ramanujan A.K (Edi), "Another Harmany", Oxford University Press, New Delhi-01, 1986

11. Sumit Sarkar, "Writing Social History", Oxford University Press, New Delhi-01m 1997

